# ಗಾಂಧೀಜಿಯವರ ಆತ್ಮಕಥೆ

ಅ ಥ ವಾ

# ಸ ತ್ಯ ಶೋ ಧ ನೆ

(ಮೊದಲನೆಯ ಭಾಗ)

ವಿಶ್ವಕರ್ಣಾಟಕ

ಪುಸ್ತಕ ಪ್ರಕಟನಾಲಯ

ಬೆಂಗಳೂರು ನಗರ

೧೯೨೮

# ವಿಷಯಸೂಚಿಕೆ

# ಪೀಠಿಕೆ

---

ನಾಲ್ಕೈದು ವರ್ಷಗಳಹಿಂದೆ ನನ್ನ ಜೊತೆಯಲ್ಲಿ ಕೆಲಸಮಾಡುವ ಕೆಲವು ಅತ್ಯಂತ ಆಪ್ತರ ಇಷ್ಟದಂತೆ ನನ್ನ ಆತ್ಮಕಥೆಯನ್ನು ಬರೆಯಲು ಒಪ್ಪಿದೆನು. ಆ ಕೆಲಸವನ್ನು ಮೊದಲುಮಾಡಿ ಮೊದಲನೆಯ ಹಾಳೆಯನ್ನು ತಿರುಗಿಸಿದೆನೋ ಇಲ್ಲವೋ ಎನ್ನುವಷ್ಟರಲ್ಲಿಯೇ ಮುಂಬಯಿಯಲ್ಲಿ ಮಾರಾಮಾರಿ ಪ್ರಾರಂಭವಾದುದರಿಂದ ಆ ಕೆಲಸವು ನಿಂತು ಹೋಯಿತು. ಇದಾದಮೇಲೆ ಸಂಭವಿಸಿದ ಘಟನೆಗಳು ನನ್ನ ಯರವಾಡಾ ಕಾರಾಗೃಹವಾಸದಲ್ಲಿ ಕೊನೆಗಂಡವು. ಅಲ್ಲಿ ನನ್ನ ಜೊತೆಯ ಬಂದಿಗಳಲ್ಲಿ ಒಬ್ಬರಾಗಿದ್ದ ಶ್ರೀ. ಜಯರಾಮದಾಸರು ನಾನು ಉಳಿದುದನ್ನೆಲ್ಲಾ ಒಂದುಕಡೆಯಿಟ್ಟು ಆತ್ಮಕಥೆಯನ್ನು ಬರೆದು ಮುಗಿಸಬೇಕೆಂದು ನನಗೆ ಹೇಳಿದರು. ಅದಕ್ಕೆ ನಾನು ಆಗಲೇ ಒಂದು ಅಭ್ಯಾಸಕ್ರಮವನ್ನು ನಿಶ್ಚಯಿಸಿದ್ದೇನೆಂದೂ ಅದನ್ನು ಮುಗಿಸುವವರೆಗೂ ಇನ್ನಾವಕಡೆಗೂ ಲಕ್ಷ್ಯಕೊಡುವುದಿಲ್ಲವೆಂದೂ ಉತ್ತರಹೇಳಿ ಕಳುಹಿಸಿದೆನು. ಗಡುವಿನ ಕೊನೆಯವರೆಗೂ ನಾನು ಯರವಾಡದಲ್ಲಿದ್ದಿದ್ದರೆ ನನ್ನ ಆತ್ಮಕಥೆಯನ್ನು ಅವಶ್ಯವಾಗಿ ಮುಗಿಸುತ್ತಿದ್ದೆನು. ಏಕೆಂದರೆ, ಇದನ್ನು ಪ್ರಾರಂಭಮಾಡುವ ಕಾಲವು ಬರುವುದಕ್ಕೆ ಒಂದು ವರ್ಷ ಮುಂಚೆಯೇ ನನ್ನನ್ನು ಬಿಡುಗಡೆಮಾಡಿದರು. ಸ್ವಾಮಿ ಆನಂದರು ಈ ವಿಚಾರವನ್ನು ಪುನಃ ಎತ್ತಿದ್ದಾರೆ. ನಾನು ಆಗಲೇ ದಕ್ಷಿಣ ಆಫ್ರಿಕದ ಸತ್ಯಾಗ್ರಹದ ಇತಿಹಾಸವನ್ನು ಮುಗಿಸಿರುವುದರಿಂದ ನನ್ನ ಜೀವನಚರಿತ್ರೆಯನ್ನು "ನವಜೀವನ" ಕ್ಕಾಗಿ ಬರೆಯಲು ಒಪ್ಪಿಕೊಳ್ಳಬೇಕೆಂದೆನಿಸುತ್ತದೆ. ಸ್ವಾಮೀಜಿಯವರು ಪುಸ್ತಕರೂಪದಲ್ಲಿ ಪ್ರತ್ಯೇಕವಾಗಿ ಪ್ರಕಾಶಗೊಳಿಸುವುದಕ್ಕಾಗಿ ನಾನು ಅದನ್ನು ಬರೆಯಬೇಕೆಂದು ಇಚ್ಛಿಸಿದರು. ಆದರೆ ಹಾಗೆಮಾಡುವುದಕ್ಕೆ ನನಗೆ ಬಿಡುವಿಲ್ಲ. ವಾರಕ್ಕೊಂದು ಪ್ರಕರಣದಂತೆ ಮಾತ್ರ ಬರೆಯಬಲ್ಲೆನು. "ನವಜೀವನ"ಕ್ಕೆ ಪ್ರತಿವಾರವೂ ಏನನ್ನಾ

ದರೂ ಬರೆಯಬೇಕು. ಅದು ಆತ್ಮಕಥೆಯೇ ಆಗಬಾರದೇಕೆ? ಸ್ವಾಮಿಜಿಯವರು ಈ ಸೂಚನೆಗೆ ಒಪ್ಪಿದರು. ಆದುದರಿಂದ ಇದೋ ನಾನು ಶ್ರಮವಹಿಸಿ ಬರೆಯುತ್ತಿದ್ದೇನೆ.

ಆದರೆ ದೇವರಲ್ಲಿ ಭಯಭಕ್ತಿಯುಳ್ಳ ನನ್ನ ಗೆಳೆಯರೊಬ್ಬರು ನಾನು ಸೋಮವಾರದದಿನ ಮೌನದಿಂದಿರುವಾಗ ಈ ವಿಚಾರದಲ್ಲಿ ಅವರ ಸಂಶಯಗಳನ್ನು ಹೀಗೆ ವ್ಯಕ್ತಪಡಿಸಿದರು—

“ಈ ಸಾಹಸದಲ್ಲಿ ಏಕೆ ತೊಡಗಿರುವಿರಿ? ಈ ಅಭ್ಯಾಸಕ್ಕೆ ಪಡುವಲದೇಶಗಳಲ್ಲಿಮಾತ್ರ ಪ್ರಥೆಯಿದೆ. ಪಾಶ್ಚಿಮಾತ್ಯ ಸಂಸ್ಕೃತಿಯಿಂದ ಮಾರ್ಪಡದ ಯಾವ ಪೂರ್ವದೇಶಸ್ಥರೂ ಆತ್ಮಕಥೆಯನ್ನು ಬರೆದುದು ನನಗೆ ತಿಳಿಯದು. ಮತ್ತು ಏನನ್ನು ಬರೆಯುವಿರಿ? ಇಂದು ಸಿದ್ಧಾಂತವೆಂದು ನಂಬಿರುವುದನ್ನು ನಾಳೆ ತ್ಯಜಿಸಿದರೆನ್ನಿರಿ? ಅಥವಾ ಇಂದಿನ ಉದ್ದೇಶಗಳನ್ನು ನಾಳೆ ಬದಲಾಯಿಸಿದರೆನ್ನಿರಿ? ನೀವು ನುಡಿದ ಮತ್ತು ಬರೆದ ಮಾತನ್ನೇ ಪ್ರಮಾಣವಾಗಿಟ್ಟುಕೊಂಡು ಅದಕ್ಕೆ ತಕ್ಕಂತೆ ನಡೆಯುವ ಬಹುಮಂದಿಯನ್ನು ದಾರಿತಪ್ಪಿಸಿದಂತಾಗುವುದಿಲ್ಲವೆ? ಆತ್ಮಕಥೆಯನ್ನು ಬರೆಯುವ ವಿಚಾರವನ್ನು ಸದ್ಯಕ್ಕಾದರೂ—ಅಥವಾ ಸಂಪೂರ್ಣವಾಗಿಯೇ—ಬಿಟ್ಟುಬಿಡುವುದು ಯುಕ್ತವಲ್ಲವೆ?”

ಈ ತರ್ಕವು ನನ್ನ ಮನಸ್ಸನ್ನು ತಟ್ಟಿತು. ನನ್ನ ಜೀವನದ ಘಟನೆಗಳನ್ನು ತಿಳಿಸಬೇಕೆಂಬುದೇ ನನ್ನ ಉದ್ದೇಶವಲ್ಲ. ಸತ್ಯದ ವಿಷಯದಲ್ಲಿ ನಾನು ಮಾಡಿದ ಅನೇಕ ಸಾಧನೆಗಳ ಕತೆಯನ್ನು ಹೇಳಬೇಕೆಂಬುದು ಮಾತ್ರ ನನ್ನ ಆಶಯ; ಮತ್ತು ನನ್ನ ಜೀವಿತವು ಈ ಸಾಧನೆಗಳಿಂದ ಬೇರೆಯಲ್ಲದುದರಿಂದ ಈ ಕತೆಯು ಜೀವನಚರಿತ್ರೆಯ ರೂಪವನ್ನು ಹೊಂದುವುದೇನೋ ನಿಜ. ಇದರ ಪ್ರತಿಯೊಂದು ಪುಟವೂ ಈ ಸಾಧನೆಗಳ ವಿಚಾರವನ್ನುಮಾತ್ರ ತಿಳಿಸಿದರೆ ಸಾಕು. ಇನ್ನೇನನ್ನೂ ನಾನು ಲಕ್ಷಿಸುವುದಿಲ್ಲ. ಈ ಸಾಧನೆಗಳ ವೃತ್ತಾಂತವು ಪಾಠಕರಿಗೆ ಲಾಭಪ್ರದವಾಗಿಲ್ಲದಿರದೆಂದು ನನ್ನ ನಂಬಿಕೆ. ರಾಜಕೀಯವಿಚಾರದಲ್ಲಿ ನಾನು

ಮಾಡಿದ ಪ್ರಯತ್ನಗಳು ಈ ಹೊತ್ತಿಗೆ ಹಿಂದೂಸ್ಥಾನದಲ್ಲೆಲ್ಲಾ ತಿಳಿದಿರುವುವಲ್ಲದೆ 'ನಾಗರಿಕ' ಪ್ರಪಂಚದ ಅವಗಾಹನೆಗೆ ಕೂಡ ಸಾಧಾರಣವಾಗಿ ಬಂದಿವೆ. ನನ್ನ ದೃಷ್ಟಿಯಲ್ಲಿ ಇವುಗಳಿಗೆ ಬೆಲೆ ಕಡಮೆ; ಹಾಗಿರುವಲ್ಲಿ ಇವು ನನಗೆ ಸಂಪಾದಿಸಿರುವ 'ಮಹಾತ್ಮಾ' ಎಂಬ ಬಿರುದಿಗೆ ನಾನು ಕಟ್ಟುವ ಬೆಲೆ ಇನ್ನೂ ಕಡಮೆ. ಅನೇಕವೇಳೆ ಇದರಿಂದ ನನ್ನ ಮನಸ್ಸಿಗೆ ಅತ್ಯಂತ ಯಾತನೆಯಾಗಿದೆ. ಇದರಿಂದ ನಾನು ಸ್ವಾಭಿಮಾನಪಟ್ಟುಕೊಂಡೆನೆಂದು ಹೇಳಬಹುದಾದ ಕ್ಷಣವೊಂದೂ ನನ್ನ ನೆನಪಿಗೆ ಬರುವುದಿಲ್ಲ. ಆದರೆ ನನಗೆಮಾತ್ರ ಗೊತ್ತಿರುವ ಮತ್ತು ರಾಜಕೀಯ ಕ್ಷೇತ್ರದಲ್ಲಿ ಕೆಲಸಮಾಡಲು ನನಗಿರುವಷ್ಟು ಚೈತನ್ಯವನ್ನುಕೊಟ್ಟ ಆಧ್ಯಾತ್ಮಿಕ ಸಾಧನೆಗಳನ್ನು ವರ್ಣಿಸಬೇಕೆಂಬ ಕುತೂಹಲವು ನನಗಿದೆ. ಇವು ನಿಜವಾಗಿಯೂ ಆಧ್ಯಾತ್ಮಿಕ ಸಾಧನೆಗಳಾಗಿದ್ದರೆ ಇವುಗಳಿಂದ ನನ್ನ ನಮ್ರತೆಯು ಇನ್ನೂ ಹೆಚ್ಚುತ್ತದೆಯೇ ವಿನಾ ಇವುಗಳಲ್ಲಿ ಸ್ವಪ್ರಶಂಸೆಗೆ ಎಡೆಯೇ ಇರಲಾರದು. ನನ್ನ ಹಿಂದಿನ ಜೀವನವನ್ನು ದೃಷ್ಟಿಸುತ್ತಾ ವಿಚಾರಮಾಡಿದಹಾಗೆಲ್ಲಾ ನನ್ನ ನ್ಯೂನತೆಗಳು ಹೆಚ್ಚುಹೆಚ್ಚು ಸ್ಪಷ್ಟವಾಗಿ ಕಾಣಬರುತ್ತವೆ.

ನಾನು ಲಕ್ಷ್ಯವಾಗಿಟ್ಟುಕೊಂಡಿರುವುದು—ಈಗ ಮೂವತ್ತು ವರ್ಷಗಳಿಂದ ಸಾಧಿಸಬೇಕೆಂದು ಪ್ರಯತ್ನಪಡುತ್ತಿರುವುದು—ಆತ್ಮಜ್ಞಾನ, ಈಶ್ವರಸಾಕ್ಷಾತ್ಕಾರ, ಮೋಕ್ಷ. ನಾನು ಇರುವುದು, ಚಲಿಸುವುದು, ಜೀವಿಸಿರುವುದು, ಇವೆಲ್ಲವೂ ಈ ದೃಷ್ಟಿಯಿಂದಲೇ. ನಾನು ಮಾತನಾಡುವುದು, ಬರೆಯುವುದು, ರಾಜಕೀಯ ವಿಚಾರಗಳಲ್ಲಿ ನನ್ನ ಪ್ರಯತ್ನಗಳು, ಇವೆಲ್ಲದರ ಲಕ್ಷ್ಯವೂ ಇದೇ. ಒಬ್ಬನ ಕೈಯಲ್ಲಾಗುವುದು ಎಲ್ಲರಿಗೂ ಸಾಧ್ಯವೆಂದು ನಾನು ನಿರಂತರವಾಗಿ ನಂಬಿರುವೆನಾದುದರಿಂದ ನನ್ನ ಸಾಧನೆಗಳು ಗುಪ್ತವಾಗಿ ಮಾಡಲ್ಪಡದೆ ಎಲ್ಲರಿಗೂ ಕಾಣುವಂತೆ ಮಾಡಿದವುಗಳಾಗಿವೆ. ಈ ಕಾರಣದಿಂದ ಅವುಗಳ ಆಧ್ಯಾತ್ಮಿಕತೆಗೆ ಏನೂ ಕುಂದುಬರಲಾರದೆಂದು ನಾನು ತಿಳಿಯುತ್ತೇನೆ. ಕೆಲವು ವಿಷಯಗಳು ನಮಗೂ ನಮ್ಮನ್ನು ಸೃಷ್ಟಿಸಿದಾತನಿಗೂ ಮಾತ್ರ ತಿಳಿದಿರುತ್ತವೆ. ಇವುಗ

ಳನ್ನು ಇತರರಿಗೆ ತಿಳಿಸಲು ಸಾಧ್ಯವಲ್ಲ. ನಾನು ಹೇಳಲಿರುವ ಸಾಧನೆಗಳು ಈ ತೆರನಾದುವಲ್ಲ. ಅವು ಆಧ್ಯಾತ್ಮಿಕ ಎಂದರೆ ನೈತಿಕ ವಿಚಾರಗಳಿಗೆ ಸಂಬಂಧಪಟ್ಟುವು. ಏಕೆಂದರೆ, ನೀತಿಯೇ ಧರ್ಮದ ಜೀವಾಳ.

ದೊಡ್ಡವರಂತೆಯೇ ಚಿಕ್ಕವರ ಅವಗಾಹನೆಗೂ ಸಾಧ್ಯವಾದ ಧಾರ್ಮಿಕ ವಿಚಾರಗಳುಮಾತ್ರ ಈ ವೃತ್ತಾಂತದಲ್ಲಿ ಸೇರಿಸಲ್ಪಡುತ್ತವೆ. ನಾನು ಇವನ್ನು ತಟಸ್ಥಭಾವದಿಂದಲೂ ನಿರಭಿಮಾನದಿಂದಲೂ ಬರೆಯಲು ಶಕ್ತನಾದರೆ ಇದೇರೀತಿಯಲ್ಲಿ ಸಾಧನೆಮಾಡಲಿಚ್ಛಿಸುವ ಇತರರಿಗೆ ಇದರಲ್ಲಿ ಸಹಾಯವಾಗುವ ಸಾಮಗ್ರಿಯು ದೊರಕುತ್ತದೆ ಪ್ರಯತ್ನಗಳಲ್ಲಿ ಸಂಪೂರ್ಣತೆಯ ಅಂಶವು ಎಳ್ಳಷ್ಟಾದರೂ ಇದೆಯೆಂದು ನಾನು ಹೇಳುವುದಿಲ್ಲ. ವೈಜ್ಞಾನಿಕನು ತನ್ನ ಶೋಧನೆಯನ್ನು ನಿಯಮಪೂರ್ವಕವಾಗಿ ಅತ್ಯಂತ ಎಚ್ಚರಿಕೆಯಿಂದ ಮಾಡಿದರೂ ಅದರಿಂದ ವ್ಯಕ್ತವಾದ ಅಂಶಗಳನ್ನು ಸ್ವತಸ್ಸಿದ್ಧವೆಂದು ತಿಳಿಯದೆ ಸಕಾರಣವಾಗಿ ಅಭಿಪ್ರಾಯವನ್ನು ಬದಲಾಯಿಸಲು ಸಿದ್ಧನಾಗಿರುತ್ತಾನೆ. ನನ್ನ ಪ್ರಯತ್ನಗಳ ವಿಷಯದಲ್ಲಿ ನಾನೂ ಹಾಗೆಯೇ. ನಾನು ಹೆಚ್ಚಾಗಿ ಆತ್ಮಪರಾಮರ್ಶವನ್ನು ಮಾಡಿದ್ದೇನೆ. ನನ್ನ ಮನಸ್ಸಿನಲ್ಲಿ ಮೂಡಿದ ಪ್ರತಿಯೊಂದು ಭಾವವನ್ನೂ ಪರೀಕ್ಷಿಸಿದ್ದೇನೆ. ಆದರೂಕೂಡ ಈರೀತಿಯಾಗಿ ಕಂಡುಹಿಡಿದ ಪರಿಣಾಮಗಳು ಬದಲಾವಣೆಹೊಂದುವುದಿಲ್ಲವೆಂದಾಗಲಿ ಅಥವಾ ಅವು ಸ್ವತಸ್ಸಿದ್ಧಗಳೆಂದಾಗಲಿ ನಾನು ವಾದಿಸುವುದಿಲ್ಲ. ಒಂದು ವಿಚಾರ ಮಾತ್ರ ನಾನು ಸಾಧಿಸುತ್ತೇನೆ. ಅದೇನೆಂದರೆ, ನನ್ನಮಟ್ಟಿಗೆಮಾತ್ರ ಈ ಪರಿಣಾಮಗಳು ಪೂರ್ತಿ ಸರಿಯಾದುವಾಗಿ ಕಾಣುತ್ತವೆ; ಮತ್ತು ಸದ್ಯಕ್ಕೆ ಅವು ಮಾರ್ಪಾಟಿಗೆ ಒಳಪಡುವಂತಿಲ್ಲ. ಏಕೆಂದರೆ, ಹಾಗಿಲ್ಲದಿದ್ದರೆ ಅವುಗಳ ಆಧಾರದಮೇಲೆ ಯಾವ ಕಾರ್ಯವನ್ನೂ ಮಾಡಲು ಸಾಧ್ಯವಿರುತ್ತಿರಲಿಲ್ಲ. ಆದರೆ ಹೆಜ್ಜೆಹೆಜ್ಜೆಗೂ ಇದು ಗ್ರಾಹ್ಯ, ಇದು ತ್ಯಾಜ್ಯವೆಂಬ ವಿಭಾಗವನ್ನುಮಾಡಿ ಗ್ರಾಹ್ಯವಸ್ತುವನ್ನು ಆದರಿಸಿ ಅದಕ್ಕೆ ಅನುಸಾರವಾಗಿ ಆಚರಿಸಿದ್ದೇನೆ. ಈಪ್ರಕಾರವಾಗಿ ನಿಶ್ಚಯಿಸಿದ ಆಚಾರವು ನನ್ನ ಬುದ್ಧಿಗೂ ಆತ್ಮಕ್ಕೂ ಸರಿಯಾಗಿ ತೋರಿದರೆ ಈ ಪರಿಣಾಮಗಳ ಸಂಬಂಧವಾಗಿ ನಾನು ವಿಶ್ವಾಸವನ್ನಿಟ್ಟೇ ಇಡಬೇಕು.

ನಾನು ಕೇವಲ ಸಿದ್ಧಾಂತಗಳನ್ನು ಅಥವಾ ತತ್ವಗಳನ್ನು ಚರ್ಚಿಸ ಲಿಚ್ಛೆಯುಳ್ಳವನಾಗಿದ್ದರೆ ಆತ್ಮಕಥೆಯನ್ನು ಬರೆಯುವ ಪ್ರಯತ್ನವನ್ನು ಮಾಡುತ್ತಿರಲಿಲ್ಲ. ಆದರೆ ನಾನು ಇವುಗಳನ್ನೇ ಆಧಾರವಾಗಿಟ್ಟುಕೊಂಡು ನಡೆಸಿದ ಕಾರ್ಯಗಳ ಇತಿಹಾಸವನ್ನು ಬರೆಯುವವನಾಗಿದ್ದೇನೆ. ಈ ಕಾರಣದಿಂದಲೇ ಇದಕ್ಕೆ 'ಸತ್ಯಶೋಧನೆ' ಎಂಬ ಹೆಸರನ್ನು ಕೊಟ್ಟಿದ್ದೇನೆ. ಸತ್ಯಕ್ಕೆ ಭಿನ್ನವೆಂದು ತಿಳಿಯಲ್ಪಡುವ ಅಹಿಂಸೆ, ಬ್ರಹ್ಮಚರ್ಯ ಮುಂತಾದುವುಗಳಿಗೆ ಸಂಬಂಧಪಟ್ಟ ಸಾಧನೆಗಳ ವಿಚಾರವೂ ಇಲ್ಲಿ ಬರೆಯಲ್ಪಡುತ್ತದೆ. ಆದರೆ ನನಗೆ ಸತ್ಯವು ಎಲ್ಲದರಲ್ಲಿಯೂ ಇದೆ. ಇದರಲ್ಲಿ ಅಸಂಖ್ಯಾತ ತತ್ವಗಳು ಅಡಕವಾಗಿವೆ. ಈ ಸತ್ಯವು ಮಾತಿನ ಸತ್ಯಮಾತ್ರವೇ ಅಲ್ಲ. ಇದು ಯಾವಪ್ರಕಾರವಾಗಿ ಮಾತಿನ ಸತ್ಯವೋ ಅದೇಪ್ರಕಾರವಾಗಿ ಮನಸ್ಸಿನ ಸತ್ಯವೂ ಆಗಿದೆ. ಈ ಸತ್ಯವು ಕೇವಲ ನಮ್ಮ ಕಲ್ಪನೆಯ ಸತ್ಯಮಾತ್ರನಲ್ಲದೆ ಸ್ವತಂತ್ರವಾದ ಚಿರಸ್ಥಾಯಿಯಾದ ಸತ್ಯವಾಗಿದೆ. ಎಂದರೆ ಈ ಸತ್ಯವೇ ಈಶ್ವರ. ಈಶ್ವರನ ವಿಭೂತಿಯು ಅಸಂಖ್ಯಾತವಾದುದರಿಂದ ಈಶ್ವರಪದದ ವ್ಯಾಖ್ಯಾನಗಳೂ ಅಸಂಖ್ಯಾತವಾಗಿವೆ. ಇವು ನನ್ನನ್ನು ಆಶ್ಚರ್ಯಚಕಿತನನ್ನಾಗಿ ಮಾಡುತ್ತವೆ; ಕ್ಷಣಕಾಲ ನನ್ನನ್ನು ಮುಗ್ಧನೆನಿಸುತ್ತವೆ. ಆದರೆ ನಾನು ಸತ್ಯಮೂರ್ತಿಯಾದ ಈಶ್ವರನ ಉಪಾಸಕನಾಗಿದ್ದೇನೆ. ಆತನುಮಾತ್ರ ಸತ್ಯ, ಉಳಿದುದೆಲ್ಲಾ ಮಿಥ್ಯ. ನಾನಿನ್ನೂ ಆತನನ್ನು ಕಂಡಿಲ್ಲ. ಆದರೆ ನಾನು ಸದಾ ಆ ಶೋಧನೆಯಲ್ಲೇ ನಿರತನಾಗಿದ್ದೇನೆ. ಆತನ ಪ್ರಾಪ್ತಿಗಾಗಿ ನನಗೆ ಅತ್ಯಂತ ಪ್ರಿಯವಾದ ವಸ್ತುಗಳನ್ನು ತ್ಯಜಿಸಲು ಸಿದ್ಧನಾಗಿದ್ದೇನೆ. ಮತ್ತು ಈ ಸಾಧನವೆಂಬ ಯಜ್ಞಕ್ಕೆ ನನ್ನ ಶರೀರವನ್ನೇ ಆಹುತಿಯಾಗಿಕೊಡಲು ಸಿದ್ಧನಾಗಿದ್ದೇನೆ ಎಂದು ನನ್ನ ನಂಬಿಕೆ. ಆದರೆ ಈ ಚಿರಸ್ಥಾಯಿಯಾದ ಸತ್ಯದ ಸಾಕ್ಷಾತ್ಕಾರವು ನನಗೆ ಆಗುವವರೆಗೂ ನನ್ನ ಅಂತರಾತ್ಮನು ಸತ್ಯವೆಂದು ತಿಳಿದಿರುವ ಈ ಕಾಲ್ಪನಿಕ ಸತ್ಯವನ್ನೇ ಆಧಾರವಾಗಿಟ್ಟುಕೊಂಡು ಇದನ್ನೇ ಮಾರ್ಗದರ್ಶಿಯಾಗಿ ಮಾಡಿಕೊಂಡು ಇದನ್ನೇ ಆಶ್ರಯವಾಗಿಹೊಂದಿ ನನ್ನ ಜೀವನವನ್ನು ನಡೆಸಬೇಕು. ಈ ಮಾರ್ಗವು ಕತ್ತಿಯ ಅಲಗಿನಂತೆ ಹರಿತವೂ ಇಕ್ಕಟ್ಟಾದುದೂ ಆದರೂ ನನ್ನ ಅನುಭವದಲ್ಲಿ ಸುಲಭವೂ

ಶೀಘ್ರವಾದುದೂ ಆಗಿದೆ. ನಾನು ಈ ದಾರಿಯನ್ನು ತಪ್ಪದೆ ಅನುಸರಿಸಿರುವುದರಿಂದ ನಾನು ಮಾಡಿದ ತಪ್ಪುಗಳು ಹಿಮಾಲಯದಷ್ಟು ದೊಡ್ಡವಾದರೂ ಸಣ್ಣವಾಗಿ ತೋರಿವೆ. ಈ ದಾರಿಯು ನನಗೆ ಸಂಭವಿಸಬಹುದಾದ ಅನಾಹುತಗಳಿಂದ ನನ್ನನ್ನು ತಪ್ಪಿಸಿದೆ; ನನ್ನ ಪ್ರಯಾಣವನ್ನು ನನಗೆ ತೋರುವಮಟ್ಟಿಗೆ ಮುಂದುವರಿಸಿದೆ. ಈ ದಾರಿಯಲ್ಲಿ ದೂರದೂರದಲ್ಲಿ ಆ ವಿಶುದ್ಧಸತ್ಯದ ಕಾಂತಿಯ ಕಿರಣಗಳು ನನಗೆ ಗೋಚರವಾಗಿವೆ. ಈಶ್ವರನೊಬ್ಬನೇ ಸತ್ಯ, ಜಗತ್ತಿನಲ್ಲಿ ಉಳಿದುದೆಲ್ಲಾ ಅಸತ್ಯ ಎಂಬ ವಿಶ್ವಾಸವು ದಿನದಿನವೂ ನನ್ನ ಮನಸ್ಸಿಗೆ ದೃಢವಾಗುತ್ತಿದೆ. ಇಷ್ಟವುಳ್ಳವರು ಈ ನಂಬಿಕೆಯು ನನ್ನಲ್ಲಿ ಹೇಗೆ ಬಲಗೊಂಡಿತೆನ್ನುವುದನ್ನು ಅರಿಯಲಿ. ನನ್ನ ಸಾಧನೆಗಳಲ್ಲಿ ಮತ್ತು ಅವರಿಗೆ ಸಾಧ್ಯವಾದರೆ ನನ್ನ ನಂಬಿಕೆಗಳಲ್ಲಿ ಅವರು ಭಾಗಿಗಳಾಗಲಿ. ನನ್ನ ಕೈಯಲ್ಲಿ ಸಾಧ್ಯವಾದುದೆಲ್ಲಾ ಎಳೆ ಮಗುವಿಗೆ ಕೂಡ ಶಕ್ಯವೆಂಬ ನಂಬಿಕೆಯೂ ನನ್ನಲ್ಲಿ ದೃಢಪಡುತ್ತಿದೆ. ಇಷ್ಟು ದೃಢವಾದ ನಂಬಿಕೆಗೆ ಪ್ರಬಲವಾದ ಕಾರಣಗಳಿವೆ. ಸತ್ಯಶೋಧನೆಯ ಸಾಧನಗಳು ಎಷ್ಟು ಕಠಿಣವೋ ಅಷ್ಟು ಸರಳವಾಗಿಯೂ ಇವೆ. ಅಹಂಕಾರಿಯಾದ ಮನುಷ್ಯನಿಗೆ ಅಸಾಧ್ಯವಾಗಿ ಕಾಣುವುದು ಸಣ್ಣ ಹುಡುಗನಿಗೆ ಸರ್ವಥಾ ಶಕ್ಯವಾಗಿರಬಹುದು. ಸತ್ಯಶೋಧಕನು ರಜಃಕಣಕ್ಕಿಂತ ಅಧಿಕವಾದ ನಮ್ರತೆಯುಳ್ಳವನಾಗಿರಬೇಕು. ಲೋಕವು ರಜಃಕಣವನ್ನು ಕಾಲಕೆಳಗೆ ತುಳಿಯುತ್ತದೆ. ಸತ್ಯಶೋಧಕನಿಗೆ ಇಂತಹ ರಜಃಕಣದ ಕೆಳಗಿದ್ದು ತುಳಿಸಿಕೊಳ್ಳುವಷ್ಟು ಅಲ್ಪನು ತಾನೆಂಬ ತಿಳಿವು ಬರುವವರೆಗೂ ಆ ಸ್ವತಂತ್ರಸತ್ಯದ ಬೆಳಕು ಅವನಮೇಲೆ ಬೀಳುವುದಿಲ್ಲ. ವಸಿಷ್ಠವಿಶ್ವಾಮಿತ್ರರ ಸಂವಾದದಲ್ಲಿ ಇದು ಸ್ಪಷ್ಟವಾಗಿದೆ. ಈಸಾಯಿ ಧರ್ಮವೂ ಇಸ್ಲಾಂಮತವೂ ಈ ಮಾತನ್ನು ಸಿದ್ಧಿಸುತ್ತವೆ.

ನಾನು ಬರೆಯುವುದರಲ್ಲಿ ಯಾವ ಭಾಗವಾದರೂ ಪಾಠಕರಿಗೆ ಸ್ವಾಭಿಮಾನದಿಂದ ಕೂಡಿದಂತೆ ಹೊಳೆದರೆ ಈತನ ಶೋಧನೆಯಲ್ಲಿ ಏನೋ ಅಸಾಧುವಾದುದಿದೆ; ಈತನಿಗೆ ಕಂಡುದು ಬೆಳಕಲ್ಲ, ಮೃಗತೃಷ್ಣಿಕೆ ಎಂದು ತಿಳಿಯಬೇಕು. ನನ್ನಂತಹರು ನೂರಾರು ಮಂದಿ ಕ್ಷಯಿಸಲಿ.

ಆದರೆ ಸತ್ಯಕ್ಕೆ ಮಾತ್ರ ಜಯವುಂಟಾಗಲಿ. ನನ್ನಂತಹ ಅಲ್ಪಾತ್ಮರ ಯೋಗ್ಯತೆಯನ್ನು ಅಳೆಯುವಾಗ ಸತ್ಯದಪ್ರಮಾಣವನ್ನು ಅಣುಮಾತ್ರವೂ ಕಡಮೆ ಮಾಡದೆ ಇರೋಣ.

ಈ ಕೆಳಗಿನ ಅಧ್ಯಾಯಗಳಲ್ಲಿ ಹರಡಿರುವ ನನ್ನ ಸಲಹೆಗಳನ್ನು ಯಾರೂ ಪ್ರಮಾಣವೆಂದೆಣಿಸುವುದಿಲ್ಲವೆಂದು ನಂಬುತ್ತೇನೆ. ಹಾಗೆ ಎಣಿಸಕೂಡದೆಂದು ನನ್ನ ಪ್ರಾರ್ಥನೆ. ಇದರಲ್ಲಿ ವರ್ಣಿತವಾದ ಸಾಧನೆಗಳನ್ನು ದೃಷ್ಟಾಂತರೂಪದಲ್ಲಿ ಕಂಡು ಎಲ್ಲರೂ ಯಥಾಶಕ್ತಿಯಾಗಿ ಯಥಾಮತಿಯಾಗಿ ಅವರವರ ಇಚ್ಛೆಯಂತೆ ಸ್ವೀಕಾರಮಾಡಬೇಕೆಂದು ನನ್ನ ಅಪೇಕ್ಷೆ. ಇಷ್ಟರಮಟ್ಟಿಗೆ ಮಾತ್ರ ನನ್ನ ಆತ್ಮಕಥೆಯು ನಿಜವಾಗಿಯೂ ಉಪಯೋಗಕರವಾದ ಸಾಮಗ್ರಿಯಾಗಿರುವುದೆಂಬ ವಿಶ್ವಾಸವು ನನಗಿದೆ. ಏಕೆಂದರೆ, ಹೇಳಲ್ಪಡಬೇಕಾದ ವಿಚಾರಗಳಲ್ಲಿ ಯಾವುದನ್ನೂ ಆಭಾಸವೆಂದು ಮುಚ್ಚಿಡುವುದಿಲ್ಲ ಅಥವಾ ತಗ್ಗಿಸಿಹೇಳುವುದಿಲ್ಲ. ನನ್ನ ಸಕಲ ದೋಷಗಳನ್ನೂ ತಪ್ಪುಗಳನ್ನೂ ಪಾಠಕರಿಗೆ ಪರಿಚಯಮಾಡಿಕೊಡುತ್ತೇನೆಂದು ನಂಬುತ್ತೇನೆ. ಸತ್ಯಾಗ್ರಹದ ಶಾಸ್ತ್ರೀಯಪ್ರಯೋಗವನ್ನು ವರ್ಣಿಸುವುದೇ ನನ್ನ ಉದ್ದೇಶ. ನಾನು ಎಷ್ಟು ಒಳ್ಳೆಯವನೆಂಬುದನ್ನು ವಿವರಿಸಬೇಕೆಂಬ ಇಚ್ಛೆಯು ನನಗೆ ಎಳ್ಳಷ್ಟಾದರೂ ಇಲ್ಲ. ನನ್ನ ಯೋಗ್ಯತೆಯನ್ನು ತೂಕಮಾಡುವುದರಲ್ಲಿ ಸತ್ಯದಂತೆ ನಿರ್ದಾಕ್ಷಿಣ್ಯವುಳ್ಳವನಾಗಿರಲು ಪ್ರಯತ್ನಪಡುತ್ತೇನೆ. ಏಕೆಂದರೆ, ಉಳಿದವರೂ ಇದೇರೀತಿ ಮಾಡಬೇಕೆಂದು ನನ್ನ ಆಶಯ. ಈ ಅಳತೆಯಿಂದ ನನ್ನನ್ನು ಅಳೆದುಕೊಂಡು ನೋಡಿದರೆ ಸೂರದಾಸನು ಹೇಳುವಂತೆ ನಾನೂ ಈರೀತಿ ಹೇಳಬೇಕಾಗುತ್ತದೆ :

> "ನನಗೆ ಸಮನಾದ ಕುಟಿಲನೂ ಖಲನೂ ಕಾಮಿಯೂ
> ಉಂಟೆ ? ನನಗೆ ತನುವನ್ನಿತ್ತವನನ್ನು ತ್ಯಜಿಸಿರುವಂಥ
> ಕೃತಘ್ನನು ನಾನು."

ಏಕೆಂದರೆ ನನ್ನ ಪ್ರತಿಯೊಂದು ಉಸಿರಿನಲ್ಲೂ ಈಶ್ವರನ ಚೈತನ್ಯವಿದೆ ಯೆಂದೂ ಆತನು ನನ್ನ ಜನ್ಮದಾತನೆಂದೂ ನನಗೆ ಸಂಪೂರ್ಣವಾಗಿ ಗೊತ್ತು. ಹೀಗಿದ್ದರೂ ಆತನಿಂದ ಇನ್ನೂ ಇಷ್ಟೊಂದು ದೂರವಿರುವುದು ನನ್ನ ಮನಸ್ಸನ್ನು ಎಡೆಬಿಡದೆ ಕೊರೆಯುತ್ತಿದೆ. ಇದಕ್ಕೆ ನನ್ನ ಮನಸ್ಸಿನ ವಿಕಾರಗಳೇ ಕಾರಣವೆಂದು ನನಗೆಗೊತ್ತು. ಆದರೂ ಅವುಗಳನ್ನು ದೂರ ಮಾಡಲಾರೆನು.

ಆದರೆ ಪೀಠಿಕೆಯು ಇಲ್ಲಿಗೆ ಸಾಕು. ನನ್ನ ಕತೆಯನ್ನು ಆರಂಭಿಸು ವುದು ಮುಂದಿನ ಪ್ರಕರಣದಲ್ಲಿ ಮಾತ್ರ ಸಾಧ್ಯ.

ಸಬರ್ಮತಿ ಆಶ್ರಮ,<br>
೨೬ನೇ ನವೆಂಬರ್, ೧೯೨೫

**ಮೋ. ಕ. ಗಾಂಧೀ.**

# ೧

# ಗೋತ್ರ ವಿಚಾರ—ಜನ್ಮ

ಗಾಂಧೀ ಕುಟುಂಬದವರು ಬನಿಯರು. ಮೊದಲಿಗೆ ಚಿಲ್ಲರೆ ಅಂಗಡಿ ಇಟ್ಟುಕೊಂಡು ವ್ಯಾಪಾರ ಮಾಡುತ್ತಿದ್ದರೆಂದು ಕಾಣುವುದು. ಆದರೆ ನನ್ನ ತಾತನಿಂದ ಮೂರು ಸಂತತಿಯವರೆಗೆ ಅವರು ಕಾಠ್ಯಾವಾಡದ ಕೆಲವು ಸಂಸ್ಥಾನಗಳಲ್ಲಿ ದಿವಾನರಾಗಿದ್ದರು. ಉತ್ತಮಚಂದ ಗಾಂಧೀ ಅಥವಾ ಓತಾ ಗಾಂಧಿಯು ಖಂಡಿತದ ಮನುಷ್ಯನಾಗಿದ್ದಿರಬೇಕು. ಆತನು ಪೋರಬಂದರದ ದಿವಾನನಾಗಿದ್ದಾಗ ಪಿತೂರಿಗಳ ದೆಸೆಯಿಂದ ಆ ಸಂಸ್ಥಾನವನ್ನು ಬಿಟ್ಟು ಜುನಾಘಡದಲ್ಲಿ ಆಶ್ರಯವನ್ನು ಹುಡುಕಬೇಕಾಯಿತು. ಅಲ್ಲಿಯ ನವಾಬನಿಗೆ ಈತನು ಎಡಗೈಯಲ್ಲಿ ಸಲಾಮು ಮಾಡಲು ನೋಡುತ್ತಿದ್ದವರೊಬ್ಬರು ಈರೀತಿಯಾದ ಅವಿನಯವರ್ತನೆಗೆ ಕಾರಣವೇನೆಂದು ಕೇಳಲು ಈತನು, ''ನನ್ನ ಬಲಗೈಯು ಆಗಲೇ ಪೋರಬಂದರ್ ಸಂಸ್ಥಾನಕ್ಕೆ ಸೇರಿದೆ.'' ಎಂದು ಉತ್ತರ ಕೊಟ್ಟನು.

ಓತಾ ಗಾಂಧಿಯು ತನ್ನ ಮೊದಲನೆಯ ಹೆಂಡತಿಯು ಮರಣ ಹೊಂದಲು ಇನ್ನೊಬ್ಬ ಹೆಂಡತಿಯನ್ನು ಮದುವೆಯಾದನು. ಮೊದಲನೆಯ ಹೆಂಡತಿಯಲ್ಲಿ ನಾಲ್ವರೂ ಎರಡನೆಯವಳಲ್ಲಿ ಇಬ್ಬರೂ ಗಂಡುಮಕ್ಕಳಾದರು. ಇವರು ಒಂದೇ ತಾಯಿಯ ಮಕ್ಕಳಲ್ಲವೆನ್ನುವುದು ನನ್ನ ಚಿಕ್ಕಂದಿನಲ್ಲಿ ನನಗೆ ತಿಳಿದುದಾಗಲಿ ತೋರಿದುದಾಗಲಿ ಕಾಣೆ. ಈ ಆರು ಜನರಲ್ಲಿ ಕರ್ಮಚಂದ ಗಾಂಧೀ ಅಥವಾ ಕಬಾ ಗಾಂಧಿಯು ಐದನೆಯವನು, ತುಲಸೀದಾಸ ಗಾಂಧಿಯು ಕಡೆಯವನು. ಈ ಇಬ್ಬರು ಅಣ್ಣಾತಮ್ಮಂದಿರೂ ಒಬ್ಬರ ನಂತರ ಒಬ್ಬರು ಪೋರಬಂದರಿನಲ್ಲಿ ದಿವಾನರಾಗಿದ್ದರು. ಕಬಾ ಗಾಂಧಿಯೇ ನನ್ನ ತಂದೆ. ಈತನು ರಾಜಸ್ಥಾನಿಕ ಕೋರ್ಟಿನ ಸಭ್ಯನಾಗಿದ್ದನು. ಈ ಸಭೆಯು ಈಗ ಇಲ್ಲ. ಆ ಕಾಲದಲ್ಲಿ

ಅದು ರಾಜರಿಗೂ ಅವರ ಮನೆತನದವರಿಗೂ ಇರುವ ವ್ಯಾಜ್ಯವನ್ನು ತೀರಿಸಲು ಇದ್ದು ಗೌರವಾಸ್ಪದವೆನಿಸಿಕೊಂಡಿದ್ದಿತು. ಅದೂ ಅಲ್ಲದೆ ಆತನು ಕೆಲವು ಕಾಲ ರಾಜಕೋಟೆಯಲ್ಲಿಯೂ ಕೆಲವು ಕಾಲ ವಾಂಕನೇರಿನಲ್ಲೂ ದಿವಾನನಾಗಿದ್ದನು. ಸ್ವರ್ಗವಾಸಿಯಾದಾಗ ಈತನಿಗೆ ರಾಜಕೋಟೆಯಿಂದ ಪೆನ್‌ಷನ್ ಬರುತ್ತಿದ್ದಿತು.

ಕಬಾ ಗಾಂಧಿಯು ಒಬ್ಬರು ಗತಿಸಿದ ತರುವಾಯ ಒಬ್ಬರಂತೆ ನಾಲ್ವರು ಹೆಂಡತಿಯರನ್ನು ಮದುವೆಯಾದನು. ಮೊದಲನೆಯ ಇಬ್ಬರಲ್ಲಿ ಇಬ್ಬರು ಹೆಣ್ಣುಮಕ್ಕಳೂ ಕಡೆಯವಳಾದ ಪುತಲೀಬಾಯಿಯಲ್ಲಿ ಒಬ್ಬಳು ಮಗಳೂ ಮೂರುಜನ ಗಂಡುಮಕ್ಕಳೂ ಆದರು. ಇವರಲ್ಲಿ ನಾನೇ ಕಡೆಯವನು.

ನಮ್ಮ ತಂದೆಯು ಕುಟುಂಬಪ್ರೇಮಿ, ಸತ್ಯಪ್ರಿಯ, ಶೂರ ಮತ್ತು ಉದಾರನು ; ಆದರೆ ಕೋಪದ ಸ್ವಭಾವವುಳ್ಳವನು. ಸ್ವಲ್ಪಮಟ್ಟಿಗೆ ವಿಷಯಾಸಕ್ತನೆಂದರೂ ಎನ್ನಬಹುದು. ಏಕೆಂದರೆ ಈತನು ನಾಲ್ವತ್ತು ವರ್ಷವಾದಮೇಲೆ ನಾಲ್ಕನೆಯ ಮದುವೆಯನ್ನು ಮಾಡಿಕೊಂಡನು. ಆದರೆ ಲಂಚ ಮುಂತಾದುದರ ಆಸೆಗೆ ಸಿಕ್ಕಿದವನಲ್ಲ. ತನ್ನ ಕುಟುಂಬದಲ್ಲಿ ಹೇಗೋ ಹಾಗೆ ಹೊರಗೂ ಕೂಡ ಕೊಂಚವೂ ಪಕ್ಷಪಾತವಿಲ್ಲದವನೆಂಬ ಹೆಸರನ್ನು ಸಂಪಾದಿಸಿದ್ದನು. ಈತನ ರಾಜನಿಷ್ಠೆಯು ಎಲ್ಲರಿಗೂ ತಿಳಿದಿದ್ದಿತು. ಒಂದು ಸಮಯದಲ್ಲಿ ಒಬ್ಬ ಅಸಿಸ್ಟೆಂಟ್ ಪೊಲಿಟಿಕಲ್ ಏಜಂಟನು ಈತನ ಸ್ವಾಮಿಯಾದ ರಾಜಕೋಟೆಯ ಠಾಕೂರ ಸಾಹೇಬನಿಗೆ ಅಪಮಾನ ಮಾಡಿದಾಗ ಈತನು ಆ ಸಾಹೇಬನನ್ನು ಎದುರಿಸಿದನು. ಸಾಹೇಬನಿಗೆ ಸಿಟ್ಟು ಬಂದು ಕಬಾ ಗಾಂಧಿಯನ್ನು ಕ್ಷಮೆ ಬೇಡೆಂದು ಕೇಳಲು ಅದಕ್ಕೆ ಈತನು ಒಪ್ಪದೆ ಇದ್ದುದರಿಂದ ಕೆಲವು ತಾಸುಗಳ ಕಾಲ ಈತನನ್ನು ಕಾವಲಿಟ್ಟಿದ್ದನು. ಆದರೆ ಈತನು ವಜ್ರದಂತೆ ಗಟ್ಟಿಯಾದ ಮನಸ್ಸುಳ್ಳವನೆಂದು ತಿಳಿಯುತ್ತಲೇ ಸಾಹೇಬನು ಕಬಾ ಗಾಂಧಿಯನ್ನು ಬಿಟ್ಟುಬಿಡಲು ಅಪ್ಪಣೆ ಮಾಡಿದನು.

ನಮ್ಮ ತಂದೆಗೆ ಐಶ್ವರ್ಯವನ್ನು ಕೂಡಿಹಾಕಬೇಕೆಂಬ ಲೋಭವು ಯಾವಾಗ್ಗೂ ಇರಲಿಲ್ಲ. ಆದುದರಿಂದ ಆತನಿಂದ ನಮಗೆ ಅಲ್ಪಸ್ವಲ್ಪ ಆಸ್ತಿ ಮಾತ್ರ ದೊರಕಿತು.

ಆತನಿಗೆ ಅನುಭವವನ್ನುಳಿದು ಬೇರೆ ಶಿಕ್ಷಣವಿರಲಿಲ್ಲ. ಹೆಚ್ಚೆಂದರೆ ಗುಜರಾತಿ ಐದನೆಯ ಇಯತ್ತೆಯವರೆಗೆ ಓದಿದ್ದನೆಂದು ಹೇಳಬಹುದು. ಚರಿತ್ರೆಭೂಗೋಳಗಳ ಜ್ಞಾನವು ಕೊಂಚವೂ ಇರಲಿಲ್ಲ. ಆದರೆ ಆತನು ತನ್ನ ವ್ಯಾವಹಾರಿಕಜ್ಞಾನದಿಂದ ಅತಿಸೂಕ್ಷ್ಮವಾದ ಪ್ರಶ್ನೆಗಳನ್ನು ನಿರ್ಣಯಿಸುವುದಕ್ಕೂ ನೂರಾರು ಮಂದಿಯನ್ನು ಆಳುವದಕ್ಕೂ ಶಕ್ತನಾಗಿದ್ದನು.

ಆತನು ಪಡೆದ ಧಾರ್ಮಿಕ ಶಿಕ್ಷಣವು ಅತಿ ಸ್ವಲ್ಪ. ಆದರೆ ದೇವಸ್ಥಾನಕ್ಕೆ ಹೋಗುವುದು ಮತ್ತು ಪುರಾಣ ಪುಣ್ಯಕಥೆಗಳನ್ನು ಕೇಳುವುದು ಇವುಗಳಿಂದ ಅಸಂಖ್ಯಾತ ಹಿಂದುಗಳಿಗೆ ಸಹಜವಾಗಿ ಉಂಟಾಗುವ ಧಾರ್ಮಿಕ ಜ್ಞಾನವನ್ನು ಆತನು ಸಂಪಾದಿಸಿದ್ದನು. ಆತನು ಸಾಯುವುದಕ್ಕೆ ಕೆಲವು ವರ್ಷಗಳ ಮುಂಚೆ ನಮ್ಮ ಕುಟುಂಬದ ಮಿತ್ರನಾದ ಒಬ್ಬ ಬ್ರಾಹ್ಮಣ ವಿದ್ವಾಂಸನ ಸಲಹೆಯ ಮೇರೆಗೆ ನಮ್ಮ ತಂದೆಯು ಗೀತೆಯನ್ನು ಓದುವುದಕ್ಕೆ ಪ್ರಾರಂಭ ಮಾಡಿದುದಲ್ಲದೆ ಪ್ರತಿ ನಿತ್ಯವೂ ಪೂಜೆಯ ಸಮಯದಲ್ಲಿ ಕೆಲವು ಶ್ಲೋಕಗಳನ್ನು ಗಟ್ಟಿಯಾಗಿ ಹೇಳುತ್ತಿದ್ದನು.

ನಮ್ಮ ತಾಯಿಯ ವಿಚಾರದಲ್ಲಿ ಎಂದೂ ಮರೆಯದಂತೆ ನನ್ನ ಮನಸ್ಸಿನಲ್ಲಿ ನಿಂತಿರುವುದು ಆಕೆಯು ಸಾಧ್ವಿಯಾದ ಹೆಂಗಸೆನ್ನುವುದು. ಆಕೆಯು ಧರ್ಮಭೀರು. ದಿನವಹಿ ಪೂಜಾಪಾಠವಾಗುವವರೆಗೂ ಆಕೆಯು ಊಟದ ಯೋಚನೆಯನ್ನೇ ಮಾಡುತ್ತಿರಲಿಲ್ಲ. ಹವೇಲಿ (ವೈಷ್ಣವ ದೇವಸ್ಥಾನ) ಗೆ ಹೋಗುವುದು ಆಕೆಯ ಪ್ರತಿದಿನದ ಕರ್ತವ್ಯಗಳಲ್ಲಿ ಒಂದಾಗಿದ್ದಿತು. ನಾನು ಎಷ್ಟು ಜ್ಞಾಪಿಸಿಕೊಂಡರೂ ಆಕೆಯು ಯಾವ ಸಲವೂ ಚಾತುರ್ಮಾಸವ್ರತವನ್ನು ನಡೆಸುವುದನ್ನು ತಪ್ಪಿದುದು ನನ್ನ ನೆನಪಿಗೆ ಬರುವುದಿಲ್ಲ. ಅತ್ಯಂತ ಕಠಿಣಗಳಾದ ವ್ರತಗಳನ್ನು ಎಳ್ಳಷ್ಟು ಹಿಂಜರಿಯದೆ ಕಡೆಗಾಣಿಸುತ್ತಿದ್ದಳು. ಆರಂಭ ಮಾಡಿದ

ವ್ರತವನ್ನು ಕಾಹಿಲೆಯ ದೆಸೆಯಿಂದ ಎಂದಿಗೂ ಕೈಬಿಡುತ್ತಿರಲಿಲ್ಲ. ಒಂದು ಸಲ ಚಾಂದ್ರಾಯಣ ವ್ರತವನ್ನು ನಡೆಸುವಾಗ ಆಕೆಯು ರೋಗದಿಂದ ನರಳುತ್ತಿದ್ದರೂ ವ್ರತವನ್ನು ಬಿಡದೆ ಪೂರೈಸಿದುದು ನನ್ನ ನೆನಪಿಗೆ ಬರುತ್ತದೆ. ಎರಡು ಮೂರು ದಿವಸ ಒಟ್ಟಿಗೆ ಉಪವಾಸ ಮಾಡುವುದು ಆಕೆಗೆ ದೊಡ್ಡಮಾತಾಗಿರಲಿಲ್ಲ. ಚಾತುರ್ಮಾಸದ ಪ್ರತಿದಿನವೂ ಒಂದು ಹೊತ್ತು ಊಟಮಾಡುವುದು ಆಕೆಯ ಅಭ್ಯಾಸವಾಗಿದ್ದಿತು. ಇಷ್ಟಕ್ಕೇ ತೃಪ್ತಿ ಪಡದೆ ಯಾವುದೋ ಒಂದು ಚಾತುರ್ಮಾಸದಲ್ಲಿ ದಿನ ಬಿಟ್ಟು ದಿನ ಉಪವಾಸ ಮಾಡಿ ವ್ರತವನ್ನು ನಡೆಸಿದಳು. ಇನ್ನೊಂದು ಚಾತುರ್ಮಾಸದಲ್ಲಿ ಸೂರ್ಯನಾರಾಯಣನ ದರ್ಶನವಿಲ್ಲದೆ ಆಹಾರವನ್ನು ತೆಗೆದುಕೊಳ್ಳುವುದಿಲ್ಲವೆಂದು ವ್ರತ ಹಿಡಿದಳು. ಆ ಕಾಲದಲ್ಲಿ ನಾವು ಹುಡುಗರು ಹೊರಗೆ ನಿಂತುಕೊಂಡು ಆಕಾಶದ ಕಡೆಗೆ ಒಂದೇ ಸಮನೆ ನೋಡುತ್ತಾ ಸೂರ್ಯನು ಕಾಣಿಸುವುದನ್ನು ನಮ್ಮ ತಾಯಿಗೆ ತಿಳಿಸುವುದಕ್ಕಾಗಿ ಕಾದಿರುತ್ತಿದ್ದೆವು. ಮಳೆಗಾಲದ ಮಧ್ಯದಲ್ಲಿ ಸೂರ್ಯನ ದರ್ಶನವಾಗುವುದು ಬಹಳ ಅಪರೂಪವೆನ್ನುವುದು ಎಲ್ಲರಿಗೂ ತಿಳಿದ ವಿಷಯ. ಎಷ್ಟೋ ದಿನ ಸೂರ್ಯನು ಥಟಕ್ಕನೆ ಕಾಣಿಸಿಕೊಂಡಾಗ ನಾವು ಅವಸರವಾಗಿ, 'ಅಮ್ಮಾ, ಅಮ್ಮಾ, ಸೂರ್ಯನು ಕಾಣುತ್ತಾನೆ' ಎಂದು ಹೇಳಿದುದೂ ಆಗ ನಮ್ಮಮ್ಮನು ತಾನೇ ನೋಡಲು ಹೊರಕ್ಕೆ ಓಡಿಬರುವಷ್ಟರಲ್ಲಿಯೇ ಸೂರ್ಯನು ಮರೆಯಾದುದೂ ಇದರಿಂದ ಆಕೆಗೆ ಆ ದಿವಸದ ಊಟ ತಪ್ಪಿಹೋದುದೂ ನನಗೆ ಜ್ಞಾಪಕವಿದೆ. ಈ ಸಂದರ್ಭಗಳಲ್ಲಿ ನಮ್ಮ ತಾಯಿಯು ಗೆಲುವೊಗದಿಂದ, "ಅದರಿಂದ ಏನೂ ಚಿಂತೆಯಿಲ್ಲ. ನಾನು ಈ ದಿನ ಊಟಮಾಡುವುದು ದೇವರಿಗೆ ಇಷ್ಟವಿಲ್ಲ." ಎಂದು ಹೇಳಿ ತನ್ನ ಕೆಲಸಕ್ಕೆ ಹಿಂತಿರುಗುವಳು.

ಆಕೆಯು ವ್ಯವಹಾರಕುಶಲಳು. ದರಬಾರಿನ ಸಂಬಂಧವಾದ ಎಲ್ಲಾ ವಿಚಾರವೂ ಆಕೆಗೆ ತಿಳಿದಿದ್ದಿತು. ರಾಣಿವಾಸದವರಿಗೆ ಈಕೆಯ ಬುದ್ಧಿಕುಶಲತೆಯು ಚೆನ್ನಾಗಿ ಗೊತ್ತಿದ್ದಿತು. ಸಣ್ಣ ಹುಡುಗನಾದುದರಿಂದ ನಾನು ಎಷ್ಟೋಸಲ ನಮ್ಮ ತಾಯಿಯ ಜೊತೆಗೆ ಅರಮನೆಗೆ

ಹೋದುದೂ ಅಲ್ಲಿ ನನ್ನ ತಾಯಿಯೂ ಠಾಕೋರ ಸಾಹೇಬನ ತಾಯಿಯೂ ಮಾತುಕತೆಯಾಡಿದುದೂ ನನಗೆ ಇನ್ನೂ ನೆನಪಿದೆ.

ಈ ಮಾತಾಪಿತೃಗಳ ಹೊಟ್ಟೆಯಲ್ಲಿ ಸಂವತ್ ೧೯೨೫ನೇ ಭಾದ್ರಪದ ಬಹುಳ ದ್ವಾದಶಿಯ ದಿನ–ಎಂದರೆ ೧೮೬೯ನೆಯ ಇಸವಿ ಅಕ್ಟೋಬರ್ ೨ನೆಯ ತಾರೀಖಿನ ದಿವಸ–ಪೋರಬಂದರ್ ಅಥವಾ ಸುದಾಮಪುರದಲ್ಲಿ ನಾನು ಜನ್ಮಗ್ರಹಣ ಮಾಡಿದೆನು.

ನಾನು ನನ್ನ ಬಾಲ್ಯವನ್ನು ಪೋರಬಂದರದಲ್ಲಿ ಕಳೆದೆನು. ಯಾವುದೋ ಶಾಲೆಗೆ ಹೋಗುತ್ತಿದ್ದುದು ಜ್ಞಾಪಕವಿದೆ. ಮಗ್ಗಿಕೋಷ್ಟಕಗಳನ್ನು ಗಟ್ಟಿಮಾಡುವುದು ನನಗೆ ಕಷ್ಟ ಕೊಟ್ಟಿತು. ಇನ್ನೇನೆಂದರೆ, ಜೊತೆಯ ಹುಡುಗರೊಡನೆ ನಮ್ಮ ಉಪಾಧ್ಯಾಯರನ್ನು ಬೈಯುವುದನ್ನು ಕಲಿತುಕೊಂಡೆನು. ಇದು ಹೊರತು ಇನ್ನೇನೂ ಜ್ಞಾಪಕವಿಲ್ಲ. ಇದರಿಂದ ನನಗೆ ತೋರುವುದೇನೆಂದರೆ: ಆಗ ನನ್ನ ಬುದ್ಧಿಯು ಮಂದವಾಗಿದ್ದಿರಬೇಕು; ನನ್ನ ಜ್ಞಾಪಕಶಕ್ತಿಯು ಅಪಕ್ವವಾಗಿದ್ದಿರಬೇಕು.



# ೨

# ಬಾಲ್ಯ

ನಮ್ಮ ತಂದೆಯು ರಾಜಾಸ್ಥಾನಿಕ ಕೋರ್ಟಿನ ಸದಸ್ಯನಾಗುವುದಕ್ಕಾಗಿ ಪೋರಬಂದರನ್ನು ಬಿಟ್ಟು ರಾಜಕೋಟಿಗೆ ಹೊರಟಾಗ ನನಗೆ ಸುಮಾರು ಏಳು ವರ್ಷಗಳಿರಬೇಕು. ಅಲ್ಲಿ ನನ್ನನ್ನು ಪ್ರಾಥಮಿಕ ಶಾಲೆಗೆ ಸೇರಿಸಿದರು. ನನಗೆ ಆಗ ಪಾಠ ಹೇಳಿಕೊಟ್ಟ ಉಪಾಧ್ಯಾಯರುಗಳ ಹೆಸರುಗಳು ಮುಂತಾದುದು ಚೆನ್ನಾಗಿ ನೆನಪಿದೆ. ಪೋರಬಂದರದಲ್ಲಿ ಹೇಗೋ ಹಾಗೆ ಇಲ್ಲಿಯೂ ನನ್ನ ಓದು ಬರಹದ ವಿಚಾರದಲ್ಲಿ ಹೆಚ್ಚಿನದೇನೂ ಇರಲಿಲ್ಲ. ಇತರರಿಗಿಂತ ಹೆಚ್ಚು ಬುದ್ಧಿವಂತನೆನಿಸಿಕೊಂಡಿರಲಾರೆನು. ಈ ಶಾಲೆಯಾದ ಮೇಲೆ ಊರ ಹೊರಗಿನ ಶಾಲೆಯಲ್ಲಿ ಕೆಲವು ದಿವಸ ಓದಿದೆನು. ಇದಾದನಂತರ ಆಗಲೇ ಹನ್ನೆರಡನೆಯ ವರ್ಷ ನಡೆಯುತ್ತಿರುವಾಗ ಹೈಸ್ಕೂಲನ್ನು ಸೇರಿದೆನು. ಈ ಸ್ವಲ್ಪ ಕಾಲದಲ್ಲಿ ನಮ್ಮ ಉಪಾಧ್ಯಾಯರಿಗಾಗಲಿ ನನ್ನ ಜೊತೆಗಾರರಿಗಾಗಲಿ ಎಂದೂ ಸುಳ್ಳು ಹೇಳಿದಂತೆ ಕಾಣೆ. ನನಗೆ ಆಗ ತುಂಬ ಮುಖಹೇಡಿತನವಿದ್ದುದರಿಂದ ನಾನು ಯಾರ ಜೊತೆಗೂ ಸೇರುತ್ತಿರಲಿಲ್ಲ. ನನ್ನ ಪುಸ್ತಕಪಾಠಗಳೇ ನನ್ನ ಜೊತೆ. ಗಂಟೆ ಹೊಡೆಯುವ ಹೊತ್ತಿಗೆ ಶಾಲೆಯಲ್ಲಿರುವದು, ಶಾಲೆ ಮುಗಿಯುತ್ತಲು ಮನೆಯಕಡೆ ಮುಖ ತಿರುಗಿಸುವುದು—ಇದೇ ನನ್ನ ಅಭ್ಯಾಸ. ಯಾರೊಡನೆ ಮಾತನಾಡುವುದೂ ನನಗೆ ಸಹಿಸುತ್ತಿರಲಿಲ್ಲವಾದುದರಿಂದ ನಾನು ಮನೆಗೆ ಓಡಿಹೋಗುತ್ತಿದ್ದೆನು. ಯಾರು ನನ್ನನ್ನು ನೋಡಿ ಕುಚೋದ್ಯಮಾಡಿಬಿಡುವರೋ ಎಂಬ ಭಯ.

ಹೈಸ್ಕೂಲಿನಲ್ಲಿ ನನ್ನ ಮೊದಲನೆಯ ವರ್ಷದ ಪರೀಕ್ಷೆಯಲ್ಲಿ ನಡೆದ ಒಂದು ಘಟನೆಯು ತಿಳಿಸತಕ್ಕುದಾಗಿದೆ. ಆಗಿನ ವಿದ್ಯಾಭ್ಯಾ

ಸದ ಇನ್‌ಸ್ಪೆಕ್ಟರಾದ ಜೈಲ್ಸ್ ಎಂಬುವರು ಮೇಲ್ವಿಚಾರಣೆಗೋಸ್ಕರ ಬಂದಿದ್ದರು. ನಮ್ಮನ್ನು ಪರೀಕ್ಷೆ ಮಾಡುವಾಗ ಐದು ಪದಗಳನ್ನು ತಪ್ಪಿಲ್ಲದೆ ಬರೆಯುವುದಕ್ಕೆ ಕೊಟ್ಟರು. ಇವುಗಳಲ್ಲಿ 'ಕೆಟ್ಲ್' (Kettle) ಎಂಬ ಪದವು ಒಂದಾಗಿದ್ದಿತು. ನಾನು ಅದನ್ನು ತಪ್ಪಾಗಿ ಬರೆದೆನು. ನಮ್ಮ ಉಪಾಧ್ಯಾಯರು ಅವರ ಜೋಡಿನ ತುದಿಯು ನನ್ನ ಕಾಲನ್ನು ತಗಲುವ ಹಾಗೆ ಮಾಡಿ ನಾನು ತಪ್ಪು ಬರೆದಿರುವುದನ್ನು ಸೂಚಿಸು ವುದಕ್ಕೆ ಎಷ್ಟು ಪ್ರಯತ್ನ ಪಟ್ಟರೂ ನಾನು ಆ ಸೂಚನೆಯನ್ನು ತೆಗೆದು ಕೊಳ್ಳಲಿಲ್ಲ. ನನ್ನ ಪಕ್ಕದ ಹುಡುಗನ ಹಲಗೆಯನ್ನು ನೋಡಿಕೊಂಡು ನನ್ನ ತಪ್ಪನ್ನು ತಿದ್ದಿಕೊಳ್ಳಬೇಕೆನ್ನುವುದೇ ನಮ್ಮ ಉಪಾಧ್ಯಾಯರ ಉದ್ದೇಶ. ಇದು ನನ್ನ ಮನಸ್ಸಿಗೆ ಹತ್ತಲಿಲ್ಲ. ಏಕೆಂದರೆ ನಾವು ಒಬ್ಬರನ್ನೊಬ್ಬರು 'ಕಾಪಿ' ಮಾಡದೆ ಇರುವುದನ್ನು ನೋಡಿಕೊಳ್ಳು ವುದೇ ಉಪಾಧ್ಯಾಯರ ಕೆಲಸವೆಂದು ನಾನು ತಿಳಿದುಕೊಂಡಿದ್ದೆನು. ಫಲಿತಾಂಶದಲ್ಲಿ ನಾನೊಬ್ಬನು ಹೊರತು ಉಳಿದವರೆಲ್ಲರೂ ಎಲ್ಲ ಪದ ಗಳನ್ನೂ ಸರಿಯಾಗಿ ಬರೆದಿದ್ದರು. ನಾನೊಬ್ಬನೇ ದಡ್ಡ. ಆ ಮೇಲೆ ಉಪಾಧ್ಯಾಯರು ನನ್ನ ದಡ್ಡತನವನ್ನು ನನಗೆ ತೋರಿಸುವುದಕ್ಕೆ ಪ್ರಯತ್ನಪಟ್ಟರು. ಅದರಿಂದ ಅವರಿಗೆ ವೃಥಾ ಶ್ರಮವಾಯಿತೇ ವಿನಾ 'ಕಾಪಿ' ಮಾಡುವದನ್ನು ನಾನು ಬೇರೆ ಕಲಿಯಲಿಲ್ಲ.

ಆದರೂ ಇದರಿಂದ ಉಪಾಧ್ಯಾಯರಲ್ಲಿ ನನಗಿದ್ದ ಗೌರವವು ಕಡಮೆಯಾಗಲಿಲ್ಲ. ಏಕೆಂದರೆ ಹಿರಿಯರ ತಪ್ಪುಗಳನ್ನು ಎಣಿಸುವುದು ನನ್ನ ಸ್ವಭಾವದಲ್ಲಿರಲಿಲ್ಲ. ಆಮೇಲೆ ಈ ಉಪಾಧ್ಯಾಯರ ಇತರ ಕುಂದು ಗಳು ನನಗೆ ತಿಳಿಯಬಂದುವಾದರೂ ಇವರ ವಿಷಯದಲ್ಲಿ ನನಗಿದ್ದ ಭಕ್ತಿಭಾವವು ಬದಲಾಯಿಸಲಿಲ್ಲ. ಏಕೆಂದರೆ ಹಿರಿಯರ ಆಣತಿಯನ್ನು ಸಾಧಿಸುವುದು ನನ್ನ ಕರ್ತವ್ಯವೇ ಹೊರತು ಅವರ ನಡತೆಯನ್ನು ಶೋಧಿಸುವುದಲ್ಲವೆನ್ನುವುದನ್ನು ನಾನು ಮನಗಂಡಿದ್ದೆನು.

ಇದೇ ಕಾಲದಲ್ಲಿ ನಡೆದ ಇನ್ನೆರಡು ಸಂಗತಿಗಳು ನನ್ನ ನೆನಪಿ ನಲ್ಲಿ ಯಾವಾಗಲೂ ಹತ್ತಿಕೊಂಡಿವೆ. ನನ್ನ ಶಾಲೆಯ ಪುಸ್ತಕ ಗಳನ್ನು ಬಿಟ್ಟು ಬೇರೆ ಯಾವುದನ್ನು ಓದುವುದೂ ನನಗೆ ಇಷ್ಟವಿರ

ಲಿಲ್ಲ, ಉಪಾಧ್ಯಾಯರಿಂದ ಬೈಗಳನ್ನು ತಿನ್ನುವುದಾಗಲಿ ಅವರನ್ನು ಮೋಸಪಡಿಸುವುದಾಗಲಿ ನನಗೆ ರುಚಿಸುತ್ತಿರಲಿಲ್ಲವಾದುದರಿಂದ ಆಯಾ ದಿನದ ಪಾಠಗಳನ್ನು ಗಟ್ಟಿಮಾಡಬೇಕಾಗುತ್ತಿದ್ದಿತು. ಆದರೆ ಹೀಗೆ ಮಾಡುವಾಗ ನನ್ನ ಮನಸ್ಸು ಯಾವಾಗಲೂ ಪಾಠನ ಮೇಲೆ ಇರುತ್ತಿದ್ದಿತೆಂದು ಹೇಳಲಾರೆನು. ಈರೀತಿಯಾಗಿ ನನ್ನ ಪಾಠಕ್ಕೆ ಸರಿಯಾಗಿ ಗಮನ ಕೊಡದೆ ಇದ್ದಮೇಲೆ ಇತರ ಪುಸ್ತಕಗಳನ್ನು ಓದುತ್ತಿರಲಿಲ್ಲವೆನ್ನುವುದನ್ನು ಹೇಳಬೇಕಾಗಿಯೇ ಇಲ್ಲ. ಆದರೆ ನಮ್ಮ ತಂದೆಯು ಕೊಂಡುಕೊಂಡಿದ್ದ 'ಶ್ರವಣಪಿತೃಭಕ್ತಿ' ಎಂಬ ನಾಟಕ ಪುಸ್ತಕದ ಮೇಲೆ ಹೇಗೋ ನನ್ನ ದೃಷ್ಟಿಯು ಬಿದ್ದಿತು. ಅದನ್ನು ಬಹಳ ಆಸಕ್ತಿಯಿಂದ ಓದಿದೆನು. ಅದೇ ಸಮಯದಲ್ಲಿ ಊರಿಂದ ಊರಿಗೆ ತಿರುಗುತ್ತಾ ಬೊಂಬೆಗಳನ್ನು ತೋರಿಸುವುದರಿಂದ ಜೀವನಮಾಡುವ ಕೆಲವರು ನಮ್ಮೂರಿಗೆ ಬಂದರು. ಅವರು ತೋರಿಸಿದ ಬೊಂಬೆಗಳಲ್ಲಿ ಶ್ರವಣನು ತನ್ನ ಹೆಗಲಿಗೆ ಜೋಳಿಗೆ ಹಾಕಿಕೊಂಡು ಅದರಲ್ಲಿ ತನ್ನ ತಂದೆ ತಾಯಿಗಳನ್ನು ಯಾತ್ರೆಗಾಗಿ ಹೊತ್ತುಕೊಂಡು ಹೋಗುತ್ತಿದ್ದುದು ಒಂದು. ಈ ಪುಸ್ತಕವೂ ಬೊಂಬೆಯೂ ಸೇರಿ ಶ್ರವಣನ ಕತೆಯು ನನ್ನ ಮನಸ್ಸಿನಿಂದ ಅಳಿಸಿ ಹೋಗದಹಾಗೆ ಮಾಡಿಬಿಟ್ಟವು. "ಶ್ರವಣನ ಪಿತೃಭಕ್ತಿಯು ನೀನು ಆದರ್ಶವಾಗಿಟ್ಟುಕೊಳ್ಳಲು ತಕ್ಕುದು." ಎಂದು ನನ್ನಲ್ಲಿ ನಾನೇ ಹೇಳಿಕೊಂಡೆನು. ಶ್ರವಣನ ಮರಣದಿಂದ ಮನನೊಂದ ಅವನ ತಂದೆ ತಾಯಿಗಳ ಗೋಳಾಟವು ನನ್ನ ಮನಸ್ಸಿನಲ್ಲಿ ಈಗ ಕೇಳಿಬರುವಂತಿದೆ. ಆ ರಾಗವು ನನ್ನ ಹೃದಯವನ್ನು ಕರಗಿಸುವಂತಿದ್ದಿತು. ನಮ್ಮ ತಂದೆಯು ನನಗೆ ತೆಗೆದುಕೊಟ್ಟಿದ್ದ ರಾಗಮಾಲಿಕೆಯಲ್ಲಿ ಅದನ್ನು ನುಡಿಸುತ್ತಿದ್ದೆನು.

ಇನ್ನೊಂದು ನಾಟಕದ ಸಂಬಂಧದಲ್ಲಿ ಇದೇ ತೆರನಾದ ಮತ್ತೊಂದು ಸಂಗತಿಯು ನಡೆಯಿತು. ಇದೇ ಸಮಯದಲ್ಲಿಯೇ ನಾಟಕಮಂಡಲಿಯೊಂದು ಆಡುವ ನಾಟಕವನ್ನು ನೋಡುವುದಕ್ಕೆ ನಮ್ಮ ತಂದೆಯವರ ಅಪ್ಪಣೆಯನ್ನು ಪಡೆದೆನು. ನಾನು ನೋಡಿದ ನಾಟಕವು ಹರಿಶ್ಚಂದ್ರ ಚರಿತ್ರೆಯಾಗಿದ್ದಿತು. ಇದನ್ನು ಎಷ್ಟು ಸಲ ನೋಡಿದರೂ ಸಾಲದೆನ್ನುವ ಮಟ್ಟಿಗೆ ಈ ನಾಟಕವು ನನ್ನ ಮನಸ್ಸನ್ನು ಸೆಳೆಯಿತು. ಆದರೆ ಎಷ್ಟು ಸಲ

ಕೊಂಡೆನು. ನನ್ನ ಹೆಂಡತಿಯ ಪಾತಿವ್ರತ್ಯದ ವಿಚಾರವಾಗಿ ಶಂಕಿಸಲು ಎಳ್ಳಷ್ಟೂ ಕಾರಣವಿರಲಿಲ್ಲ. ಆದರೆ ಅಸೂಯೆಯು ಕಾರಣಗಳಿಗೆ ಕಾಯು ವುದಿಲ್ಲ. ಅವಳು ಯಾವಯಾವಾಗ ಎಲ್ಲೆಲ್ಲಿಗೆ ಹೋಗುತ್ತಾಳೆನ್ನುವುದು ನನಗೆ ತಿಳಿದಿರಲೇಬೇಕು. ಆದ್ದರಿಂದ ನನ್ನ ಅಪ್ಪಣೆಯಿಲ್ಲದೆ ಆಕೆಯು ಎಲ್ಲಿಗೂ ಹೋಗಕೂಡದು. ಇದು ನಮ್ಮಿಬ್ಬರಲ್ಲಿ ದುಃಖಕರವಾದ ಕಲ ಹದ ಬೀಜವನ್ನು ಬಿತ್ತಿತು. ಅಪ್ಪಣೆಯಿಲ್ಲದೆ ಎಲ್ಲಿಯೂ ಹೋಗಕೂಡ ದೆನ್ನುವುದು ಆಕೆಗೆ ಒಂದು ತೆರನಾದ ಸೆರೆಯಾಯಿತು. ಕಸ್ತೂರಿ ಬಾಯಿಯು ಇಂತಹ ವಿಷಯುಗಳನ್ನು ಸಹಿಸುವ ಹುಡುಗಿಯಾಗಿರಲಿಲ್ಲ. ಉದ್ದೇಶಪೂರ್ವಕವಾಗಿ ನನ್ನ ಅಪ್ಪಣೆಯಿಲ್ಲದೆಯೇ ತನಗೆ ಇಷ್ಟಬಂದ ಕಡೆಗೆ ಇಷ್ಟತೋರಿದಾಗ ಹೋಗುವುದಕ್ಕೆ ಪ್ರಾರಂಭಮಾಡಿದಳು. ಅಂಕೆ ಯಲ್ಲಿಟ್ಟಿರಲು ನಾನು ಪ್ರಯತ್ನ ಮಾಡಿದಹಾಗೆಲ್ಲಾ ಅವಳು ಮನ ಬಂದಂತೆ ನಡೆಯುವುದು ಬಲವಾಯಿತು. ಇದರಿಂದ ನನ್ನ ಕೋಪವೂ ಹೆಚ್ಚುತ್ತಾ ಬಂದಿತು. ಈ ಕಾರಣದಿಂದ ಬಾಲದಂಪತಿಗಳಾದ ನಾವು ಒಬ್ಬರಿಗೊಬ್ಬರು ಮಾತನಾಡದಿರುವುದೇ ಪ್ರತಿದಿನದ ಕ್ರಮವಾಯಿತು. ಕಸ್ತೂರಿಬಾಯಿಯು ಸ್ವಾತಂತ್ರ್ಯವನ್ನು ತೋರಿಸುತ್ತಿದ್ದುದರಲ್ಲಿ ತಪ್ಪೇನೂ ಇಲ್ಲವೆಂದು ನನಗೆ ಈಗ ತೋರುತ್ತದೆ. ದೇವರ ದರ್ಶನಕ್ಕೋ ಅಥವಾ ಯಾರಾದರೂ ಗೆಳತಿಯರನ್ನು ನೋಡುವುದಕ್ಕೋ ಹೋಗುವುದನ್ನು ಅಡ್ಡಿ ಮಾಡಿದರೆ ಮನಸ್ಸಿನಲ್ಲಿ ಪಾಪದ ಸುಳಿವೇ ಇಲ್ಲದ ಹುಡುಗಿಯು ಹೇಗೆ ಸಹಿಸುವಳು? ಅವಳನ್ನು ನನ್ನ ಅಂಕೆಯಲ್ಲಿಟ್ಟುಕೊಂಡಿರುವುದಕ್ಕೆ ನನಗೆ ಅಧಿಕಾರವಿದ್ದರೆ ಆಕೆಯು ನನ್ನನ್ನು ತನ್ನ ಅಂಕೆಯಲ್ಲಿಟ್ಟುಕೊಂಡಿರ ಕೂಡದೇಕೆ? ಇದೆಲ್ಲಾ ಈಗ ವಿನೋ ನನಗೆ ತಿಳಿದಿದೆ. ಆದರೆ ಆಗ ನಾನು ನನ್ನ ಯುಜವಮಾನಿಕ ನಡೆಸಬೇಕಾಗಿದ್ದಿತು.

ಇದರಿಂದ ವಾಠಕರು ನಮ್ಮ ಸಂಸಾರದಲ್ಲಿ ಮಾಧುರ್ಯವು ಕೊಂಚವೂ ಇಲ್ಲದೆ ಸದಾ ಮನಃಕ್ಲೇಶವೇ ಇರುತ್ತಿದ್ದಿತೆಂದು ತಿಳಿದು ಕೊಳ್ಳದಿರಲಿ. ನನ್ನ ನಿಷ್ಠುರತೆಗೆ ನನ್ನ ಪ್ರೇಮವೇ ಕಾರಣ. ನನ್ನ ಹೆಂಡತಿಯನ್ನು ಆದರ್ಶಪ್ರಾಯಳಾದ ಹೆಂಗಸನ್ನಾಗಿ ಮಾಡಬೇಕೆನ್ನು ವುದೇ ನನ್ನ ಇಷ್ಟ. ಅವಳು ಶುದ್ಧವಾದ ಜೀವಿತವುಳ್ಳವಳಾಗಬೇಕು;

ನಾನು ಕಲಿಯುವುದನ್ನೇ ಅವಳು ಕಲಿಯಬೇಕು. ನಾನು ಓದುವುದನ್ನೇ ಅವಳು ಓದಬೇಕು; ನಮ್ಮಿಬ್ಬರ ಜೀವನವೂ ಒಂದಾಗಿರಬೇಕು; ಇದೇ ನನ್ನ ಮಹದಾಶಯವಾಗಿದ್ದಿತು.

ಕಸ್ತೂರಿಬಾಯಿಗೆ ಇದೇ ರೀತಿಯಾದ ಭಾವನೆಯಿದ್ದಿತೋ ಇಲ್ಲವೋ ನಾನು ಕಾಣೆ. ಆಕೆಗೆ ಓದುಬರಹ ಬರುತ್ತಿರಲಿಲ್ಲ. ಆಕೆಯು ಸರಳಸ್ವಭಾವದವಳು, ಸ್ವಾತಂತ್ರ್ಯವನ್ನಿಚ್ಛಿಸುವವಳು, ಹಿಡಿದ ಕೆಲಸವನ್ನು ಸಾಧಿಸುವ ಛಲವುಳ್ಳವಳು ಮತ್ತು (ನನ್ನ ಮಟ್ಟಿಗಾದರೂ) ಮಿತಭಾಷಿಣಿ. ತನ್ನ ಅಜ್ಞಾನವು ಆಕೆಗೆ ಸಂತೋಷವನ್ನೇನೂ ಉಂಟುಮಾಡುತ್ತಿರಲಿಲ್ಲ. ನನ್ನ ಓದುಗಾರಿಕೆಯು ಅವಳಲ್ಲಿ ತಾನೂ ಓದಬೇಕೆಂಬ ಉತ್ಸಾಹವನ್ನು ಹುಟ್ಟಿಸಿದಂತೆ ಕಾಣೆ. ಆದುದರಿಂದ ಈ ವಿಧವಾದ ಆಸೆಯೆಲ್ಲಾ ನನ್ನಲ್ಲಿ ಮಾತ್ರ ಇದ್ದಿತು. ನನ್ನ ಪ್ರೇಮಕ್ಕೆಲ್ಲಾ ಒಬ್ಬ ಹೆಂಗಸು ಕೇಂದ್ರಸ್ಥಾನವಾಗಿದ್ದಳು. ಆಕೆಯಿಂದ ಈ ಪ್ರೇಮವು ಪ್ರತಿಧ್ವನಿತವಾಗಬೇಕೆನ್ನುವುದೇ ನನ್ನ ಬಯಕೆಯಾಗಿದ್ದಿತು. ಪ್ರೇಮವು ಒಂದುವೇಳೆ ಪರಸ್ಪರವಾಗಿರದಿದ್ದರೂ ಇಬ್ಬರೊಳಗೆ ಒಬ್ಬರಲ್ಲಿಯಾದರೂ ಪ್ರೇಮ ಜಾಗ್ರುತಿಯಿದ್ದುದರಿಂದ ಸುಖದ ಸುಳಿವೇ ಇಲ್ಲದೆ ಕೇವಲ ದುಃಖಕ್ಕೇ ಅವಕಾಶವಿರಲಿಲ್ಲ.

ಆಕೆಯಲ್ಲಿ ನನಗೆ ಅತ್ಯಧಿಕವಾದ ಪ್ರೀತಿಯಿದ್ದಿತೆಂದೇ ಹೇಳಬೇಕು. ಪಾಠಶಾಲೆಯಲ್ಲಿ ಕೂಡ ಆಕೆಯ ವಿಚಾರವೇ ನನ್ನ ಮನಸ್ಸಿಗೆ ಬರುತ್ತಿದ್ದಿತು. ರಾತ್ರಿ ಎಂದಿಗೆ ಬಂದು ನಾವು ಒಟ್ಟುಗೂಡುವೆವೋ ಎನ್ನುವುದೇ ಸದಾ ನನ್ನ ಯೋಚನೆ. ಅಗಲುವಿಕೆಯು ಸಹಿಸಲಸಾಧ್ಯವಾಗಿ ತೋರುತ್ತಿದ್ದಿತು. ಇಲ್ಲಿಯ ಅಲ್ಲಿಯ ವಿಚಾರ ಮಾತನಾಡುತ್ತಾ ಆಕೆಯನ್ನು ರಾತ್ರಿ ಬಹಳಹೊತ್ತು ಎಚ್ಚರವಾಗಿಟ್ಟಿರುತ್ತಿದ್ದೆನು. ಈರೀತಿಯ ಪ್ರಬಲವಾದ ಆಸಕ್ತಿಯ ಜೊತೆಗೆ ಕರ್ತವ್ಯಪರಾಯಣತೆಯು ನನ್ನಲ್ಲಿ ಇರದಿದ್ದರೆ ನಾನು ರೋಗದಿಂದ ಪೀಡಿತನಾಗಿ ಅಕಾಲಮೃತ್ಯುವಿಗೆ ತುತ್ತಾಗುತ್ತಿದ್ದೆನು. ಅಥವಾ ಭೂಭಾರವಾಗಿ ಜೀವನವನ್ನು ನಡೆಸುತ್ತಾ ಇದ್ದೆನು. ಅಂದಿನಂದಿನ ಕರ್ತವ್ಯಗಳನ್ನು ಮಾಡಬೇಕಾಗಿದ್ದಿತು. ಮತ್ತು

ಯಾರಿಗಾಗಲೀ ಸುಳ್ಳು ಹೇಳುವ ಮಾತೇ ಇಲ್ಲ. ಈ ಸತ್ಯದ ಅನುಸರಣೆಯೇ ನನ್ನನ್ನು ಎಷ್ಟೋ ಸಂಕಟಗಳಿಂದ ಪಾರುಮಾಡಿದೆ.

ಕಸ್ತೂರಿಬಾಯಿಗೆ ಓದುಬರಹ ಬರುತ್ತಿರಲಿಲ್ಲವೆಂದು ಹಿಂದೆಯೇ ಹೇಳಿದ್ದೇನೆ. ಆಕೆಗೆ ವಿದ್ಯೆ ಹೇಳಿಕೊಡಬೇಕೆಂದು ನನಗೆ ದೊಡ್ಡ ಇಚ್ಛೆಯಿದ್ದಿತಾದರೂ ನನ್ನ ವಿಷಯಾಭಿಲಾಷೆಯು ಇದಕ್ಕೆ ಸಮಯವನ್ನು ಕೊಡುವುದೆಲ್ಲಿ? ಆಕೆಗೆ ಒತ್ತಾಯದಿಂದ ಪಾಠ ಹೇಳಿಕೊಡಬೇಕಾಗಿದ್ದಿತು. ಅದೂ ಅಲ್ಲದೆ ಇದು ರಾತ್ರಿಯಹೊತ್ತು ಮಾತ್ರ ಸಾಧ್ಯವಾಗಿತ್ತು. ಏಕೆಂದರೆ ಹಗಲುಹೊತ್ತು ಆಕೆಯನ್ನು ನಮ್ಮ ಹಿರಿಯರೆದುರಿಗೆ ನೋಡಲು ಕೂಡ ಆಗುತ್ತಿರಲಿಲ್ಲವೆಂದಮೇಲೆ ಆಕೆಯೊಡನೆ ಮಾತನಾಡುವುದಿನ್ನೇನು? ಆ ಕಾಲದಲ್ಲಿ ಕಾಥ್ಯವಾಡದಲ್ಲಿ ವಿಚಿತ್ರವಾದ, ನಿರರ್ಥಕವಾದ ಮತ್ತು ಅನಾಗರಿಕವಾದ ಘೋಷಾ ಪದ್ಧತಿಯಿದ್ದಿತು. ಈಗಲೂ ಬಹುಮಟ್ಟಿಗೆ ಇದ್ದೇ ಇದೆ. ಈರೀತಿಯಾಗಿ ಪಾಠ ಹೇಳಿಕೊಡುವುದಕ್ಕೆ ಎಲ್ಲಾ ಪ್ರಕಾರವಾಗಿಯೂ ತೊಂದರೆಯಿದ್ದಿತು. ಈ ಕಾರಣಗಳಿಂದ ನಮ್ಮ ಯುವಾವಸ್ಥೆಯಲ್ಲಿ ನಾನು ಕಸ್ತೂರಿಬಾಯಿಗೆ ಪಾಠ ಕಲಿಸಲು ಮಾಡಿದ ಪ್ರಯತ್ನವೆಲ್ಲಾ ನಿಷ್ಫಲವಾಯಿತೆಂದು ಒಪ್ಪಿಕೊಳ್ಳಬೇಕು. ಯಾವಾಗ ವಿಷಯನಿದ್ರೆಯಿಂದ ಎಚ್ಚರಗೊಂಡೆನೋ ಅಷ್ಟು ಹೊತ್ತಿಗೆ ನಾನು ಸಾರ್ವಜನಿಕ ಕಾರ್ಯಗಳಲ್ಲಿ ಕೈಹಾಕಿದ್ದೆನಾದುದರಿಂದ ನನಗೆ ಸಾಕಾದಷ್ಟು ಬಿಡುವು ದೊರಕುತ್ತಿರಲಿಲ್ಲ. ಶಿಕ್ಷಕರ ಮೂಲಕವಾಗಿ ಪಾಠ ಕಲಿಸಲು ಮಾಡಿದ ಪ್ರಯತ್ನವೂ ಸಫಲವಾಗಲಿಲ್ಲ. ಈಗ ಕಸ್ತೂರಿಬಾಯಿಗೆ ಹಾಗೂ ಹೀಗೂ ಕಾಗದಪತ್ರಗಳನ್ನು ಬರೆಯುವುದಕ್ಕೂ ಸುಲಭವಾದ ಗುಜರಾತಿಯನ್ನು ಓದಿ ತಿಳಿದುಕೊಳ್ಳುವುದಕ್ಕೂ ಬರುತ್ತದೆ. ನಾನು ಆಗ ಮೋಹದಿಂದ ದೂಷಿತನಾಗಿರದಿದ್ದರೆ ಆಕೆಯು ಇಂದು ವಿದ್ವಾಂಸಳಾಗುತ್ತಿದ್ದಳೆಂದು ನನಗೆ ನಂಬಿಕೆಯುಂಟು. ಹಾಗಿದ್ದಲ್ಲಿ ಆಕೆಗೆ ಓದುವ ವಿಚಾರದಲ್ಲಿದ್ದ ಆಲಸ್ಯವನ್ನು ಜಯಿಸಲು ನನಗೆ ಸಾಧ್ಯವಾಗುತ್ತಿದ್ದಿತು. ಏಕೆಂದರೆ ನಿಷ್ಕಲ್ಮಷವಾದ ಪ್ರೀತಿಗೆ ಅಸಾಧ್ಯವಾದುದು ಯಾವುದೂ ಇಲ್ಲವೆಂದು ನನಗೆ ಗೊತ್ತು.

ನಾನು ವಿಷಯಪರನಾಗಿದ್ದರೂ ಹಾಗಿರುವುದರ ದುಷ್ಪರಿಣಾಮಗಳಿಂದ ಮುಕ್ತನಾದುದಕ್ಕೆ ಒಂದು ಕಾರಣವನ್ನು ಹಿಂದೆಯೇ ಸೂಚಿಸಿರುವೆನು. ಇನ್ನೊಂದು ವಿಚಾರವು ಬರೆಯತಕ್ಕುದಾಗಿದೆ. ಯಾರ ಉದ್ದೇಶಗಳು ನಿಷ್ಕಲ್ಮಷವಾಗಿರುತ್ತದೆಯೋ ಅವರನ್ನು ದೇವರೇ ರಕ್ಷಿಸುತ್ತಾನೆಂಬುದು ನನಗೆ ಅನೇಕ ದೃಷ್ಟಾಂತಗಳಿಂದ ಮಂದಟ್ಟಾಗಿದೆ. ಹಿಂದುಗಳಲ್ಲಿ ಹಾನಿಕರವಾದ ಬಾಲ್ಯವಿವಾಹದ ಪದ್ಧತಿಯಿದ್ದೆಡೆಯಲ್ಲೆಲ್ಲಾ ಅದರ ಕೇಡನ್ನು ಕಡಿಮೆ ಮಾಡುವ ಇನ್ನೊಂದು ವಾಡಿಕೆಯುಂಟು. ಚಿಕ್ಕವಯಸ್ಸಿನ ಗಂಡಹೆಂಡಿರನ್ನು ಅವರ ತಂದೆತಾಯಿಗಳು ಬಹುಕಾಲ ಜೊತೆಗೆ ವಾಸಿಸಲು ಬಿಡುವುದಿಲ್ಲ. ಹೆಂಡತಿಯು ಅರ್ಧಕ್ಕಿಂತ ಹೆಚ್ಚಾದ ಸಮಯವನ್ನು ತವರುಮನೆಯಲ್ಲೇ ಕಳೆಯುತ್ತಾಳೆ. ನಮ್ಮ ವಿಚಾರದಲ್ಲೂ ಇದೇರೀತಿಯಾಗಿದ್ದಿತು. ಎಂದರೆ ನಮ್ಮ ಮದುವೆಯಾದಮೇಲಿನ ಐದು ವರ್ಷಗಳಲ್ಲಿ (ಹದಿಮೂರನೆಯ ವಯಸ್ಸಿನಿಂದ ಹದಿನೆಂಟರ ವರೆಗೆ) ನಾವಿಬ್ಬರೂ ಜೊತೆಗಿದ್ದ ಕಾಲವನ್ನೆಲ್ಲಾ ಒಟ್ಟು ಸೇರಿಸಿದರೆ ಮೂರು ವರ್ಷಕ್ಕೆ ಹೆಚ್ಚಾಗಲಾರದು. ನಾವು ೬—೮ ತಿಂಗಳು ಒಟ್ಟಿಗಿರುವುದಕ್ಕಿಲ್ಲ, ನನ್ನ ಹೆಂಡತಿಯನ್ನು ಆಕೆಯ ತವರುಮನೆಯವರು ಕರೆದುಕೊಂಡು ಹೋಗುವುದಕ್ಕೆ ಬರುತ್ತಿದ್ದರು. ಹೀಗೆ ಕರೆದುಕೊಂಡು ಹೋಗುವುದು ಆಗ ನನಗೆ ಬಹು ಅಪ್ರಿಯವಾಗಿ ತೋರುತ್ತಿದ್ದಿತು. ಆದರೆ ಅದು ನಮ್ಮಿಬ್ಬರನ್ನೂ ದುಷ್ಪರಿಣಾಮದಿಂದ ಉಳಿಸಿತು. ನನ್ನ ಹದಿನೆಂಟನೆಯ ವರ್ಷದಲ್ಲಿ ನಾನು ಇಂಗ್ಲೆಂಡಿಗೆ ಪ್ರಯಾಣ ಮಾಡಿದುದರಿಂದ ನಮ್ಮಿಬ್ಬರಿಗೂ ದೀರ್ಘಕಾಲದ ವಿಯೋಗವುಂಟಾಯಿತು. ಇದು ನಮಗೆ ಒಳ್ಳೆಯದನ್ನೇ ಉಂಟುಮಾಡಿತು. ನಾನು ವಿಲಾಯಿತಿಯಿಂದ ಹಿಂತಿರುಗಿ ಬಂದಮೇಲೆ ಕೂಡ ನಾವು ಆರು ತಿಂಗಳಿಗಿಂತ ಹೆಚ್ಚಾಗಿ ಒಟ್ಟಿಗಿರುತ್ತಿರಲಿಲ್ಲ. ಏಕೆಂದರೆ, ನಾನು ರಾಜಕೋಟೆಯಿಂದ ಮುಂಬಯಿಗೂ ಮುಂಬಯಿಯಿಂದ ರಾಜಕೋಟೆಗೂ ಓಡಾಡುತ್ತಲೇ ಇರಬೇಕಾಗಿದ್ದಿತು. ಇದರ ನಂತರ ನಾನು ದಕ್ಷಿಣ ಆಫ್ರಿಕಕ್ಕೆ ಹೋಗುವ ಪ್ರಸಂಗವೊದಗಿತು. ಆದರೆ ಅಷ್ಟುಹೊತ್ತಿಗೆ ನಾನು ವಿಷಯನಿದ್ರೆಯಿಂದ ಬಹುಮಟ್ಟಿಗೆ ಎಚ್ಚರಗೊಂಡಿದ್ದೆನು.

# ೫

# ಹೈಸ್ಕೂಲಿನಲ್ಲಿ

ನನ್ನ ಮದುವೆಯಾದಾಗ ನಾನು ಹೈಸ್ಕೂಲಿನಲ್ಲಿ ಓದುತ್ತಿದ್ದೆನೆಂದು ಹಿಂದೆಯೇ ತಿಳಿಸಿದ್ದೇನೆ. ನಾವು ಮೂರು ಜನ ಅಣ್ಣತಮ್ಮಂದಿರೂ ಒಂದೇ ಶಾಲೆಯಲ್ಲಿ ಓದುತ್ತಿದ್ದೆವು. ನಮ್ಮ ಹಿರಿಯಣ್ಣನು ಬಹಳ ಮುಂದಿನ ಇಯತ್ತೆಯಲ್ಲಿ ಇದ್ದನು. ನನ್ನ ಜೊತೆಯಲ್ಲಿಯೇ ಮದುವೆಯಾದ ಇನ್ನೊಬ್ಬಣ್ಣನು ನನಗಿಂತ ಒಂದು ತರಗತಿ ಮಾತ್ರ ಮುಂದಾಗಿದ್ದನು. ಮದುವೆಯಾದುದರ ಫಲಿತಾಂಶವೇನೆಂದರೆ ನಮ್ಮಿಬ್ಬರಿಗೂ ಒಂದೊಂದು ವರ್ಷ ವ್ಯರ್ಥವಾಯಿತು. ನಮ್ಮಣ್ಣನಿಗಂತೂ ಇದರ ಪರಿಣಾಮ ಇನ್ನೂ ಕೆಟ್ಟದಾಯಿತು—ಅವನು ವಿದ್ಯಾಭ್ಯಾಸವನ್ನು ಸಂಪೂರ್ಣವಾಗಿ ಬಿಟ್ಟೇಬಿಟ್ಟನು. ಎಷ್ಟು ಜನ ಹುಡುಗರ ವಿಷಯದಲ್ಲಿ ಇದೇ ದುಷ್ಪರಿಣಾಮವಾಗುತ್ತದೆಯೋ ಪರಮಾತ್ಮನಿಗೇ ಗೊತ್ತು. ಮದುವೆಯಾದನಂತರ ವಿದ್ಯಾಭ್ಯಾಸ ನಡೆಯುವುದು ಹಿಂದೂ ಸಂಸಾರದಲ್ಲಿ ಮಾತ್ರ.

ನನ್ನ ಓದು ಮುಂದಕ್ಕೆ ಸಾಗಿತು. ಹೈಸ್ಕೂಲಿನಲ್ಲಿ ನಾನು ದಡ್ಡನೆನಿಸಿಕೊಂಡಿರಲಿಲ್ಲ ಶಿಕ್ಷಕರ ಪ್ರೀತಿಯನ್ನು ಸದಾ ಸಂಪಾದಿಸುತ್ತಿದ್ದೆನು. ಪ್ರತಿ ವರ್ಷವೂ ಹುಡುಗರ ಓದುಬರಹ ಮತ್ತು ನಡತೆಗಳ ವಿಚಾರವಾಗಿ ಯೋಗ್ಯತಾಪತ್ರಗಳನ್ನು ಅವರ ತಂದೆತಾಯಿಗಳಿಗೆ ಕಳುಹಿಸಲ್ಪಡುತ್ತಿದ್ದವು ಇವುಗಳಲ್ಲಿ ನನ್ನ ಓದುಬರಹವಾಗಲಿ ನಡತೆಯಾಗಲಿ ಸರಿಯಾಗಿಲ್ಲವೆಂದು ನಾನು ಯಾವಾಗಲೂ ಹೇಳಿಸಿಕೊಳ್ಳಲಿಲ್ಲ. ಎರಡನೆಯ ತರಗತಿಯ ಪರೀಕ್ಷೆಯಲ್ಲಿ ತೇರ್ಗಡೆಯಾದಾಗ ಬಹುಮಾನ ಸಹ ಬಂದಿತು. ಐದನೆಯ ವರ್ಗದಲ್ಲಿ ನಾಲ್ಕು ರೂಪಾಯಿಯ ಮತ್ತು ಆರನೆಯ ವರ್ಗದಲ್ಲಿ ಹತ್ತು ರೂಪಾಯಿಯ ವೇತನವೂ ಬರುತ್ತಿತ್ತು.

ಇದಕ್ಕೆ ನನ್ನ ಯೋಗ್ಯತೆಗಿಂತ ನನ್ನ ಅದೃಷ್ಟವೇ ಹೆಚ್ಚು ಕಾರಣವೆಂದು ಹೇಳಬೇಕು. ಏಕೆಂದರೆ ಈ ವೇತನವು ಕಾಥ್ಯವಾಡದಲ್ಲಿರುವ ಸೋರಠ ಜಿಲ್ಲೆಯವರಲ್ಲಿ ಚೆನ್ನಾಗಿ ಓದುವವರಿಗೆ ಮಾತ್ರ ಕೊಡಲ್ಪಡುತ್ತಿತ್ತು. ತರಗತಿಯಲ್ಲಿಯೇ ಒಟ್ಟು ೪೦–೫೦ ಜನ ಹುಡುಗರಿರುತ್ತಿದ್ದರೆಂದಮೇಲೆ ಸೋರಠಜಿಲ್ಲೆಗೆ ಸೇರಿದವರು ಎಷ್ಟು ಮಂದಿ ಇದ್ದಿರಬಹುದು!

ನನಗೆ ನೆನಪಿರುವುದೇನೆಂದರೆ, ನಾನು ಬಹಳ ಬುದ್ಧಿವಂತನೆಂದು ನಾನೇನೂ ತಿಳಿದುಕೊಂಡಿರಲಿಲ್ಲ. ಬಹುಮಾನವೋ ವೇತನವೋ ದೊರೆತಾಗ ನನಗೆ ಆಶ್ಚರ್ಯವಾಗುತ್ತಿದ್ದಿತು. ಆದರೆ ನನ್ನ ನಡತೆಯ ವಿಚಾರದಲ್ಲಿ ನಾನು ಬಹಳ ಜಾಗರೂಕನಾಗಿದ್ದೆನು. ನಡತೆಯಲ್ಲಿ ಸ್ವಲ್ಪ ಕುಂದು ತೋರಿದರೂ ನನ್ನ ಕಣ್ಣಿನಲ್ಲಿ ನೀರು ಬರುತ್ತಿದ್ದಿತು. ನಾನು ಮಾಡಿದ ಯಾವ ಕೆಲಸಕ್ಕಾಗಲಿ ಶಿಕ್ಷಕರಿಗೆ ಅದು ತಪ್ಪೆಂದು ತೋರಿ ನನ್ನನ್ನು ಅವರು ಬೈದರೆ ನನಗೆ ಸಹಿಸುವುದಕ್ಕೆ ಆಗುತ್ತಿರಲಿಲ್ಲ. ನಾನು ಒಂದುಸಲ ಏಟು ತಿನ್ನಬೇಕಾಯಿತೆನ್ನುವುದು ನನಗೆ ನೆನಪಿದೆ. ಏಟು ತಿಂದುದಕ್ಕಾಗಿ ನನಗೆ ಅಷ್ಟು ದುಃಖವಾಗಲಿಲ್ಲ; ಶಿಕ್ಷೆಗೆ ಯೋಗ್ಯನೆಂದು ಎಣಿಸಲ್ಪಟ್ಟೆನಲ್ಲಾ ಎನ್ನುವುದು ನನಗೆ ಬಹಳ ವ್ಯಥೆಯನ್ನುಂಟುಮಾಡಿತು. ನಾನು ಬಹಳ ಅತ್ತೆನು. ಇದು ನಾನು ಮೊದಲನೆಯ ಅಥವಾ ಎರಡನೆಯ ವರ್ಗದಲ್ಲಿದ್ದಾಗ ನಡೆಯಿತು. ನಾನು ಏಳನೆಯ ತರಗತಿಯಲ್ಲಿ ಇದ್ದಾಗ ನಡೆದ ಇಂತಹ ಪ್ರಸಂಗವಿನ್ನೊಂದಿದೆ. ಆ ಸಮಯದಲ್ಲಿ ದೋರಾಬ್‌ಜೀ ಎದಲ್‌ಜೀ ಗಿಮಿ ಎಂಬವರು ನಮ್ಮ ಮುಖ್ಯ ಉಪಾಧ್ಯಾಯರಾಗಿದ್ದರು. ಇವರು ಹುಡುಗರಿಗೆ ಬೇಕಾದವರಾಗಿದ್ದರು. ಏಕೆಂದರೆ ಇವರು ನಿಯಮಗಳನ್ನು ಖಂಡಿತದಿಂದ ನಡೆಸುತ್ತಿದ್ದರು. ತಮ್ಮ ಕೆಲಸಗಳನ್ನು ಕ್ರಮದಿಂದ ಮಾಡುತ್ತಿದ್ದರು. ಪಾಠಗಳನ್ನು ಚೆನ್ನಾಗಿ ಹೇಳಿಕೊಡುತ್ತಿದ್ದರು. ಇವರು ಮೇಲಿನ ತರಗತಿಯ ಹುಡುಗರಿಗೆ ಕಸರತ್ತು ಮಾಡುವುದನ್ನೂ ಕ್ರಿಕೆಟ್ ಆಡುವುದನ್ನೂ ಕಡ್ಡಾಯವಾಗಿ ವಿಧಿಸಿದ್ದರು. ನನಗೆ ಎರಡರಲ್ಲೂ ಇಷ್ಟವಿರಲಿಲ್ಲ. ಹಾಗೆ ಹೋಗಬೇಕೆಂದು ಕಟ್ಟುಮಾಡುವವರೆಗೂ ನಾನು ಕಸರತ್ತಿಗಾಗಲಿ ಕ್ರಿಕೆಟ್ಟಿಗಾಗಲಿ ಫುಟ್‌ಬಾಲಿಗಾಗಲಿ ಹೋಗುತ್ತಿರಲಿಲ್ಲ. ಹೀಗೆ ಹೋಗ

ಬಿರುವುದಕ್ಕೆ ನನ್ನ ಮುಖಹೇಡಿತನವೂ ಒಂದು ಕಾರಣವಾಗಿತ್ತು. ಹಾಗೆ ಮಾಡುತ್ತಿದ್ದುದು ತಪ್ಪೆಂದು ನನಗೆ ಈಗ ಕಾಣುತ್ತದೆ. ಆಗ ನನಗೆ ಓದಿಗೂ ವ್ಯಾಯಾಮಕ್ಕೂ ಏನೂ ಸಂಬಂಧವಿಲ್ಲವೆಂಬ ತಪ್ಪು ತಿಳಿವಳಿಕೆಯಿದ್ದಿತು. ಆದರೆ ಬುದ್ಧಿಯ ವಿಕಾಸಕ್ಕೆ ಹೇಗೋ ಹಾಗೆ ಶರೀರದ ಬೆಳವಣಿಗೆಗೂ ಶಿಕ್ಷಣಕ್ರಮದಲ್ಲಿ ಪ್ರಾಮುಖ್ಯಸ್ಥಾನವನ್ನು ಕೊಡಬೇಕೆಂದು ನನಗೆ ಈಗ ಗೊತ್ತು.

ವ್ಯಾಯಾಮಕ್ಕೆ ಹೋಗದೆ ಇದ್ದುದರಿಂದ ನನಗೇನೂ ನಷ್ಟವಾಗಲಿಲ್ಲ. ಏಕೆಂದರೆ ಶುದ್ಧವಾದ ಗಾಳಿಯಿರುವಕಡೆ ಸಂಚಾರಮಾಡುವುದು ಒಳ್ಳೆಯದೆಂದು ನಾನು ಪುಸ್ತಕಗಳಲ್ಲಿ ಓದಿದ್ದೆನು. ಇದು ನನ್ನ ಇಷ್ಟಕ್ಕೆ ಬಂದುದರಿಂದ ಹೀಗೆ ತಿರುಗಾಡುವುದನ್ನು ಅಭ್ಯಾಸಮಾಡಿದೆನು. ಇಂದೂ ಕೂಡ ಈ ಅಭ್ಯಾಸವನ್ನು ಬಿಟ್ಟಿಲ್ಲ. ಇದರಿಂದ ನನ್ನ ಶರೀರವು ತಕ್ಕಮಟ್ಟಿಗೆ ಗಟ್ಟಿಯಾಯಿತು.

ಕಸರತ್ತಿಗೆ ಹೋಗಲು ಇಷ್ಟವಿಲ್ಲದಿರುವುದಕ್ಕೆ ನಮ್ಮ ತಂದೆಯ ಸೇವೆಯನ್ನು ಮಾಡಬೇಕೆಂದು ನನಗಿದ್ದ ಪ್ರಬಲವಾದ ಇಚ್ಛೆಯೇ ಕಾರಣ. ಶಾಲೆಯು ಮುಗಿದೊಡನೆಯೇ ಮನೆಯನ್ನು ತ್ವರೆಯಿಂದ ಸೇರಿ ಅವರ ಸೇವೆಯನ್ನು ಪ್ರಾರಂಭಿಸುತ್ತಿದ್ದೆನು. ಕಸರತ್ತಿಗೆ ಹೋಗಲೇಬೇಕೆಂದು ಮಾಡಿದ್ದ ಕಟ್ಟು ಇದಕ್ಕೆ ಕಲ್ಲು ಹಾಕಿತು. ನನಗೆ ನಮ್ಮ ತಂದೆಯವರ ಸೇವೆಯನ್ನು ಮಾಡುವುದು ಸಾಧ್ಯವಿರುವಂತೆ ವ್ಯಾಯಾಮಕ್ಕೆ ಹೋಗಬೇಕೆಂಬ ನಿಯಮದಿಂದ ನನ್ನನ್ನು ಬಿಡುಗಡೆಮಾಡಬೇಕೆಂದು ನಾನು ಗಿಮಿಸಾಹೇಬರನ್ನು ಬೇಡಿಕೊಂಡೆನು. ಆದರೆ ಇದಕ್ಕೆ ಅವರು ಒಪ್ಪಲಿಲ್ಲ. ಒಂದು ಶನಿವಾರ ಬೆಳಿಗ್ಗೆ ನಮ್ಮ ಶಾಲೆಯಾಯಿತು. ಮಧ್ಯಾಹ್ನ ನಾಲ್ಕುಘಂಟೆಗೆ ಶಾಲೆಗೆ ಕಸರತ್ತಿಗೆ ಹೋಗಬೇಕಾಗಿದ್ದಿತು; ನನ್ನ ಹತ್ತಿರ ಗಡಿಯಾರವಿರಲಿಲ್ಲ. ಆಕಾಶದಲ್ಲಿ ಮೋಡ ಕವಿಚಿಕೊಂಡಿದ್ದುದರಿಂದ ಹೊತ್ತು ತಿಳಿಯಲಿಲ್ಲ. ನಾನು ಶಾಲೆಗೆ ಹೋಗುವ ಹೊತ್ತಿಗೆ ಎಲ್ಲರೂ ಹೊರಟುಹೋಗಿದ್ದರು. ಮರುದಿವಸ ಗಿಮಿಸಾಹೇಬರು ಹಾಜರಿ ಪಟ್ಟಿಯನ್ನು ನೋಡಿದಾಗ ನಾನು ಬಂದಿರಲಿಲ್ಲವೆನ್ನುವುದು ಕಂಡುಬಂದಿತು. ನಾನು ನಡೆದುದನ್ನು ಹೇಳಿದೆನು. ಅದು ಅವರ ನಂಬಿಕೆಗೆ

ಬಾರದೆ ಅವರು ನನಗೆ ಒಂದು ಆಣೆಯೋ ಎರಡು ಆಣೆಯೋ (ಸರಿಯಾಗಿ ಎಷ್ಟೆನ್ನುವುದು ಮರೆತುಹೋಗಿದೆ) ಜುಲ್ಮಾನೆಯನ್ನು ವಿಧಿಸಿದರು.

ನಾನು ಸುಳ್ಳು ಹೇಳಿದೆನೆಂದಾಯಿತು. ಇದರಿಂದ ನನಗೆ ವಿಶೇಷ ದುಃಖವಾಯಿತು. ನಾನು ಹೇಳಿದುದು ಸುಳ್ಳಲ್ಲವೆಂದು ತೋರಿಸುವುದು ಹೇಗೆ? ಇದಕ್ಕೆ ಯಾವ ಉಪಾಯವೂ ಇರಲಿಲ್ಲ. ನಾನು ಕಡು ಸಂಕಟದಿಂದ ಕಣ್ಣೀರು ಸುರಿಸಿದೆನು. ಸತ್ಯವನ್ನೇ ಹೇಳಬೇಕು ಎಂಬುವನು ಯಾವಾಗಲೂ ಎಚ್ಚರವುಳ್ಳವನಾಗಿರಬೇಕೆನ್ನುವುದು ಅಂದು ನನಗೆ ತಿಳಿಯಿತು. ನಾನು ಓದುತ್ತಿರುವ ಕಾಲದಲ್ಲಿ ಅಜಾಗರೂಕನಾಗಿದ್ದುದು ಇದು ಮೊದಲನೆಯ ಸಲ, ಇದೇ ಕಡೆಯ ಸಲ. ಈ ಜುಲ್ಮಾನೆಯನ್ನು ಮಾಫಿ ಮಾಡಿಸಿಕೊಂಡೆನೆಂದು ಎಲ್ಲೋ ಸ್ವಲ್ಪ ನೆನಪಿದೆ.

ಶಾಲೆ ಮುಗಿದಕೂಡಲೇ ತಮ್ಮ ಸೇವೆಗೋಸ್ಕರ ನಾನು ಮನೆಯಲ್ಲಿರಬೇಕೆಂದು ನಮ್ಮ ತಂದೆಯವರು ಮುಖ್ಯೋಪಾಧ್ಯಾಯರಿಗೆ ಬರೆದುದರಿಂದ ಕಸರತ್ತು ಮಾಡದಿರುವುದಕ್ಕೆ ನನಗೆ ಅಪ್ಪಣೆ ದೊರಕಿತು. ವ್ಯಾಯಾಮಕ್ಕೆ ಹೋಗದೆ ಇದ್ದುದರಿಂದ ನನಗೆ ನಷ್ಟವೇನೂ ಆಗದಿದ್ದರೂ ಆಗ ನಾನು ಇನ್ನೊಂದು ವಿಚಾರದಲ್ಲಿ ಮಾಡಿದ ಅಸಡ್ಡೆಯ ದುಷ್ಫಲವನ್ನು ಇಂದೂ ಅನುಭವಿಸುತ್ತಿದ್ದೇನೆ. ಓದು ಕಲಿತುಕೊಳ್ಳುವಾಗ ಒಳ್ಳೆಯ ಬರಹವನ್ನು ಕಲಿತುಕೊಳ್ಳುವ ಆವಶ್ಯಕತೆಯೇನೂ ಇಲ್ಲವೆನ್ನುವ ಅಭಿಪ್ರಾಯವು ನನ್ನ ಮನಸ್ಸಿಗೆ ಹೇಗೆ ಅಂಟಿತೋ ಕಾಣೆ. ನಾನು ಇಂಗ್ಲೆಂಡಿಗೆ ಹೋಗುವವರೆಗೂ ಹೀಗೆಯೇ ತಿಳಿದುಕೊಂಡಿದ್ದೆನು. ಆಮೇಲೆ, ಅದರಲ್ಲೂ ದಕ್ಷಿಣ ಆಫ್ರಿಕದಲ್ಲಿ ಅಲ್ಲಿಯೇ ಹುಟ್ಟಿ ಅಲ್ಲಿಯೇ ಶಿಕ್ಷಣ ಹೊಂದಿದ ವಕೀಲರು ಮತ್ತು ಯುವಕರು ಇವರುಗಳ ಮುತ್ತು ಪೋಣಿಸಿದಂತೆ ಅಂದವಾಗಿರುವ ಬರಹವನ್ನು ನೋಡಿ ನನಗೆ ನಾಚಿಕೆಯಾಗಿ ಪಶ್ಚಾತ್ತಾಪಪಟ್ಟೆನು. ಡೊಂಕುಡೊಂಕಾದ ಅಕ್ಷರಗಳನ್ನು ಅಪಕ್ವವಾದ ಶಿಕ್ಷಣದ ಚಿಹ್ನೆಯೆಂದೆಣಿಸಬೇಕೆಂದು ಆಗ ನಾನು ತಿಳಿದುಕೊಂಡೆನು. ಆಮೇಲೆ ಬರಹವನ್ನು ಸರಿಮಾಡಿಕೊಳ್ಳಲು ಪ್ರಯತ್ನಪಟ್ಟೆನು. ಆದರೆ ಅಷ್ಟುಹೊತ್ತಿಗೆ ಕಾಲ ಮೀರಿಹೋಗಿದ್ದಿತು. ಚಿಕ್ಕ ವಯಸ್ಸಿನಲ್ಲಿ ಅಸಡ್ಡೆಮಾಡಿದುದನ್ನು ಆಮೇಲೆ ತಿದ್ದಿಕೊಳ್ಳಲು ಸಾಧ್ಯವೇ

ಆಗಲಿಲ್ಲ. ನನ್ನ ಉದಾಹರಣೆಯಿಂದ ಒಳ್ಳೆಯ ಬರಹವು ಸರಿಯಾದ ಶಿಕ್ಷಣದ ಒಂದು ಆವಶ್ಯಕವಾದ ಅಂಗವೆನ್ನುವುದನ್ನು ಪ್ರತಿಯೊಬ್ಬ ಯುವಕನೂ ಯುವತಿಯೂ ತಿಳಿದುಕೊಳ್ಳಲಿ. ಮಕ್ಕಳಿಗೆ ಅಕ್ಷರ ಬರೆಯುವುದನ್ನು ಕಲಿಸಿಕೊಡುವುದಕ್ಕೆ ಮುಂಚೆ ಚಿತ್ರಕಲೆಯನ್ನು ಹೇಳಿ ಕೊಡಬೇಕೆಂದು ಈಗ ನನ್ನ ಅಭಿಪ್ರಾಯ. ಹೂವುಗಳು, ಪಕ್ಷಿಗಳು ಮುಂತಾದ ಪದಾರ್ಥಗಳನ್ನು ನೋಡಿ ಹೇಗೆ ಮಕ್ಕಳು ಅವುಗಳನ್ನು ಸಹಜವಾಗಿ ತಿಳಿದುಕೊಳ್ಳುತ್ತಾರೆಯೋ ಹಾಗೆ ಅಕ್ಷರಗಳನ್ನೂ ನೋಡಿ ಕಲಿತುಕೊಳ್ಳಲಿ. ಪದಾರ್ಥಗಳ ಚಿತ್ರಗಳನ್ನು ಬರೆಯುವುದನ್ನು ಕಲಿತು ಕೊಂಡಮೇಲೆ ಅಕ್ಷರಗಳನ್ನು ಬರಯುವುದನ್ನು ಕಲಿತುಕೊಳ್ಳಲಿ. ಆಗ ಅವರ ಬರಹವು ಅಂದವಾಗುತ್ತದೆ.

ಈ ವಿದ್ಯಾಭ್ಯಾಸದ ಕಾಲಕ್ಕೆ ಸಂಬಂಧಪಟ್ಟ ಇನ್ನೆರಡು ಸಂಗತಿ ಗಳು ಬರೆಯತಕ್ಕುವಾಗಿವೆ. ನನ್ನ ಮದುವೆಯಿಂದ ನಾನು ಒಂದು ವರ್ಷ ಕಳೆದುಕೊಂಡಿದ್ದೆನು. ನಮ್ಮ ಉಪಾಧ್ಯಾಯರು ಇದನ್ನು ಉಳಿ ಸುವುದಕ್ಕೋಸ್ಕರ ನಾನು ಒಂದೇ ವರ್ಷದಲ್ಲಿ ಎರಡು ತರಗತಿಗಳನ್ನು ದಾಟಬೇಕೆಂದು ಇಷ್ಟಪಟ್ಟರು. ಸಾಮಾನ್ಯವಾಗಿ ಈ ಅಧಿಕಾರವು ಶ್ರದ್ಧೆಯಿಂದ ಓದುವ ಹುಡುಗರಿಗೆ ಮಾತ್ರ ದೊರಕುತ್ತಿದ್ದಿತು. ಆದುದ ರಿಂದ ನಾನು ಮೂರನೆಯ ವರ್ಗದಲ್ಲಿ ಆರುತಿಂಗಳು ಮಾತ್ರ ಇದ್ದು ಬೇಸಗೆ ರಜಕ್ಕೆ ಮುಂಚೆ ಆಗುವ ಪರೀಕ್ಷೆಯಾದಮೇಲೆ ನಾಲ್ಕನೆಯ ತರಗತಿಗೆ ಬಂದೆನು. ಈ ವರ್ಗದಲ್ಲಿ ಬಹುಮಟ್ಟಿನ ವಿಷಯಗಳನ್ನು ಇಂಗ್ಲಿಷಿನಲ್ಲಿ ಹೇಳಿಕೊಡುತ್ತಿದ್ದರು. ಇದು ನನಗೆ ಕೊಂಚವೂ ತಿಳಿಯುತ್ತಿರಲಿಲ್ಲ. ರೇಖಾಗಣಿತವೂ ನಾಲ್ಕನೆಯ ಇಯತ್ತೆಯಲ್ಲಿಯೇ ಪ್ರಾರಂಭವಾಗುತ್ತಿ ದ್ದಿತು. ಮೊದಲೇ ಇದು ನನಗೆ ಕಷ್ಟವಾಗುತ್ತಿದ್ದಿತು. ಇಂಗ್ಲಿಷಿನಲ್ಲಿ ಹೇಳಿ ಕೊಡುತ್ತಿದ್ದುದರಿಂದ ಇದು ಇನ್ನೂ ಕಷ್ಟವಾಯಿತು. ಉಪಾಧ್ಯಾಯ ರೇನೋ ಬಹಳ ಚೆನ್ನಾಗಿಯೇ ಪಾಠ ಹೇಳುತ್ತಿದ್ದರು. ಆದರೂ ತಿಳಿಯದೇ ಇರುತ್ತಿದ್ದುದರಿಂದ ಎಷ್ಟೋ ಸಲ ಆಸೆ ಬಿಟ್ಟು ಎರಡು ವರ್ಷದಲ್ಲಿ ಮಾಡುವ ಕೆಲಸವನ್ನು ಒಂದೇ ವರ್ಷದಲ್ಲಿ ಮುಗಿಸುವ ಪ್ರಯತ್ನವು ನನ್ನ ಶಕ್ತಿಗೆ ಮೀರಿದುದೆಂದು ತೋರಿ ಮೂರನೆಯ ತರಗತಿಗೆ ಹೋಗಿ

ಕುಳಿತುಕೊಳ್ಳಬೇಕೆನಿಸುತ್ತಿದ್ದಿತು. ಆದರೆ ಹಾಗೆ ಮಾಡಿದರೆ ನನಗೆ ಅವಮಾನವಾಗುವುದಲ್ಲದೆ ನನ್ನಲ್ಲಿ ವಿಶ್ವಾಸವನ್ನಿಟ್ಟು ಶಿಕ್ಷಕರು ಸಿಫಾರಸು ಮಾಡಿದ್ದುದರಿಂದ ಅವರ ಅವಮಾನಕ್ಕೂ ಕಾರಣವಾಗುತ್ತಿದ್ದಿತು. ಈ ಇಮ್ಮಡಿ ಅಪಮಾನದ ಭಯವು ಹಾಗೆ ಮಾಡುವುದನ್ನು ತಪ್ಪಿಸಿತು. ಪ್ರಯತ್ನಮಾಡಿ 'ಯೂಕ್ಲಿಡ್'ನ ೧೩ನೆಯ ಪ್ರಮೇಯಕ್ಕೆ ಬರುತ್ತಲೇ ಇದು ಅತಿ ಸರಳವಾದ ವಿಷಯವೆನ್ನುವುದು ಒಮ್ಮೆಯೇ ನನ್ನ ಮನಸ್ಸನ್ನು ತಟ್ಟಿತು. ಕೇವಲ ಬುದ್ಧಿಯನ್ನು ಸರಳವಾಗಿ ಉಪಯೋಗಿಸುವುದರಿಂದ ತಿಳಿಯುವ ವಿಷಯಗಳಲ್ಲಿ ತೊಡಕೇನಿದ್ದೀತು? ಅಂದಿನಿಂದ ರೇಖಾಗಣಿತವು ನನಗೆ ಸುಲಭವಾಯಿತಲ್ಲದೆ ಅದರಲ್ಲಿ ಕುತೂಹಲವೂ ಹುಟ್ಟಿತು.

ಆದರೆ ಸಂಸ್ಕೃತವು ಇನ್ನೂ ಹೆಚ್ಚು ಕಷ್ಟವನ್ನು ಕೊಟ್ಟಿತು. ರೇಖಾಗಣಿತದಲ್ಲಿ ಕಂಠಪಾಠಮಾಡಬೇಕಾದುದೇನೂ ಇರಲಿಲ್ಲ. ಸಂಸ್ಕೃತದಲ್ಲಾದರೋ ಎಲ್ಲಾ ಬಾಯಿಗೆ ಗಟ್ಟಿಮಾಡಬೇಕಾದುದೇ ಎಂದು ನನಗೆ ತೋರಿತು. ಇದು ಕೂಡ ನಾಲ್ಕನೆಯ ತರಗತಿಯಲ್ಲಿಯೇ ಪ್ರಾರಂಭವಾಗುತ್ತಿದ್ದಿತು. ಆರನೆಯ ಇಯತ್ತೆಗೆ ಹೋದಕೂಡಲೇ ನಾನು ಎದೆಗುಂದಿದೆನು. ಸಂಸ್ಕೃತದ ಶಿಕ್ಷಕರು ನಮ್ಮಿಂದ ಬಹಳ ಕೆಲಸ ತೆಗೆಯುತ್ತಿದ್ದರು. ಹುಡುಗರಿಗೆ ಇಷ್ಟವಿರಲಿ ಇಲ್ಲದಿರಲಿ ಅವರ ಮೆದುಳಿನಲ್ಲಿ ವಿಷಯವನ್ನು ತುಂಬಬೇಕೆನ್ನುವುದು ಇವರ ಆಸೆಯೆಂದು ನನಗೆ ತೋರಿತು. ಸಂಸ್ಕೃತದ ವರ್ಗಕ್ಕೂ ಪಾರಸಿಯ ವರ್ಗಕ್ಕೂ ಒಂದು ರೀತಿಯ ಪೋಟಾಪೋಟಿಯಿದ್ದಿತು. ಪಾರಸಿಯನ್ನು ಹೇಳಿಕೊಡುವ ಮೌಲ್ವಿಯವರು ಹೆಚ್ಚಾಗಿ ದಂಡಿಸುತ್ತಿರಲಿಲ್ಲ. "ಪಾರಸಿಯು ಬಹಳ ಸುಲಭವಾದ ಭಾಷೆ; ಪಾರಸೀ ಉಪಾಧ್ಯಾಯರು ಬಹಳ ಒಳ್ಳೆಯವರು; ಹುಡುಗರ ವಿಷಯದಲ್ಲಿ ಅವರು ಕನಿಕರವನ್ನು ತೋರಿಸುತ್ತಾರೆ." ಎಂದು ಹುಡುಗರು ತಮ್ಮತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು. ಪಾರಸೀ ಭಾಷೆಯು ಸುಲಭವೆನ್ನುವುದನ್ನು ಕೇಳಿ ನನಗೆ ಚಪಲ ಹುಟ್ಟಿ ನಾನು ಒಂದು ದಿನ ಪಾರಸೀವರ್ಗದಲ್ಲಿ ಹೋಗಿ ಕುಳಿತೆನು. ಸಂಸ್ಕೃತದ ಅಧ್ಯಾಪಕರಿಗೆ ಇದರಿಂದ ದುಃಖವುಂಟಾಯಿತು. ಅವರು ನನ್ನನ್ನು

ಕರೆಸಿ ಹೀಗೆ ಹೇಳಿದರು: "ನಿಮ್ಮ ತಂದೆಯು ವೈಷ್ಣವರೆನ್ನುವುದನ್ನು ನೀನು ಮರೆತುದು ತಾನೆ ಹೇಗೆ? ನಿನ್ನ ಸ್ವಂತ ಧರ್ಮಕ್ಕೆ ಸಂಬಂಧಪಟ್ಟ ಭಾಷೆಯನ್ನು ಕಲಿಯುವುದಿಲ್ಲವೇ? ನನಗಾದರೋ ನನ್ನ ಶಕ್ತಿ ಮೀರಿ ಹುಡುಗರಿಗೆ ಸಂಸ್ಕೃತ ಕಲಿಸಬೇಕೆಂಬ ಇಚ್ಛೆಯಿದೆ. ಹೆಚ್ಚು ಹೆಚ್ಚು ಓದಿದಹಾಗೆಲ್ಲಾ ಅದರಲ್ಲಿರುವ ಸ್ವಾರಸ್ಯವು ನಿಮ್ಮ ಅನುಭವಕ್ಕೇ ಬರುತ್ತದೆ. ನೀನು ಈರೀತಿಯಾಗಿ ಬಗೆಗೆಡಬಾರದು. ಪುನಃ ಸಂಸ್ಕೃತದ ವರ್ಗಕ್ಕೆ ಬಂದು ಪಾಠವನ್ನು ಕಲಿತುಕೊ." ದಯಾಭರಿತವಾದ ಈ ಮಾತನ್ನು ಕೇಳಿ ನನಗೆ ಬಹಳ ನಾಚಿಕೆಯಾಯಿತು. ಶಿಕ್ಷಕರ ಪ್ರೇಮ ವನ್ನು ಅನಾದರಿಸಲು ನನ್ನ ಮನಸ್ಸು ಒಡಂಬಡಲಿಲ್ಲ. ಇಂದು ನಾನು ಕೃಷ್ಣಶಂಕರ ಪಾಂಡ್ಯರಿಂದ ಆದ ಉಪಕಾರವನ್ನು ಕೃತಜ್ಞತೆಯಿಂದ ನೆನಸಿ ಕೊಳ್ಳುತ್ತೇನೆ. ಏಕೆಂದರೆ ಆಗ ನಾನು ಕಲಿತುಕೊಂಡಷ್ಟು ಸಂಸ್ಕೃತವು ಕೂಡ ನನಗೆ ತಿಳಿಯದಿದ್ದರೆ ನಮ್ಮ ಪವಿತ್ರ ಗ್ರಂಥಗಳಲ್ಲಿ ನನಗೆ ಆಸಕ್ತಿ ಹುಟ್ಟುವುದೇ ಕಷ್ಟವಾಗುತ್ತಿದ್ದಿತು. ನಾನು ಇನ್ನೂ ಚೆನ್ನಾಗಿ ಸಂಸ್ಕೃತ ವನ್ನು ಕಲಿಯಲಿಲ್ಲವೆಂದು ಪಶ್ಚಾತ್ತಾಪಪಡುತ್ತೇನೆ. ಏಕೆಂದರೆ ಯಾವ ಹಿಂದೂ ಬಾಲಕನಾಗಲಿ ಬಾಲಕಿಯಾಗಲಿ ಸಂಸ್ಕೃತದ ಅಧ್ಯಯನವನ್ನು ಚೆನ್ನಾಗಿ ಮಾಡದೆ ಇರಕೂಡದೆಂದು ಆಮೇಲೆ ನಾನು ಅರಿತುಕೊಂಡೆನು.

ಈಗ ನನ್ನ ಅಭಿಪ್ರಾಯವೇನೆಂದರೆ: ಭಾರತ ವರ್ಷದಲ್ಲಿರುವ ಎಲ್ಲಾ ಉಚ್ಚಶಿಕ್ಷಣಕ್ರಮಗಳಲ್ಲಿಯೂ ಮಾತೃಭಾಷೆಯಲ್ಲದೆ ಹಿಂದೀ, ಸಂಸ್ಕೃತ, ಪಾರಸಿ, ಅರಬ್ಬಿ ಮತ್ತು ಇಂಗ್ಲಿಷ್ ಈ ಭಾಷೆಗಳಿಗೆ ಸ್ಥಾನ ವನ್ನು ಕೊಡಬೇಕು. ಈ ಭಾಷೆಗಳ ಸಂಖ್ಯೆಯನ್ನು ನೋಡಿ ಯಾರೂ ಹೆದರಲು ಕಾರಣವಿಲ್ಲ. ನಮ್ಮ ಶಿಕ್ಷಣಕ್ರಮವು ಸರಿಯಾಗಿದ್ದು ಎಲ್ಲಾ ವಿಷಯಗಳನ್ನೂ ಪರಭಾಷೆಯಾದ ಇಂಗ್ಲೀಷಿನ ಮುಖಾಂತರ ಕಲಿತು ಕೊಳ್ಳಬೇಕಾದ ಹೊರೆಯು ಹುಡುಗರಿಗೆ ತಪ್ಪಿದರೆ ಈ ಭಾಷೆಗಳನ್ನು ಕಲಿಯುವುದು ಸುಲಭವಷ್ಟೇ ಅಲ್ಲ, ಸಂತೋಷದಾಯಕವೂ ಆಗು ವುದು. ಯಾವುದಾದರೂ ಒಂದು ಭಾಷೆಯನ್ನು ಶಾಸ್ತ್ರರೀತಿಯಾಗಿ ಕಲಿತರೆ ಇತರ ಭಾಷೆಗಳ ಜ್ಞಾನವನ್ನು ಸುಲಭವಾಗಿ ಸಂಪಾದಿಸಬಹುದು

ಸರಿಯಾಗಿ ನೋಡಿದರೆ ಹಿಂದೀ, ಗುಜರಾತಿ, ಸಂಸ್ಕೃತ ಇವು ಮೂರನ್ನೂ ಒಟ್ಟು ಒಂದು ಭಾಷೆಯಾಗಿ ಎಣಿಸಬಹುದು. ಇದೇಪ್ರಕಾರ ಪಾರಸೀ ಮತ್ತು ಅರಬ್ಬೀ ಭಾಷೆಗಳು ಒಂದೇ. ಸಂಸ್ಕೃತ ಮತ್ತು ಪಾರಸೀ ಭಾಷೆಗಳ ಗುಂಪು ಬೇರೆ, ಅರಬ್ಬೀ ಮತ್ತು ಹೀಬ್ರ್ಯೂ (ಯೆಹೂದ್ಯರ) ಭಾಷೆಗಳ ಪಂಗಡವೇ ಬೇರೆ ಎನ್ನುವುದು ನಿಜ. ಆದರೂ ಪಾರಸೀ, ಅರಬ್ಬೀ ಭಾಷೆಗಳೆರಡರ ಪೂರ್ಣವಿಕಾಸಕ್ಕೂ ಇಸ್ಲಾಂ ಮತದ ಪ್ರಚಾರವೇ ಕಾರಣವಾದುದರಿಂದ ಇವೆರಡಕ್ಕೂ ನಿಕಟಸಂಬಂಧವಿದೆ. ಉರ್ದುವನ್ನು ನಾನು ಬೇರೆ ಭಾಷೆಯಾಗಿ ಎಣಿಸಿಲ್ಲ. ಏಕೆಂದರೆ ಅದರ ವ್ಯಾಕರಣವು ಹಿಂದೀ ವ್ಯಾಕರಣ. ಅದರ ಶಬ್ದಗಳು ಪಾರಸೀ ಮತ್ತು ಅರಬ್ಬೀಭಾಷೆಯವು. ಗುಜರಾತಿ, ಹಿಂದೀ, ಬಂಗಾಲೀ ಅಥವಾ ಮರಾಠೀಭಾಷೆಯನ್ನು ಸರಿಯಾಗಿ ಕಲಿತುಕೊಳ್ಳುವುದಕ್ಕೆ ಸಂಸ್ಕೃತದ ಜ್ಞಾನವು ಹೇಗೆ ಅಗತ್ಯವೋ ಉರ್ದುವನ್ನು ಸರಿಯಾಗಿ ಅಭ್ಯಾಸಮಾಡುವುದಕ್ಕೆ ಪಾರಸೀ ಮತ್ತು ಅರಬ್ಬೀಭಾಷೆಗಳನ್ನು ಕಲಿಯುವುದು ಹಾಗೆಯೇ ಆವಶ್ಯಕ.



೬

# ದುಃಖಕರವಾದ ಪ್ರಸಂಗ (೧)

ಹೈಸ್ಕೂಲಿನಲ್ಲಿ ನನಗೆ ಆಪ್ತರಾದ ಸ್ನೇಹಿತರು ಕೆಲವುಜನ ಮಾತ್ರ ಇದ್ದರೆಂದು ಹಿಂದೆ ಹೇಳಿದ್ದೇನೆ. ಕೇವಲ ಆಪ್ತರಾದ ಸ್ನೇಹಿತರು ಬೇರೆ ಬೇರೆ ಕಾಲಗಳಲ್ಲಿ ಇಬ್ಬರು ಇದ್ದರು. ಒಬ್ಬನ ಸಂಬಂಧವು ಬಹಳ ದಿನ ಗಳಿರಲಿಲ್ಲ. ನಾನು ಆತನ ಸ್ನೇಹವನ್ನು ಎಂದಿಗೂ ಬಿಡಲಿಲ್ಲ. ನಾನು ಇನ್ನೊಬ್ಬನ ಮೈತ್ರಿಯನ್ನು ಬೆಳಸಿದುದಕ್ಕಾಗಿ ಈತನು ನನ್ನ ಸಂಗವನ್ನು ತ್ಯಜಿಸಿದನು. ಈ ಎರಡನೆಯ ಸ್ನೇಹವು ನನ್ನ ಜೀವಮಾನದಲ್ಲಿ ದುಃಖ ಕರವಾದ ಅಧ್ಯಾಯವೆಂದು ಎಣಿಸುತ್ತೇನೆ. ಈ ಸ್ನೇಹವು ಬಹಳ ದಿನದ ವರೆಗೆ ಇದ್ದಿತು. ನಾನು ಸುಧಾರಕನ ದೃಷ್ಟಿಯಿಂದ ಈ ಗೆಳೆತನ ವನ್ನು ಮಾಡಿದೆನು.

ಈತನು ಮೊದಲು ನಮ್ಮಣ್ಣನ ಮಿತ್ರನಾಗಿದ್ದನು. ಅವರಿಬ್ಬರೂ ಒಂದೇ ತರಗತಿಯಲ್ಲಿ ಓದಿದವರಾಗಿದ್ದರು. ಅವನಲ್ಲಿದ್ದ ಕೊರತೆಗಳೆಲ್ಲವೂ ನನಗೆ ಗೊತ್ತಿದ್ದುವು. ಆದರೂ ನಾನು ಅವನನ್ನು ವಿಶ್ವಾಸಾರ್ಹನಾದ ಸ್ನೇಹಿತನೆಂದು ಎಣಿಸಿದೆನು. ನಮ್ಮ ತಾಯಿ, ನಮ್ಮ ಹಿರಿಯಣ್ಣ ಮತ್ತು ನನ್ನ ಹೆಂಡತಿ, ಇವರೆಲ್ಲರೂ ಇದು ಕೆಟ್ಟ ಸಹವಾಸವೆಂದು ನನ್ನನ್ನು ಮುಂದಾಗಿಯೇ ಎಚ್ಚರಿಸಿದರು. ಹೆಂಡತಿಯ ಮಾತಿನಂತೆ ನಡೆಯುವುದೇನು ಎಂಬ ಗರ್ವವು ಆಗ ನನ್ನಲ್ಲಿದ್ದಿತು. ಆದರೆ ನನಗೆ ನಮ್ಮ ತಾಯಿಯ ಮತ್ತು ನಮ್ಮ ಅಣ್ಣನ ಅಭಿಮತಕ್ಕೆ ವಿರೋಧವಾಗಿ ಹೋಗುವ ಧೈರ್ಯವಿರಲಿಲ್ಲ. ಆದರೂ ಅವರನ್ನು ಈರೀತಿಯಾಗಿ ಸಮಾಧಾನ ಮಾಡಿದೆನು: "ನೀವು ಆರೋಪಿಸುವ ಕೊರತೆಗಳು ಅವನಲ್ಲಿವೆಯೆಂದು ನನಗೆ ಗೊತ್ತು. ಆದರೆ ಅವನ ಗುಣಗಳು ನಿಮಗೆ ತಿಳಿದಿಲ್ಲ. ನನ್ನನ್ನು ಕೆಟ್ಟ ಮಾರ್ಗಕ್ಕೆ ಅವನು ಎಳೆಯಲಾರನು.

ಏಕೆಂದರೆ ಅವನನ್ನು ಒಳ್ಳೆಯ ದಾರಿಗೆ ತರಬೇಕೆಂದೇ ನಾನು ಅವನೊಡನೆ ಸ್ನೇಹವನ್ನು ಬೆಳೆಸಿರುವುದು. ತನ್ನ ನಡತೆಯನ್ನು ಮಾರ್ಪಡಿಸಿಕೊಂಡರೆ ಅವನು ಬಹಳ ಒಳ್ಳೆಯ ಮನುಷ್ಯನಾಗುವನೆಂದು ನನಗೆ ನಂಬಿಕೆಯಿದೆ. ನನ್ನ ವಿಷಯದಲ್ಲಿ ನೀವು ಕೇವಲ ನಿರ್ಭಯರಾಗಿರಬೇಕೆಂದು ನನ್ನ ಪ್ರಾರ್ಥನೆ."

ಇದರಿಂದ ಅವರಿಗೆ ತೃಪ್ತಿಯಾಯಿತೆಂದು ಹೇಳಲಾರೆನು. ಆದರೆ ನನ್ನಲ್ಲಿ ನಂಬಿಕೆಯಿಟ್ಟು ನನ್ನ ಇಷ್ಟಬಂದಂತೆ ನಡೆಯುವುದಕ್ಕೆ ಅನುಮತಿಯನ್ನು ಕೊಟ್ಟರು.

ಆಗ ನಾನು ತಿಳಿದುಕೊಂಡಿದ್ದುದು ತಪ್ಪೆಂದು ಆಮೇಲೆ ನನ್ನ ಅನುಭವಕ್ಕೆ ಬಂದಿತು. ಸುಧಾರಣೆ ಮಾಡುವುದಕ್ಕೆ ಹೊರಡುವವನು ಯಾರನ್ನು ಸನ್ಮಾರ್ಗಕ್ಕೆ ತರಬೇಕೆಂದಿರುವನೋ ಅವನೊಡನೆ ಬಹಳ ಸಲಿಗೆಯಿಂದಿರಲಾಗುವುದಿಲ್ಲ. ನಿಜವಾದ ಮೈತ್ರಿಯಲ್ಲಿ ನಾನು ತಾನು ಎಂಬ ಭೇದವು ಅಳಿಸಿಹೋಗಿರುತ್ತದೆ. ಇಂತಹ ಸ್ನೇಹವು ಪ್ರಪಂಚದಲ್ಲಿ ಬಹಳ ಅಪರೂಪ. ಸಮಾನಗುಣವುಳ್ಳ ಬಾಲಕರಲ್ಲಿ ಮಾತ್ರ ಯೋಗ್ಯವಾದ ಮತ್ತು ಬಹಳ ದಿನವಿರುವ ಸ್ನೇಹವು ಸಾಧ್ಯ. ಒಬ್ಬ ಸ್ನೇಹಿತನಿಂದ ಇನ್ನೊಬ್ಬನ ನಡತೆಯು ಯಾವಾಗಲೂ ಮಾರ್ಪಡುವುದರಿಂದ ಸುಧಾರಣೆಗೆ ಅವಕಾಶವು ಸ್ನೇಹಗಳಲ್ಲಿ ದುರ್ಲಭ. ತುಂಬ ಸಲಿಗೆಯ ಸ್ನೇಹವನ್ನು ಯಾರೂ ಮಾಡಬಾರದೆಂದೇ ನನ್ನ ಅಭಿಪ್ರಾಯ. ಏಕೆಂದರೆ ಮನುಷ್ಯನಿಗೆ ಒಳ್ಳೆಯ ಗುಣಗಳನ್ನು ಸಂಪಾದಿಸುವುದಕ್ಕಿಂತಲೂ ದುರ್ಮಾರ್ಗಕ್ಕೆ ಬೀಳುವುದು ಬಹು ಸುಲಭ. ದೇವರೊಡನೆ ಸ್ನೇಹವನ್ನು ಬೆಳಸಬೇಕೆಂದಿರುವವನು ಒಬ್ಬನೇ ಇರಬೇಕು. ಅಥವಾ ಪ್ರಪಂಚಕ್ಕೇ ಸ್ನೇಹಿತನಾಗಿರಬೇಕು. ನಾನು ಮೇಲೆ ಬರೆದಿರುವುದು ಸರಿಯೋ ತಪ್ಪೋ; ಅಂತು ಈ ಸ್ನೇಹದ ವಿಚಾರದಲ್ಲಿ ನಾನು ಮಾಡಿದ ಪ್ರಯತ್ನವು ನಿಷ್ಫಲವಾಯಿತು.

ಈ ಸ್ನೇಹವನ್ನು ಬೆಳಸಿದ ಕಾಲದಲ್ಲಿ ರಾಜಕೋಟೆಯಲ್ಲಿ 'ಸುಧಾಕರಪಂಥ'ವು ಪ್ರಬಲವಾಗಿದ್ದಿತು. ಈ ಸ್ನೇಹಿತನು ನಮ್ಮ ಹಿಂದೂ ಉಪಾಧ್ಯಾಯರಲ್ಲಿ ಬೇಕಾದಷ್ಟು ಜನರು ಗುಟ್ಟಾಗಿ ಮಾಂಸವನ್ನೂ ಮದ್ಯ

ವನ್ನೂ ಸೇವಿಸುತ್ತಾರೆಂದು ನನಗೆ ಹೇಳಿದನು. ರಾಜಕೋಟೆಯಲ್ಲಿ ಎಲ್ಲರಿಗೂ ಚೆನ್ನಾಗಿ ತಿಳಿದವರಾದ ಇನ್ನೂ ಅನೇಕರ ಹೆಸರನ್ನು ಹೇಳಿ ಇವರೂ ಈ ಗುಂಪಿಗೆ ಸೇರಿದವರೆಂದು ತಿಳಿಸಿದನು. ಹೈಸ್ಕೂಲಿನ ಹುಡುಗರಲ್ಲೂ ಕೆಲವರು ಇದೇರೀತಿಯುವರೆಂದು ಹೇಳಿದನು.

ಇದರಿಂದ ನನಗೆ ಆಶ್ಚರ್ಯವೂ ದುಃಖವೂ ಉಂಟಾಗಿ ಇದಕ್ಕೆ ಕಾರಣವನ್ನು ಅವನನ್ನು ಕೇಳಲು ಹೀಗೆ ಉತ್ತರ ಕೊಟ್ಟನು: "ಮಾಂಸವನ್ನು ಸೇವಿಸದೆ ಇರುವುದರಿಂದ ನಾವು ಬಲಹೀನರಾಗಿದ್ದೇವೆ. ಇಂಗ್ಲಿಷರು ಮಾಂಸಾಹಾರಿಗಳಾದುದರಿಂದಲೇ ಅವರು ನಮ್ಮ ಮೇಲೆ ಅಧಿಕಾರಮಾಡುತ್ತಾರೆ. ನನ್ನ ಶರೀರವು ಎಷ್ಟು ದೃಢವಾಗಿದೆ, ನಾನು ಎಷ್ಟುರಮಟ್ಟಿಗೆ ಓಡಬಲ್ಲೆನು ಎನ್ನುವುದು ನಿನಗೆ ಗೊತ್ತೇ ಇದೆ. ನಾನು ಮಾಂಸ ತಿನ್ನುವುದೇ ಇದಕ್ಕೆ ಕಾರಣ. ಮಾಂಸಾಹಾರಿಗಳಿಗೆ ಎಂದೂ ಕುರು ಏಳುವುದಿಲ್ಲ; ಬಾವು ಬರುವುದಿಲ್ಲ. ಒಂದುವೇಳೆ ಬಂದರೂ ಬೇಗ ವಾಸಿಯಾಗುತ್ತದೆ. ನಮ್ಮ ಶಿಕ್ಷಕರೂ ಅನೇಕ ಪ್ರಸಿದ್ಧ ಮನುಷ್ಯರೂ ಇದನ್ನು ಸೇವಿಸುತ್ತಾರೆ. ಇದರ ಗುಣ ತಿಳಿಯದೆ ಹಾಗೆ ಮಾಡುವುದಕ್ಕೆ ಅವರೇನು ಮೂಢರೆ? ನೀನು ಕೂಡ ಇದನ್ನು ತಿನ್ನಬೇಕು. ಒಂದುಸಲ ತಿಂದು ಅದರಿಂದ ನಿನ್ನ ಶರೀರಕ್ಕೆ ಎಷ್ಟು ಪುಷ್ಟಿ ಬರುತ್ತದೆಯೋ ನೀನೇ ನೋಡು."

ಇದೆಲ್ಲಾ ಒಂದೇಸಲ ಕುಳಿತು ಬೋಧಿಸಿದುದಲ್ಲ. ಇದು ಅನೇಕ ವಿಧವಾದ ಉದಾಹರಣೆಗಳನ್ನು ಕೊಟ್ಟು ಎಷ್ಟೋ ದಿನ ನನ್ನ ಮನಸ್ಸಿಗೆ ಹಿಡಿಯುವಂತೆ ಹೇಳಿದುದರ ಸಾರಾಂಶ. ನಮ್ಮ ಅಣ್ಣನು ಮೊದಲೇ ಈ ಮಾರ್ಗಕ್ಕೆ ಬಿದ್ದಿದ್ದನಾದುದರಿಂದ ಇದಕ್ಕೆ ತನ್ನ ಬೆಂಬಲವನ್ನು ಕೊಟ್ಟನು. ನಮ್ಮ ಅಣ್ಣ ಮತ್ತು ಈ ಸ್ನೇಹಿತ ಇವರ ಜೊತೆಯಲ್ಲಿ ಹೋಲಿಸಿ ನೋಡಿದರೆ ನಾನು ದುರ್ಬಲನಾಗಿದ್ದುದು ನಿಜ. ಅವರಿಬ್ಬರೂ ನನಗಿಂತ ಹೆಚ್ಚು ದಾರ್ಢ್ಯವುಳ್ಳವರಾಗಿಯೂ ಬಲವುಳ್ಳವರಾಗಿಯೂ ಧೈರ್ಯವಂತರಾಗಿಯೂ ಇದ್ದರು. ಈ ಸ್ನೇಹಿತನ ಪರಾಕ್ರಮವನ್ನು ನೋಡಿ ನಾನು ಮುಗ್ಧನಾಗುತ್ತಿದ್ದೆನು. ಈತನು ಹೆಚ್ಚು ದೂರ ಓಡಲು ಶಕ್ತನಾಗಿದ್ದನಲ್ಲದೆ ಬಹಳ ವೇಗವಾಗಿ ಓಡುತ್ತಿದ್ದನು. ದೂರ

ಹಾರುವುದೂ ಎತ್ತರಕ್ಕೆ ನೆಗೆಯುವುದೂ ಈತನಿಗೆ ಸುಲಭವಾಗಿದ್ದಿತು. ಏಟುಗಳನ್ನು ಸಹಿಸುವ ಶಕ್ತಿ ಕೂಡ ಹೆಚ್ಚಾಗಿಯೇ ಇದ್ದಿತು. ತನ್ನ ಪರಾಕ್ರಮವನ್ನು ಹಗಲೆಲ್ಲಾ ನನ್ನ ಮುಂದೆ ಪ್ರದರ್ಶಿಸುತ್ತಿದ್ದನು. ಮನುಷ್ಯನು ತನ್ನಲ್ಲಿದ್ದ ಶಕ್ತಿಯನ್ನು ಇತರರಲ್ಲಿ ಕಂಡರೆ ಆಶ್ಚರ್ಯ ಹೊಂದುವನು. ಇದೇರೀತಿಯಾಗಿ ನಾನೂ ಈ ಪರಾಕ್ರಮ ಪ್ರದರ್ಶನ ದಿಂದ ಚಕಿತನಾದೆನು. ನನಗೆ ಚೆನ್ನಾಗಿ ಓಡುವುದಕ್ಕಾಗಲಿ ಹಾರುವುದ ಕ್ಕಾಗಲಿ ಬರುತ್ತಿರಲಿಲ್ಲ. ಈ ಸ್ನೇಹಿತನಂತೆಯೇ ಬಲವುಳ್ಳವನಾಗ ಬೇಕೆಂಬ ತೀವ್ರವಾದ ಇಚ್ಛೆಯುಂಟಾಯಿತು ನಾನೂ ಅವನಂತೆ ಬಲಶಾಲಿಯಾಗಿರಕೂಡದೇಕೆ?

ನಾನು ಬಹಳ ಅಂಜುಬುರುಕನಾಗಿಯೂ ಇದ್ದೆನು. ಕಳ್ಳರು, ಪಿಶಾಚಿಗಳು, ಹಾವುಗಳು, ಇವುಗಳ ಹೆದರಿಕೆಯು ಯಾವಾಗಲೂ ನನ್ನ ಮನಸ್ಸಿನಲ್ಲಿ ಇರುತ್ತಲೇ ಇದ್ದಿತು. ರಾತ್ರಿಯಲ್ಲಿ ಹೊರಗೆ ಹೋಗುವುದಕ್ಕೆ ಧೈರ್ಯವಿರುತ್ತಿರಲಿಲ್ಲ. ಕತ್ತಲೆಂದರೆ ನನಗೆ ಮೈ ನಡುಗುತ್ತಿದ್ದಿತು. ಬೆಳಕಿಲ್ಲದೆ ನಿದ್ರೆ ಮಾಡುವುದಕ್ಕೆ ಆಗುತ್ತಲೇ ಇರ ಲಿಲ್ಲವೆಂದು ಹೇಳಬಹುದು. ಒಂದು ಕಡೆಯಿಂದ ಭೂತ, ಮತ್ತೊಂದು ಕಡೆಯಿಂದ ಕಳ್ಳರು, ಮಗದೊಂದು ಕಡೆಯಿಂದ ಹಾವುಗಳು ಬರುವು ವೆಂಬ ಹೆದರಿಕೆ ಆದುದರಿಂದ ದೀಪವಿಲ್ಲದೆ ನಿದ್ರಿಸಲು ಸಾಧ್ಯವೇ ಇರುತ್ತಿ ರಲಿಲ್ಲ. ಮಗ್ಗುಲಲ್ಲಿ ನಿದ್ರಿಸಿರುವ, ಆಗತಾನೆ ತಾರುಣ್ಯವನ್ನು ಹೊಂದಿದ ನನ್ನ ಹೆಂಡತಿಗೆ ನನ್ನ ಭಯವನ್ನು ಹೇಗೆ ತಿಳಿಸುವದು? ನನಗಿಂತ ಆಕೆಯು ಹೆಚ್ಚು ಧೈರ್ಯವುಳ್ಳವಳೆಂದು ನನಗೆ ಗೊತ್ತಿದ್ದಿತು. ನನ್ನನ್ನು ಕಂಡು ನನಗೇ ನಾಚಿಕೆಯಾಗುತ್ತಿದ್ದಿತು. ಆಕೆಯು ಹಾವುಗಳ ಭಯ ವನ್ನಾಗಲಿ ಪಿಶಾಚಿಗಳ ಭಯವನ್ನಾಗಲಿ ಕಂಡವಳೇ ಅಲ್ಲ. ಕತ್ತಲಲ್ಲಿ ಧೈರ್ಯವಾಗಿ ಎಲ್ಲಿಗೆ ಬೇಕಾದರೂ ಹೋಗುತ್ತಿದ್ದಳು. ನನ್ನ ಸ್ನೇಹಿತ ನಿಗೆ ನನ್ನ ಈ ಕುಂದುಗಳೆಲ್ಲವೂ ಚೆನ್ನಾಗಿ ತಿಳಿದಿದ್ದುವು. "ನಾನು ಬದುಕಿರುವ ಹಾವನ್ನು ಕೈಯಲ್ಲಿ ಹಿಡಿದುಕೊಳ್ಳಬಲ್ಲೆನು; ಕಳ್ಳರನ್ನು ಕಂಡರೆ ನನಗೇನೂ ಹೆದರಿಕೆಯಿಲ್ಲ; ಭೂತಪಿಶಾಚಿಗಳೆನ್ನುವುವು ಇಲ್ಲವೇ ಇಲ್ಲ" ಎಂದು ಅವನು ನನ್ನೊಡನೆ ಹೇಳುತ್ತಿದ್ದನು. ಇದೆಲ್ಲಾ

ತಾನು ಮಾಂಸಾಹಾರಿಯಾಗಿರುವುದರಿಂದ ಉಂಟಾದ ಫಲವೆಂದೇ ಅವನ ಅಭಿಪ್ರಾಯ. ನರ್ಮದ ಎಂಬ ಗುಜರಾತಿ ಕವಿಯಿಂದ ರಚಿತವಾದ ಒಂದು ಪದ್ಯವು ಸದಾ ನಮ್ಮ ಶಾಲೆಯ ಹುಡುಗರ ಬಾಯಲ್ಲಿ ಇರುತ್ತಿದ್ದಿತು. ಅದರ ಸಾರಾಂಶವೇನೆಂದರೆ :—

"ಮಾಂಸವನ್ನು ತಿಂದು ಐದುಮೊಳ ಎತ್ತರ ಬೆಳೆದು ದಾರ್ಢ್ಯವುಳ್ಳವನಾದುದರಿಂದಲೇ ಇಂಗ್ಲಿಷರವನು ನಮ್ಮ ಮೇಲೆ ಸವಾರಿ ಮಾಡುವುದು."

ಈ ಮಾತುಗಳೆಲ್ಲಾ ನನ್ನ ಮನಸ್ಸಿನಲ್ಲಿ ನಾಟಿದುವು. ನಾನು ಸೋತುಹೋದೆನು. ಮಾಂಸಾಹಾರವು ಬಹಳ ಒಳ್ಳೆಯದೆಂದೂ ಅದರಿಂದ ನಾನು ಬಲವುಳ್ಳವನೂ ಧೈರ್ಯವುಳ್ಳವನೂ ಆಗುವೆನೆಂದೂ ಮತ್ತು ನಮ್ಮ ದೇಶದವರೆಲ್ಲಾ ಮಾಂಸವನ್ನು ಸೇವೆ ಮಾಡಿದುದೇ ಆದರೆ ನಾವು ಇಂಗ್ಲಿಷರನ್ನು ಸೋಲಿಸಬಹುದೆಂದೂ ನಾನು ತಿಳಿದುಕೊಂಡೆನು.

ಮಾಂಸಾಹಾರಪ್ರಯೋಗವನ್ನು ಆರಂಭಿಸಲು ಒಂದು ದಿನವು ಗೊತ್ತಾಯಿತು. ಇದನ್ನು ಇತರರಿಗೆ ತಿಳಿಯದಹಾಗೆ ಮಾಡಬೇಕಾಗಿದ್ದಿತು. ಗಾಂಧೀ ಮನೆತನದವರು ವೈಷ್ಣವಸಂಪ್ರದಾಯಕ್ಕೆ ಸೇರಿದವರು. ನಮ್ಮ ತಂದೆ ತಾಯಿಗಳು ಬಹಳ ಆಚಾರಶೀಲರಾಗಿದ್ದರು. ಪ್ರತಿನಿತ್ಯವೂ ಹವೇಲಿಗೆ ಹೋಗುತ್ತಿದ್ದರು. ನಮ್ಮ ಮನೆತನಕ್ಕೆ ಸೇರಿದ ಸ್ವಂತ ದೇವಸ್ಥಾನಗಳೇ ಇದ್ದುವು. ಮತ್ತು ಗುಜರಾತಿನಲ್ಲಿ ಜೈನ ಸಂಪ್ರದಾಯವು ಪ್ರಬಲವಾಗಿದೆ. ಎಲ್ಲಾ ಕಡೆಗಳಲ್ಲಿಯೂ ಎಲ್ಲಾ ವಿಚಾರದಲ್ಲಿಯೂ ಇದರ ಪ್ರಭಾವವು ಕಂಡುಬರುತ್ತಿದ್ದಿತು. ಈ ಕಾರಣದಿಂದ ಗುಜರಾತಿನ ವೈಷ್ಣವರೂ ಜೈನರೂ ಮಾಂಸಾಹಾರವನ್ನು ಪ್ರಪಂಚದಲ್ಲಿ ಇನ್ನೆಲ್ಲಿಯೂ ಇಲ್ಲದಷ್ಟು ಅಸಹ್ಯದಿಂದಲೂ ವಿರೋಧದಿಂದಲೂ ಕಾಣುತ್ತಿದ್ದರು. ನನ್ನ ಸಂಸ್ಕಾರವಾದರೋ ಈ ರೀತಿಯಾಗಿದ್ದಿತು. ಮತ್ತು ನಾನು ನನ್ನ ತಂದೆತಾಯಿಗಳಲ್ಲಿ ಹೆಚ್ಚಾದ ಭಕ್ತಿಯುಳ್ಳವನಾಗಿದ್ದೆನು. ನಾನು ಮಾಂಸವನ್ನು ತಿಂದೆನೆಂದು ತಿಳಿದೊಡನೆಯೇ ಅವರಿಗೆ ಪ್ರಾಣಹೋದಷ್ಟು ಸಂಕಟವಾಗುವುದೆಂದು ನನಗೆ ಗೊತ್ತಿದ್ದಿತು. ಅದೂ

ಅಲ್ಲದೆ ನನಗೆ ಸತ್ಯದಲ್ಲಿ ಇದ್ದ ಆದರದಿಂದ ನಾನು ಹೆಚ್ಚು ಎಚ್ಚರಿಕೆಯುಳ್ಳವನಾದೆನು. ಮಾಂಸ ತಿನ್ನುವುದನ್ನು ಪ್ರಾರಂಭ ಮಾಡಿದರೆ ನನ್ನ ತಂದೆತಾಯಿಗಳಿಗೆ ಮೋಸಮಾಡಿದಂತಾಗುವುದೆಂದು ನನಗೆ ಆಗ ತಿಳಿದಿರಲಿಲ್ಲವೆಂದು ನಾನು ಹೇಳಲಾರೆನು. ಆದರೆ ಈ ಮಾರ್ಪಾಡನ್ನು ನಡೆಸಲೇಬೇಕೆಂದು ನಾನು ಮನಸ್ಸುಮಾಡಿದ್ದೆನು. ಮಾಂಸಾಹಾರವು ಬಹಳ ರುಚಿಯೆಂಬ ಅಭಿಪ್ರಾಯದಿಂದ ನಾನು ಹೀಗೆ ಮಾಡಲಿಲ್ಲ. ಮಾಂಸವು ರುಚಿಯಾದ ಪದಾರ್ಥವೆಂದೇನೂ ನಾನು ತಿಳಿದುಕೊಂಡಿರಲಿಲ್ಲ. ನಾನು ಬಲವುಳ್ಳವನಾಗಬೇಕು, ಧೈರ್ಯವುಳ್ಳವನಾಗಬೇಕು, ನಮ್ಮ ದೇಶದವರೂ ಇದೇ ರೀತಿ ಆಗಬೇಕು, ಹೀಗೆ ಆಗಿ ಇಂಗ್ಲಿಷಿನವರನ್ನು ಸೋಲಿಸಿ ಹಿಂದೂಸ್ಥಾನವನ್ನು ಸ್ವತಂತ್ರದೇಶವನ್ನಾಗಿ ಮಾಡಬೇಕು ಎನ್ನುವುದೇ ನನ್ನ ಆಸೆಯಾಗಿದ್ದಿತು. ಆ ಕಾಲದಲ್ಲಿ 'ಸ್ವರಾಜ್ಯ'ವೆಂಬ ಮಾತನ್ನು ನಾನು ಕೇಳಿರಲಿಲ್ಲ. ಈ ಸುಧಾರಣೆಯ ಹುಚ್ಚಿನಿಂದ ನನ್ನ ಎಚ್ಚರವೇ ತಪ್ಪಿತು.



## ೭

# ದುಃಖಕರವಾದ ಪ್ರಸಂಗ (೨)

ಗೊತ್ತುಮಾಡಿದ್ದ ದಿನವು ಬಂದೊದಗಿತು. ನನ್ನ ಆಗಿನ ಸ್ಥಿತಿಯನ್ನು ಸರಿಯಾಗಿ ವರ್ಣಿಸುವುದು ಕಷ್ಟ. ಒಂದು ಕಡೆ ಸುಧಾರಣೆಗಾಗಿ ಉತ್ಸಾಹ ಮತ್ತು ನನ್ನ ಜೀವನದಲ್ಲಿ ಮಹತ್ವವುಳ್ಳ ಹೊಸ ಮಾರ್ಗವನ್ನನುಸರಿಸುವುದರಲ್ಲಿನ ನವೀನತೆ; ಇನ್ನೊಂದುಕಡೆ ಕಳ್ಳನಂತೆ ಮುಚ್ಚುಮರೆಯಿಂದ ಕೆಲಸವನ್ನು ಸಾಧಿಸುವುದಕ್ಕೆ ನಾಚಿಕೆ. ಇವುಗಳಲ್ಲಿ ಯಾವುದು ಆಗ ಪ್ರಧಾನವಾಗಿದ್ದಿತೋ ನನಗೆ ಜ್ಞಾಪಕವಿಲ್ಲ. ನಾವು ನದಿಯ ದಡದಲ್ಲಿ ಒಂದು ಏಕಾಂತವಾದ ಸ್ಥಳವನ್ನು ಹುಡುಕಿಕೊಂಡು ದೂರ ಹೋಗಿ ಯಾರಿಗೂ ಕಾಣದ ಸ್ಥಳವನ್ನು ಸೇರಿದೆವು. ಅಲ್ಲಿ ನಾನು ಹುಟ್ಟಿದಂದಿನಿಂದ ಎಂದೂ ನೋಡದ ಮಾಂಸವನ್ನು ಕಂಡೆನು. ಅದರ ಜೊತೆಗೆ ಅಂಗಡಿಯ ರೊಟ್ಟಿಯೂ ಇದ್ದಿತು. ಎರಡೂ ನನಗೆ ರುಚಿ ತೋರಲಿಲ್ಲ. ಆಡಿನ ಮಾಂಸವೋ ಚಕ್ಕಳದ ಹಾಗೆ ಇದ್ದಿತು. ಅದನ್ನಂತು ತಿನ್ನುವದಕ್ಕೇ ಆಗಲಿಲ್ಲ. ನನಗೆ ವಾಂತಿಬರುವ ಹಾಗೆ ಆಗಿ ತಿನ್ನುವುದನ್ನು ಬಿಟ್ಟುಬಿಟ್ಟೆನು.

ಆ ರಾತ್ರಿಯನ್ನು ಕಳೆಯುವುದು ಬಹಳ ಪ್ರಯಾಸವಾಯಿತು. ನಿದ್ದೆಯೇ ಬರಲಿಲ್ಲ. ನಿದ್ದೆ ಹತ್ತುವುದಕ್ಕೇ ಇಲ್ಲ, ಒಂದು ಆಡು ನನ್ನ ಹೊಟ್ಟೆಯೊಳಗೆ ಇದ್ದುಕೊಂಡು ಮನಕರಗುವಂತೆ ಅರಚುತ್ತಿರುವ ಹಾಗೆ ತೋರುವುದು. ನನಗೆ ಹೆದರಿಕೆಯಾಗಿ ಪಶ್ಚಾತ್ತಾಪಪಡುತ್ತಾ ಎದ್ದು ಮರುಕ್ಷಣದಲ್ಲಿಯೇ 'ಮಾಂಸಾಹಾರವನ್ನು ಮಾಡುವುದು ನನ್ನ ಕರ್ತವ್ಯವಲ್ಲವೇ? ಹೀಗೆ ಧೈರ್ಯಗೆಡಬಾರದು.' ಎಂದುಕೊಳ್ಳುತ್ತಿದ್ದೆನು.

ನನ್ನ ಸ್ನೇಹಿತನಾದರೋ ಇಷ್ಟಕ್ಕೆಲ್ಲಾ ಎದೆಗುಂದುವವನಾಗಿರಲಿಲ್ಲ. ಆಗ ಅವನು ಮಾಂಸವನ್ನು ವಿಧವಿಧವಾಗಿ ತಯಾರುಮಾಡಿಸಲು

ಪ್ರಾರಂಭಿಸಿದನು. ಅದನ್ನು ತಿನ್ನುವುದಕ್ಕೆ ನದಿಯ ದಡಕ್ಕೆ ಹೋಗು ವುದರ ಬದಲು ರಾಜ್ಯದ ಅತಿಥಿಗೃಹದಲ್ಲಿ ಅಲ್ಲಿಯ ಅಡಿಗೆಯವನೊಂದಿಗೆ ಒಳಸಂಚುಮಾಡಿ ಏರ್ಪಾಡುಮಾಡಿದನು. ಕುರ್ಚಿ ಮೇಜು ಮುಂತಾದ ಸಾಧನಗಳಿಂದ ಕೂಡಿದ ಅಲ್ಲಿನ ಊಟದ ಮನೆಯ ಠೀವಿಯೂ ನನ್ನ ಮನ ಸ್ಸನ್ನು ಸೆಳೆಯಬೇಕೆಂಬುದೇ ಅವನ ಉದ್ದೇಶ.

ಆ ಉದ್ದೇಶವು ಸಫಲವಾಯಿತು. ರೊಟ್ಟಿಯಲ್ಲಿ ರುಚಿ ತೋರಲು ಪ್ರಾರಂಭವಾಯಿತು. ಆಡಿನಲ್ಲಿದ್ದ ಕನಿಕರವೂ ಮಾಯವಾಯಿತು. ಮಾಂಸದಲ್ಲಲ್ಲದಿದ್ದರೂ ಮಾಂಸದಿಂದ ಮಾಡಿದ ಪದಾರ್ಥಗಳಲ್ಲಿ ರುಚಿ ಹೆಚ್ಚುತ್ತಾ ಬಂದಿತು. ಇದು ಸುಮಾರು ಒಂದು ವರ್ಷದವರೆಗೆ ನಡೆಯಿತು. ಇಷ್ಟು ದಿನಗಳಲ್ಲಿ ಐದು ಆರು ದಿವಸಗಳು ಮಾತ್ರ ಮಾಂಸದ ಭಕ್ಷ್ಯಗಳನ್ನು ತಿಂದೆನು. ಏಕೆಂದರೆ ರಾಜ್ಯದ ಅತಿಥಿ ಗೃಹವು ಸದಾ ಬಿಡುವಾಗಿರುತ್ತಿರಲಿಲ್ಲ. ಇದಲ್ಲದೆ ಹೆಚ್ಚು ವೆಚ್ಚ ತಗಲುವ ಮಾಂಸದ ಭಕ್ಷ್ಯಗಳನ್ನು ಹಗಲೆಲ್ಲಾ ಮಾಡಿಸಲು ಸಾಧ್ಯ ವಿರುತ್ತಿರಲಿಲ್ಲ. ಈ ಸುಧಾರಣೆಯ ವೆಚ್ಚಕ್ಕೆ ನನ್ನಲ್ಲಿ ಹಣವಿರುತ್ತಿರಲಿಲ್ಲ ವಾದುದರಿಂದ ಈ ಖರ್ಚೆಲ್ಲಾ ನನ್ನ ಸ್ನೇಹಿತನ ಮೇಲೆಯೇ ಬೀಳುತ್ತಿ ತ್ತಿದ್ದಿತು. ಆತನಿಗೆ ಎಲ್ಲಿಂದ ಹಣ ದೊರಕುತ್ತಿದ್ದಿತೋ ಈಹೊತ್ತಿನವರೆಗೂ ನನಗೆ ಗೊತ್ತಿಲ್ಲ. ನನ್ನನ್ನು ಮಾಂಸಾಹಾರಿಯನ್ನಾಗಿ ಮಾಡಬೇ ಕೆಂದು ಈತನು ಛಲಹಿಡಿದಿದ್ದುದರಿಂದ ಹೇಗೋ ಇದಕ್ಕೆಲ್ಲಾ ಹಣ ವನ್ನು ದೊರಕಿಸುತ್ತಿದ್ದನು. ಆದರೆ ಅವನಿಗೆ ತಾನೆ ಅಷ್ಟೊಂದು ಹಣ ವೆಲ್ಲಿಂದ ದೊರಕಬೇಕು ? ಆದುದರಿಂದ ಈ ಮಾಂಸದ ಹಬ್ಬಗಳು ಬಹಳ ದಿನಗಳಿಗೊಮ್ಮೆ ಮಾತ್ರ ನಡೆಯುತ್ತಿದ್ದವು.

ಈ ಕಳ್ಳತನದ ಹಬ್ಬವಾದ ದಿನ ಮನೆಯಲ್ಲಿ ಊಟದ ಮಾತೇ ಇಲ್ಲ. ನಮ್ಮ ತಾಯಿಯು ನನ್ನನ್ನು ಸ್ವಾಭಾವಿಕವಾಗಿ ಊಟಕ್ಕೆ ಕರೆದು ನಾನು ಊಟ ಬೇಡವೆಂದು ಹೇಳಲು ಕಾರಣವನ್ನು ಕೇಳುವಳು. ಆಗ ನಾನು, "ನನಗೆ ಇಂದು ಹಸಿವಿಲ್ಲ. ಅನ್ನವೇಕೋ ಅರಗಿಲ್ಲ." ಎಂದು ಹೇಳುವೆನು. ಈ ರೀತಿಯಾಗಿ ಹೇಳುವದಕ್ಕೆ ನನಗೆ ಸಂಕಟವಾಗುತ್ತಿರ ಲಿಲ್ಲವೆಂದಲ್ಲ. ಇದು ಸುಳ್ಳು ನೆವವೆಂದೂ ಅದರಲ್ಲೂ ನಮ್ಮ ತಾಯಿಯ

ಎದುರಿಗೆ ಸುಳ್ಳು ಹೇಳುತ್ತಿರುವೆನೆಂದೂ ನನಗೆ ಗೊತ್ತು. ಇದೂ ಅಲ್ಲದೆ ನಮ್ಮ ತಂದೆತಾಯಿಗಳು ನಾನು ಮಾಂಸಾಹಾರಿಯಾದೆನೆಂದು ತಿಳಿದರೆ ಬಹಳ ಸಂಕಟಪಡುವರೆಂದು ನನಗೆ ಗೊತ್ತಿದ್ದಿತು. ಈ ತಿಳಿವು ನನ್ನ ಮನಸ್ಸಿನಲ್ಲಿ ಯಾವಾಗಲೂ ಕೊರೆಯುತ್ತಿದ್ದಿತು.

ಆದುದರಿಂದ ನಾನು ಹೀಗೆ ಆಲೋಚಿಸಿದೆನು: "ಮಾಂಸವನ್ನು ತಿನ್ನುವುದು ಆವಶ್ಯಕ. ಇದನ್ನು ಪ್ರಚಾರಮಾಡಿ ಹಿಂದೂಸ್ಥಾನ ದಲ್ಲೆಲ್ಲಾ ಈರೀತಿಯಾದ ಸುಧಾರಣೆ ಮಾಡುವುದೂ ಆವಶ್ಯಕ. ಆದರೆ ತಂದೆತಾಯಿಗಳಿಗೆ ಮೋಸಮಾಡಿ ಸುಳ್ಳು ಹೇಳುವುದು ಮಾಂಸ ತಿನ್ನದೆ ಇರುವುದಕ್ಕಿಂತ ಕೇಡಾದುದು. ಆದುದರಿಂದ ತಂದೆತಾಯಿಗಳು ಬದುಕಿರುವವರೆಗೂ ಮಾಂಸವನ್ನು ತಿನ್ನಬಾರದು. ಅವರು ಸತ್ತಮೇಲೆ ನಾನು ಸ್ವತಂತ್ರನಾದಾಗ ಎಲ್ಲರಿಗೂ ತಿಳಿಯುವಂತೆಯೇ ನಾನು ಮಾಂಸ ವನ್ನು ತಿನ್ನುವೆನು. ಆ ಕಾಲ ಬರುವವರೆಗೂ ಮಾಂಸಾಹಾರವನ್ನು ಬಿಟ್ಟುಬಿಡುವೆನು."

ನಾನು ಹೀಗೆ ನಿಶ್ಚಯಮಾಡಿದುದನ್ನು ನನ್ನ ಸ್ನೇಹಿತನಿಗೆ ತಿಳಿಸಿ ಮಾಂಸಾಹಾರವನ್ನು ಎಂದೆಂದಿಗೂ ಬಿಟ್ಟೆನು. ಅಂದಿನಿಂದೀಚೆಗೆ ನಾನು ಮಾಂಸವನ್ನು ಎಂದೂ ತಿಂದಿಲ್ಲ. ತಮ್ಮ ಮಕ್ಕಳಲ್ಲಿ ಇಬ್ಬರು ಮಾಂಸಾ ಹಾರಿಗಳಾಗಿದ್ದರೆಂದು ನಮ್ಮ ತಂದೆತಾಯಿಗಳಿಗೆ ಕಡೆಯವರೆಗೂ ಗೊತ್ತಾಗಲಿಲ್ಲ.

ತಂದೆತಾಯಿಗಳಿಗೆ ಮೋಸಮಾಡದೆ ಇರಬೇಕೆಂಬ ಪರಿಶುದ್ಧವಾದ ಇಚ್ಛೆಯಿಂದ ನಾನು ಮಾಂಸಾಹಾರವನ್ನು ಬಿಟ್ಟರೂ ಆ ಗೆಳೆಯನ ಸ್ನೇಹ ವನ್ನು ಬಿಡಲಿಲ್ಲ. ಅವನನ್ನು ಮಾರ್ಪಡಿಸಬೇಕೆಂಬ ಉತ್ಸಾಹದಿಂದ ನನ್ನ ಮೇಲೇ ದುಷ್ಪರಿಣಾಮವುಂಟಾಗಿದ್ದಿತು. ಆದರೆ ಇದರ ಅರಿವೇ ಆಗ ನನಗಿರಲಿಲ್ಲ.

ಈ ಮೈತ್ರಿಯೇ ನನ್ನನ್ನು ವ್ಯಭಿಚಾರಕ್ಕೂ ಎಳೆದುಬಿಡುತ್ತಿದ್ದಿತು. ಹಳ್ಳಕ್ಕೆ ಬೀಳುವುದನ್ನು ಒಂದು ಗೆರೆಯ ಅಗಲದಲ್ಲಿ ತಪ್ಪಿಸಿಕೊಂಡೆನು. ಒಂದುದಿನ ಈ ಸ್ನೇಹಿತನು ನನ್ನನ್ನು ಒಬ್ಬ ವೇಶ್ಯೆಯ ಮನೆಗೆ ಕರೆದು ಕೊಂಡು ಹೋದನು. ಅಲ್ಲಿ ಅವನು ನನಗೆ ಸಮಯಕ್ಕೆ ಯೋಗ್ಯವಾದ

ಸೂಚನೆಗಳನ್ನು ಕೊಟ್ಟು ಒಳಕ್ಕೆ ಕಳುಹಿಸಿದನು. ಎಲ್ಲ ಏರ್ಪಾಡೂ ಆಗಿದ್ದಿತು. ಹಣವನ್ನು ಕೂಡ ಆಗಲೇ ಕೊಟ್ಟುದಾಗಿದ್ದಿತು. ನಾನು ಆಕೆಯೊಡನೆ ಮಾತು ಬೆಳಿಸುವುದೊಂದು ಉಳಿದಿದ್ದಿತು. ನಾನು ಪಾಪಪಾಶದೊಳಕ್ಕೆ ನುಗ್ಗಿದೆನು. ಆದರೆ ಈಶ್ವರನ ಅಪಾರ ಕೃಪೆಯು ನನ್ನನ್ನು ನನ್ನ ದೆಸೆಯಿಂದಲೇ ರಕ್ಷಿಸಿತು. ಆ ಪಾಪಕೂಪದಲ್ಲಿ ನನಗೆ ಜಗತ್ತೆಲ್ಲವೂ ಕತ್ತಲು ಕವಿದಂತೆ ತೋರತೊಡಗಿತು. ನನಗೆ ಮಾತನಾಡಲು ಕೂಡ ಎಚ್ಚರವಿರಲಿಲ್ಲ. ಲಜ್ಜೆಯ ದೆಸೆಯಿಂದ ಸ್ತಬ್ಧನಾಗಿ ಆಕೆಯ ಹತ್ತಿರ ಮಂಚದಮೇಲೆ ಕುಳಿತುಬಿಟ್ಟೆನು. ಆದರೆ ಒಂದು ಮಾತನ್ನು ಆಡಲೂ ಸಾಧ್ಯವಾಗಲಿಲ್ಲ. ಆಕೆಗೆ ಬಹಳ ಸಿಟ್ಟು ಬಂದು ನನ್ನನ್ನು ಬಯ್ದು ಬಾಗಿಲನ್ನು ತೋರಿಸಿಬಿಟ್ಟಳು. ನನ್ನ ಗಂಡಸುತನಕ್ಕೆ ಕೊರತೆ ಬಂದಂತೆ ನನಗೆ ತೋರಿ ಭೂಮಿಯು ಬಾಯಿಬಿಟ್ಟರೆ ಮಾಯವಾದೇನು ಎನಿಸಿತು. ಆದರೆ ಈರೀತಿಯಾಗಿ ಉದ್ಧಾರಮಾಡಿದುದಕ್ಕೆ ನಾನು ಸದಾ ದೇವರ ಉಪಕಾರವನ್ನು ಸ್ಮರಿಸುತ್ತಿದ್ದೇನೆ.

ನನ್ನ ಜೀವನದಲ್ಲಿ ಇದೇ ತೆರನಾದ ಇನ್ನೂ ಮೂರುನಾಲ್ಕು ಪ್ರಸಂಗಗಳು ಒದಗಿದುದು ನನಗೆ ಜ್ಞಾಪಕವಿದೆ. ಇವುಗಳಲ್ಲಿನ ಮುಕ್ಕಾಲುಪಾಲು ಪ್ರಸಂಗಗಳಲ್ಲಿ ನನ್ನ ಪ್ರಯತ್ನಕ್ಕಿಂತ ಹೆಚ್ಚಾಗಿ ನನ್ನ ಅದೃಷ್ಟದ ಬಲ್ಮೆಯೇ ನನ್ನನ್ನು ಪಾರುಮಾಡಿತು. ಸರಿಯಾಗಿ ನೀತಿಯ ದೃಷ್ಟಿಯಿಂದ ನೋಡಿದರೆ ಇವುಗಳಲ್ಲೆಲ್ಲಾ ನಾನು ಧರ್ಮದ ಹಾದಿಯನ್ನು ತಪ್ಪಿದೆನೆಂದೇ ಹೇಳಬೇಕು. ನನ್ನಲ್ಲಿ ವಿಷಯೇಚ್ಛೆಯು ಇದ್ದುದರಿಂದ ನಾನು ದುಷ್ಕರ್ಮವನ್ನು ಮಾಡಿದಹಾಗೆಯೇ ಆಯಿತು. ಆದರೆ ಇಚ್ಛೆ ಮಾಡಿದರೂ ಇಚ್ಛೆಗೆ ತಕ್ಕಂತೆ ಕೆಟ್ಟ ಕೆಲಸವನ್ನು ಸಾಧಿಸದಿದ್ದರೆ ಆ ಮನುಷ್ಯನು ಲೌಕಿಕದೃಷ್ಟಿಯಲ್ಲಿ ಪಾಪ ಮಾಡಿದವನಾಗುವುದಿಲ್ಲ. ನಾನು ಉದ್ಧಾರವಾದುದು ಈ ಅರ್ಥದಲ್ಲಿ ಮಾತ್ರ. ಕೆಲವು ಕಾರ್ಯಗಳನ್ನು ಮಾಡುವುದರಿಂದ ತಪ್ಪಿಸಿಕೊಂಡರೆ ಅದರಿಂದ ಆ ಮನುಷ್ಯನಿಗೂ ಅವನ ಸಹವಾಸದಲ್ಲಿರುವವರಿಗೂ ಬಹಳ ಒಳ್ಳೆಯ ಪರಿಣಾಮವಾಗುತ್ತದೆ. ಮನುಷ್ಯನಿಗೆ ಸರಿಯಾದ ತಿಳಿವು ಬಂದೊಡನೆಯೇ ಅವನು ಹೀಗೆ ತಪ್ಪಿಸಿಕೊಂಡುದು ದೇವರ ಉಪಕಾರವೆಂದು ಎಣಿಸುತ್ತಾನೆ.

ಮನುಷ್ಯನು ಎಷ್ಟೇ ಇಷ್ಟವಿಲ್ಲದವನಾಗಿದ್ದರೂ ಕೆಲವು ಸಮಯಗಳಲ್ಲಿ ಕೆಳಕ್ಕೆ ಬೀಳುವಂತೆಯೇ ಕೆಟ್ಟಕೆಲಸ ಮಾಡಬೇಕೆಂಬ ಮನುಷ್ಯನೂ ಅದೃಷ್ಟವಶಾತ್ ಕೆಟ್ಟ ದಾರಿಗೆ ಬೀಳದೆ ಪಾರಾಗುವನೆನ್ನುವುದು ನಮಗೆ ತಿಳಿದ ಮಾತು. ಇದೆಲ್ಲಾ ನಡೆಯುವುದೆಂತು—ಮನುಷ್ಯನು ಎಷ್ಟು ದೂರ ಸ್ವತಂತ್ರನು, ಎಷ್ಟರಮಟ್ಟಿಗೆ ಅವನು ಹೊರಗಿನ ಸ್ಥಿತಿಗತಿಗಳ ವಶವರ್ತಿಯಾಗಿರುತ್ತಾನೆ—ಇಂದಿನವರೆಗೂ ಇವುಗಳಿಗೆ ಸಮರ್ಪಕವಾದ ಉತ್ತರವನ್ನು ಹೇಳಲು ಸಾಧ್ಯವಾಗಿಲ್ಲ ; ಮುಂದೆ ಹೇಳಲೂ ಆಗುವುದಿಲ್ಲ.

ಕತೆಯನ್ನು ಮುಂದುವರಿಸೋಣ. ಇಷ್ಟಾದರೂ ಕೂಡ ಈ ಸ್ನೇಹಿತನ ಗೆಳೆತನವು ಬಹಳ ಅನಿಷ್ಟವಾದುದೆಂಬ ಜ್ಞಾನವು ನನಗೆ ಬರಲೇ ಇಲ್ಲ. ಆದುದರಿಂದ ನಾನು ಎಂದೆಂದೂ ನಿರೀಕ್ಷಿಸದ ಅವನ ಕೆಲವು ದುಷ್ಕಾರ್ಯಗಳನ್ನು ನಾನೇ ಕಣ್ಣಾರ ನೋಡಿ ನನಗೆ ಜ್ಞಾನವುಂಟಾಗುವವರೆಗೂ ನಾನು ಇನ್ನೂ ಅನೇಕ ಕಹಿ ಗುಳಿಗೆಗಳನ್ನು ನುಂಗಬೇಕಾಗಿದ್ದಿತು. ಆದರೆ ನಾನು ಸಂಗತಿಗಳನ್ನು ಅವು ನಡೆದಂತೆ ಕ್ರಮಶಃ ವರ್ಣಿಸುತ್ತಿರುವುದರಿಂದ ಈ ಅನುಭವಗಳ ವಿಚಾರವನ್ನು ಮುಂದೆ ವಿವರಿಸುವೆನು.

ಆದರೆ ಈ ಕಾಲಕ್ಕೆ ಸಂಬಂಧಪಟ್ಟ ಒಂದು ವಿಚಾರವು ಇಲ್ಲಿ ಬರೆಯತಕ್ಕುದಾಗಿದೆ. ಈ ಸಮಯದಲ್ಲಿ ನನಗೂ ನನ್ನ ಹೆಂಡತಿಗೂ ವೈಮನಸ್ಯವಿದ್ದಿತು. ಅದಕ್ಕೆ ನಿಸ್ಸಂದೇಹವಾಗಿ ಈ ಸ್ನೇಹವೂ ಒಂದು ಕಾರಣವಾಗಿದ್ದಿತು. ನಾನು ನನ್ನ ಹೆಂಡತಿಯಲ್ಲಿ ತುಂಬಾ ಪ್ರೀತಿಯಿಟ್ಟುಕೊಂಡಿದ್ದರೂ ಅಸೂಯಾಪರನಾಗಿದ್ದೆನೆಂದು ಹಿಂದೆಯೇ ಹೇಳಿದ್ದೇನೆ. ಈ ಅಸೂಯೆಯ ಬೆಂಕಿಯು ಇನ್ನಷ್ಟು ಉರಿಯುವಹಾಗೆ ಈ ಸ್ನೇಹಿತನು ಬೀಸುತ್ತಿದ್ದನು. ಈತನ ಮಾತಿನಲ್ಲಿ ನನಗೆ ಅಪನಂಬಿಕೆಯೇ ಇರುತ್ತಿರಲಿಲ್ಲ. ಈತನ ಮಾತನ್ನು ಕೇಳಿಕೊಂಡು ನನ್ನ ಹೆಂಡತಿಗೆ ಬಹಳ ಸಂಕಟವನ್ನುಂಟುಮಾಡುತ್ತಿದ್ದೆನು. ಹೀಗೆ ಹಿಂಸೆಮಾಡುತ್ತಿದ್ದುದಕ್ಕೆ ನಾನು ಎಷ್ಟು ಪಶ್ಚಾತ್ತಾಪಪಟ್ಟರೂ ಸಾಲದು. ಇಂತಹ ಕಷ್ಟವನ್ನು ಹಿಂದೂ ಸ್ತ್ರೀಯರು ಮಾತ್ರ ಸಹಿಸುತ್ತಾರೆ. ಇದರಿಂದಲೇ ನಾನು ಯಾವಾಗಲೂ ಹೆಂಗಸೆಂದರೆ ಸಹನಶೀಲತೆಯ ಮೂರ್ತಿಯೆಂದು

ಎಣಿಸುತ್ತೇನೆ. ನೌಕರನು ಅನ್ಯಾಯವಾಗಿ ಸಂಶಯಕ್ಕೆ ಗುರಿಯಾದರೆ ಅವನು ಕೆಲಸವನ್ನು ಬಿಟ್ಟುಬಿಡಬಹುದು; ಅದೇ ಸಂದರ್ಭದಲ್ಲಿ ಮಗನು ತಂದೆಯ ಮನೆಯನ್ನು ಬಿಟ್ಟುಬಿಡಬಹುದು; ಮಿತ್ರನು ಸ್ನೇಹವನ್ನುಬಿಟ್ಟು ಬಿಡಬಹುದು. ಹೆಂಡತಿಯು ಗಂಡನಮೇಲೆ ಅನುಮಾನಪಟ್ಟರೆ ಸುಮ್ಮ ನಿರುವಳು; ಆದರೆ ಗಂಡನೇನಾದರೂ ತನ್ನ ಹೆಂಡತಿಯ ವಿಷಯದಲ್ಲಿ ಸಂದೇಹಪಟ್ಟರೆ ಅವಳ ಗತಿ ಅಲ್ಲಿಗೆ ಮುಗಿದಹಾಗೆಯೇ! ಅವಳು ಹೋಗುವುದೆಲ್ಲಿಗೆ? ಹಿಂದೂ ಸ್ತ್ರೀಯು ಕೋರ್ಟಿಗೆ ಹೋಗಿ ಮದುವೆಯ ಬಂಧನದಿಂದ ತಪ್ಪಿಸಿಕೊಳ್ಳಲಾರಳು. ಅವಳಿಗುಂಟಾದ ಅನ್ಯಾಯಕ್ಕೆ ಮದ್ದೇ ಇಲ್ಲ. ನಾನು ನನ್ನ ಹೆಂಡತಿಯನ್ನು ಈ ವಿಧವಾಗಿ ಹಿಂಸೆಪಡಿ ಸಿದುದನ್ನು ಮರೆಯಲಾರೆನು. ಈ ನನ್ನ ತಪ್ಪಿತವನ್ನು ಕ್ಷಮಿಸಲಾರೆನು.

ನನಗೆ ಅಹಿಂಸಾ ತತ್ವದ ತಿಳುವಳಿಕೆಯುಂಟಾದಮೇಲೆಯೇ ಈ ಸಂದೇಹವು ಬೇರುಸಹಿತ ನಾಶವಾದುದು. ಆಗ ನನಗೆ ಬ್ರಹ್ಮಚರ್ಯೆಯ ಮಹಿಮೆಯು ಗೊತ್ತಾಯಿತು. 'ಹೆಂಡತಿಯು ಗಂಡನ ದಾಸಿಯಲ್ಲ; ಅವಳು ಆತನ ಸಹಚಾರಿಣಿ, ಸಹಧರ್ಮಿಣಿ, ಅವನ ಸುಖದುಃಖಗಳಲ್ಲಿ ಸಮಭಾಗಿನಿ; ಗಂಡನಿಗೆ ತನ್ನ ಇಚ್ಛೆಯಂತೆ ನಡೆಯುವುದಕ್ಕೆ ಹೇಗೆ ಸ್ವತಂತ್ರತೆಯುಂಟೋ ಅದೇ ರೀತಿಯಾಗಿ ಹೆಂಡತಿಗೂ ಅಧಿಕಾರವುಂಟು.' ಎಂಬುದು ನನ್ನ ಅರಿವಿಗೆ ಬಂದಿತು. ಆ ಕಾಲದ ನೆನಪು ಬಂದಾಗಲೆಲ್ಲ ನನ್ನ ಮೂರ್ಖತನವೂ ವಿಷಯಾಂಧತೆಯೂ ಕ್ರೌರ್ಯವೂ ನೆನಪಿಗೆ ಬಂದು ನನ್ನನ್ನು ಕಂಡು ನನಗೇ ಅಸಹ್ಯವಾಗುತ್ತದೆ; ಕುರುಡನಂತೆ ಆ ಮಿತ್ರನಲ್ಲಿ ಇಟ್ಟ ವಿಶ್ವಾಸಕ್ಕೆ ಪಶ್ಚಾತ್ತಾಪವುಂಟಾಗುತ್ತದೆ.

---

೮

# ಕಳ್ಳತನ, ಅದರ ಪ್ರಾಯಶ್ಚಿತ್ತ

ಮಾಂಸವನ್ನು ತಿನ್ನುತ್ತಿದ್ದ ಕಾಲದ ಮತ್ತು ಅದಕ್ಕೆ ಮುಂಚಿನ ನನ್ನ ಕೆಲವು ಕೆಟ್ಟ ಚಾಳಿಗಳನ್ನು ವರ್ಣಿಸುವುದು ಇನ್ನೂ ಉಳಿದಿದೆ. ಅವು ನನ್ನ ಮದುವೆಯ ಮುಂಚೆಯ ಕಾಲಕ್ಕೋ ಮದುವೆಯಾದ ಮೇಲಿನ ಕೆಲವು ದಿನಗಳಿಗೋ ಸಂಬಂಧಿಸಿದುವು.

ನನಗೂ ನಮ್ಮ ಸಂಟನೊಬ್ಬನಿಗೂ ಬೀಡಿ ಸೇದಬೇಕೆಂಬ ಇಚ್ಛೆ ವುಂಟಾಯಿತು. ನಮ್ಮ ಹತ್ತಿರ ದುಡ್ಡೇ ಇರಲಿಲ್ಲ. ಬೀಡಿ ಸೇದು ವುದರಲ್ಲಿ ಲಾಭವಿದೆಯೆಂದು ನಾವು ಎಣಿಸಿದ್ದೆವೆಂದಲ್ಲ; ಅಥವಾ ಅದರ ಪರಿಮಳವು ನಮ್ಮ ಮನಸ್ಸನ್ನು ಸೆಳೆಯುತ್ತಿದ್ದಿತೆಂದೂ ಅಲ್ಲ. ಬಾಯಿಂದ ಹೊಗೆಯನ್ನು ಬಿಡುವುದರಲ್ಲಿ ಏನೋ ಒಂದು ವಿಧವಾದ ಸಂತೋಷ ವಿದೆಯೆಂದು ತಿಳಿದಿದ್ದೆವು. ನಮ್ಮ ಚಿಕ್ಕಪ್ಪನಿಗೆ ಇದರ ಅಭ್ಯಾಸವಿದ್ದಿತು. ಈತನು ಮತ್ತು ಇತರರು ಬೀಡಿ ಸೇದುವುದನ್ನು ನೋಡಿ ನಾವೂ ಹಾಗೆ ಮಾಡಬೇಕೆಂಬ ಇಚ್ಛೆಯುಂಟಾಯಿತು. ಆದರೆ ನಮ್ಮ ಕಿಸೆಯಲ್ಲಿ ದುಡ್ಡಿರಲಿಲ್ಲ. ಅದಕ್ಕೋಸ್ಕರ ನಮ್ಮ ಚಿಕ್ಕಪ್ಪನು ಸೇದಿ ಎಸೆದಿದ್ದ ಸಿಗರೇಟಿನ ತುಂಡುಗಳನ್ನು ಕಳ್ಳತನದಿಂದ ಆಯುವುದಕ್ಕೆ ಆರಂಭಿಸಿದೆವು!

ಆದರೆ ಈ ತುಂಡುಗಳು ಹಗಲೆಲ್ಲ ಸಿಕ್ಕುತ್ತಿರಲಿಲ್ಲ; ಅವುಗಳಿಂದ ಹೆಚ್ಚಾಗಿ ಹೊಗೆಯೂ ಬರುತ್ತಿರಲಿಲ್ಲ. ಆದುದರಿಂದ ಮನೆಯ ಜವಾನನ ಕಿಸೆಯಲ್ಲಿದ್ದ ನಾಲ್ಕಾರು ಕಾಸುಗಳನ್ನು ಕದ್ದು ಅದರಿಂದ ಬೀಡಿಯನ್ನು ಕೊಂಡುಕೊಳ್ಳಲು ಮೊದಲುಮಾಡಿದೆವು. ಆದರೆ ಈ ಬೀಡಿಗಳನ್ನು ಬಚ್ಚಿಡುವುದೆಲ್ಲಿ? ಹಿರಿಯರ ಎದುರಿಗಂತು ಸೇದುವ ಹಾಗಿರಲಿಲ್ಲ. ಈ ರೀತಿಯಾಗಿ ಕದ್ದ ದುಡ್ಡಿನಿಂದ ಹಾಗೂ ಹೀಗೂ ಕೆಲವು ವಾರಗಳನ್ನು ತಳ್ಳಿದೆವು. ಈ ಮಧ್ಯೆ ಒಂದು ತರಹ ಗಿಡದ ದಂಟು ಪೊಳ್ಳಾಗಿರುವು

ದೆಂದೂ ಅದನ್ನು ಬೀಡಿಯಂತೆಯೇ ಸೇದಲು ಉಪಯೋಗಿಸಬಹುದೆಂದೂ ಕೇಳಿದೆವು. ಅದನ್ನೇ ತೆಗೆದುಕೊಂಡು ಬಂದು ಸೇದತೊಡಗಿದೆವು.

ಆದರೆ ಇದರಿಂದ ನಮಗೆ ಸಮಾಧಾನವಾಗಲಿಲ್ಲ. ನಮ್ಮ ಪರಾಧೀನತೆಯು ನಮ್ಮನ್ನು ಚುಚ್ಚಲು ಪ್ರಾರಂಭಿಸಿತು. ದೊಡ್ಡವರ ಅಪ್ಪಣೆಯ ಹೊರತು ಯಾವ ಕೆಲಸವನ್ನೂ ಮಾಡಲಾಗದೆನ್ನುವುದನ್ನು ಸಹಿಸಲಸಾಧ್ಯವಾಯಿತು. ಕಟ್ಟಕಡೆಗೆ ಕೇವಲ ಅಸಹ್ಯದಿಂದ ಆತ್ಮಹತ್ಯ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದೆವು.

ಆದರೆ ಇದನ್ನು ಸಾಧಿಸುವುದು ಹೇಗೆ? ವಿಷವನ್ನು ಹೇಗೆ ಒದಗಿಸುವುದು? ಧಾತುರದ ಬೀಜವನ್ನು ತಿಂದರೆ ಪ್ರಾಣ ಹೋಗುವುದೆಂದು ಕೇಳಿದೆವು. ಅಡವಿಗೆ ಹೋಗಿ ಅದನ್ನು ತೆಗೆದುಕೊಂಡು ಬಂದೆವು. ಸಂಜೆಯ ಸಮಯಕ್ಕೆ ಕಾದು ಕೇದಾರೇಶ್ವರನ ದೇವಸ್ಥಾನಕ್ಕೆ ಹೋಗಿ ದೇವರ ಮುಂದಿನ ದೀಪಕ್ಕೆ ತುಪ್ಪವನ್ನು ಹಾಕಿ ದೇವರ ದರ್ಶನವನ್ನು ಹೊಂದಿ ಏಕಾಂತವಾದ ಸ್ಥಳಕ್ಕೆ ಹೋದೆವು. ಆದರೆ ವಿಷವನ್ನು ತೆಗೆದುಕೊಳ್ಳುವುದಕ್ಕೆ ಧೈರ್ಯವಾಗಲಿಲ್ಲ. ಒಡನೆಯೇ ಪ್ರಾಣಹೋಗದಿದ್ದರೋ? ಆತ್ಮಹತ್ಯೆಯಿಂದ ಆಗುವ ಲಾಭ ತಾನೆ ಏನು? ಪರಾಧೀನತೆಯನ್ನು ಸಹಿಸಬಾರದೇಕೆ? ಹಾಗೂ ಮೂರು ನಾಲ್ಕು ಬಿತ್ತಗಳನ್ನು ನುಂಗಿದೆವು. ಹೆಚ್ಚಾಗಿ ತಿನ್ನುವುಗಕ್ಕೆ ಧೈರ್ಯ ಬರಲಿಲ್ಲ. ನಾವಿಬ್ಬರೂ ಸಾಯಲು ಹಿಂತೆಗೆದೆವು. ರಾಮದೇವರ ದೇವಸ್ಥಾನಕ್ಕೆ ಹೋಗಿ ದೇವರ ದರ್ಶನ ಮಾಡಿ ಶಾಂತಚಿತ್ತರಾಗಿ ಆತ್ಮಹತ್ಯೆಯ ವಿಚಾರವನ್ನು ಮರೆಯಬೇಕೆಂದು ನಿಶ್ಚಯಿಸಿದೆವು.

ಆತ್ಮಹತ್ಯ ಮಾಡಿಕೊಳ್ಳಬೇಕೆಂದು ನಿರ್ಧರಿಸುವುದು ಸುಲಭ, ಆದರೆ ಆತ್ಮಹತ್ಯ ಮಾಡಿಕೊಳ್ಳುವುದು ಅಷ್ಟು ಸುಲಭವಲ್ಲ ಎಂದು ನನಗೆ ಗೊತ್ತಾಯಿತು. ಆಗಿನಿಂದ ಯಾರಾದರೂ ಆತ್ಮಹತ್ಯ ಮಾಡಿಕೊಳ್ಳುತ್ತೇನೆಂದು ಹೆದರಿಸಿದರೆ ನಾನು ಅದನ್ನು ಲಕ್ಷ್ಯ ಮಾಡುವುದಿಲ್ಲವೆಂದು ಹೇಳಬಹುದು.

ಹೀಗೆ ಪ್ರಯತ್ನಮಾಡಿದುದರ ಫಲಿತಾಂಶವೇನೆಂದರೆ, ನಾವಿಬ್ಬರೂ ಸಿಗರೇಟಿನ ತುಂಡುಗಳನ್ನು ಸೇದುವ ಅಭ್ಯಾಸವನ್ನೂ ಹೊಗೆ ಕುಡಿಯು

ಲಿಕ್ಕಾಗಿ ಜವಾನನ ಕಿಸೆಯಿಂದ ದುಡ್ಡನ್ನು ಕದಿಯುವುದನ್ನೂ ಬಿಟ್ಟು ಬಿಟ್ಟೆವು.

ದೊಡ್ಡವನಾದಂದಿನಿಂದ ಬೀಡಿಯನ್ನು ಕುಡಿಯಬೇಕೆಂಬ ಆಸೆಯು ನನಗೆ ಹುಟ್ಟೇ ಇಲ್ಲ. ಮತ್ತು ಈ ಅಭ್ಯಾಸವು ಅನಾಗರಿಕವಾದುದು, ಹೊಲಸಾದುದು ಮತ್ತು ಹಾನಿಕರವಾದುದು ಎಂದು ಸದಾ ಎಣಿಸಿದ್ದೇನೆ. ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಈ ಅಭ್ಯಾಸದಲ್ಲಿ ಜನರಿಗೆ ಇಷ್ಟು ಆಸಕ್ತಿ ಏಕೆ ಇದೆಯೆಂದು ನನಗೆ ಇದುವರೆಗೂ ತಿಳಿದಿಲ್ಲ. ರೈಲು ಗಾಡಿಯ ತುಂಬ ಜನರು ಕುಳಿತುಕೊಂಡು ಬೀಡಿ ಸೇದುತ್ತಿದ್ದರೆ ನನಗೆ ಪ್ರಯಾಣ ಮಾಡುವುದು ಕಷ್ಟವಾಗುತ್ತದೆ. ಹೊಗೆಯಿಂದ ನನ್ನ ಉಸಿರು ಕಟ್ಟಿಹೋಗುತ್ತದೆ.

ಇದಾದ ಕೆಲವು ದಿವಸಗಳಮೇಲೆ ನಾನು ಮಾಡಿದ ಕಳ್ಳತನವು ಇನ್ನೂ ಹೆಚ್ಚಿನದಾಗಿದ್ದಿತು. ಕಾಸುಗಳನ್ನು ಕದ್ದಾಗ ನನ್ನ ವಯಸ್ಸು ೧೨–೧೩ ಆಗಿದ್ದಿತು. ಅಥವಾ ಇನ್ನೂ ಕಡಮೆ ಇದ್ದರೂ ಇರಬಹುದು. ಇನ್ನೊಂದು ಕಳ್ಳತನವನ್ನು ಮಾಡಿದಾಗ ನನಗೆ ೧೫ ವರ್ಷವಾಗಿದ್ದಿತು. ಮಾಂಸ ತಿನ್ನುತ್ತಿದ್ದನೆಂದು ಹೇಳಿರುವೆನಲ್ಲ ಆ ಅಣ್ಣನ ಕೈಯ್ಯಲ್ಲಿದ್ದ ಬಂಗಾರದ ಬಳೆಯ ಒಂದು ಚೂರನ್ನೇ ನಾನು ಕದ್ದುದು. ಈ ಅಣ್ಣನು ಸುಮಾರು ೨೫ ರೂಪಾಯಿ ಸಾಲ ಮಾಡಿದ್ದನು. ಅವನ ಕೈಯಲ್ಲಿ ಚಿನ್ನದ ಗಟ್ಟಿ ಬಳೆಯಿದ್ದಿತು. ಅದರಿಂದ ಒಂದು ಚೂರು ಬಂಗಾರವನ್ನು ಮುರಿದು ತೆಗೆದುಕೊಳ್ಳುವದೇನೂ ಕಷ್ಟದ ಕೆಲಸವಾಗಿರಲಿಲ್ಲ.

ಅದನ್ನು ಮುರಿದುದೂ ಆಯಿತು, ಸಾಲವನ್ನು ತೀರಿಸಿದುದೂ ಆಯಿತು. ಆದರೆ ಈ ವಿಚಾರವನ್ನು ಸಹಿಸುವುದು ನನಗೆ ಸಾಧ್ಯವಾಗಲಿಲ್ಲ. ಇನ್ನೆಂದಿಗೂ ಕಳ್ಳತನವನ್ನು ಮಾಡುವುದಿಲ್ಲವೆಂದು ನಿಶ್ಚಯ ಮಾಡಿದೆನು. ಇಷ್ಟೇ ಅಲ್ಲದೆ ನಮ್ಮ ತಂದೆಯ ಮುಂದೆ ನನ್ನ ತಪ್ಪನ್ನು ಒಪ್ಪಿಕೊಳ್ಳಬೇಕೆಂದೂ ಮನಸ್ಸು ಮಾಡಿದೆನು. ಆದರೆ ಅವರೆದುರಿಗೆ ಮಾತನಾಡಲು ನಾನು ಧೈರ್ಯಪಡಲಿಲ್ಲ. ಅವರು ಹೊಡೆಯುವರೆಂಬ ಹೆದರಿಕೆಯೇನೂ ಇರಲಿಲ್ಲ. ನಮ್ಮಲ್ಲಿ ಯಾರನ್ನೂ ಅವರು ಹೊಡೆದಂತೆ ನನಗೆ ನೆನಪಿಲ್ಲ. ಅವರಿಗೆ ಖೇದವುಂಟಾಗುವುದೆನ್ನುವುದೇ ನನ್ನ

ಯೋಚನೆ. ಕಡೆಗೆ ಹ್ಯಾಗಾದರೂ ಆಗಲಿ ಅವರಿಗೆ ತಿಳಿಸಿಯೇ ಬಿಡ ಬೇಕೆಂದು ನಿರ್ಧರಿಸಿದೆನು. ಏತಕ್ಕೆಂದರೆ ಹಾಗೆ ಒಪ್ಪಿಕೊಳ್ಳದಿದ್ದರೆ ಅಂತಃಶುದ್ಧಿಯಾಗುವುದಿಲ್ಲವೆಂದು ನನಗೆ ತೋರಿತು.

ನನ್ನ ಅಪರಾಧದ ವಿಚಾರವನ್ನೆಲ್ಲಾ ಒಂದು ಕಾಗದದಲ್ಲಿ ಬರೆದು ಅದನ್ನು ಅವರಿಗೆ ಕೊಟ್ಟು ಅವರ ಕ್ಷಮಾಪಣೆ ಬೇಡಬೇಕೆಂದು ನಿರ್ಧರಿಸಿ ಒಂದು ಕಾಗದದ ಚೂರಿನಲ್ಲಿ ಬರೆದು ಅದನ್ನು ನಾನೇ ಅವರ ಕೈಗೆ ಕೊಟ್ಟೆನು. ಅದರಲ್ಲಿ ನನ್ನ ತಪ್ಪನ್ನು ಒಪ್ಪಿಕೊಂಡುದಷ್ಟೇ ಅಲ್ಲದೆ ಅದಕ್ಕಾಗಿ ನನಗೆ ಶಿಕ್ಷೆ ಕೊಡಬೇಕೆಂದೂ ಬೇಡಿದೆನು. ಇದರ ಜೊತೆಗೆ ತಾವು ಇದಕ್ಕಾಗಿ ದುಃಖಿಸಕೂಡದೆಂದು ಪ್ರಾರ್ಥಿಸಿ ನಾನು ಇನ್ನು ಮುಂದೆ ಈ ರೀತಿಯಾದ ಅಪರಾಧವನ್ನು ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದೆನು.

ನಮ್ಮ ತಂದೆಯವರಿಗೆ ಕಾಗದವನ್ನು ಕೊಡುವಾಗ ನನ್ನ ಶರೀರವು ಕಂಪಿಸುತ್ತಿದ್ದಿತು. ಆ ಸಮಯದಲ್ಲಿ ಅವರು ಭಗಂದರದಿಂದ ನರಳುತ್ತಾ ಹಾಸಿಗೆ ಹಿಡಿದಿದ್ದರು. ಹಾಸಿಗೆಯ ಬದಲಾಗಿ ಬರಿಯ ಹಲಗೆಯ ಮೇಲೆ ಮಲಗಿದ್ದರು. ಕಾಗದವನ್ನು ಕೊಟ್ಟು ಅವರೆದುರಿಗೆ ಹೋಗಿ ಕುಳಿತುಕೊಂಡೆನು.

ಅವರು ಕಾಗದವನ್ನು ಓದಿದರು. ಕಣ್ಣುಗಳಿಂದ ಮುತ್ತಿನಂತಿದ್ದ ಅಶ್ರುಬಿಂದುಗಳು ಸುರಿದು ಕಾಗದವನ್ನು ತೋಯಿಸಿದವು. ಸ್ವಲ್ಪ ಹೊತ್ತು ಅವರು ಯೋಚನೆಮಾಡುತ್ತಾ ಕಣ್ಣನ್ನು ಮುಚ್ಚಿಕೊಂಡರು. ಆಮೇಲೆ ಹರಿದುಹಾಕಿ ಓದುವುದಕ್ಕೋಸ್ಕರ ಎದ್ದುಕುಳಿತುಕೊಂಡಿದ್ದವರು ಪುನಃ ಮಲಗಿಕೊಂಡರು. ನಾನೂ ಅತ್ತೆನು. ನಮ್ಮ ತಂದೆಯ ಸಂಕಟವು ಕಣ್ಣಿಗೆ ಕಾಣುತ್ತಿದ್ದಿತು. ನಾನು ಚಿತ್ರಗಾರನಾಗಿದ್ದರೆ ಅಂದಿನ ದೃಶ್ಯವನ್ನು ಚಿತ್ರಿಸುತ್ತಿದ್ದೆನು. ಆ ಚಿತ್ರವು ಈಗಲೂ ನನ್ನ ಮನಶ್ಚಕ್ಷುವಿಗೆ ಅಷ್ಟು ಸ್ಪಷ್ಟವಾಗಿ ಕಾಣುತ್ತದೆ.

ಆ ಮುತ್ತಿನ ಬಿಂದುಗಳು ನನ್ನ ಹೃದಯದ ಕಲ್ಮಷವನ್ನು ಕೊಚ್ಚಿಕೊಂಡು ಹೋದುವು; ಆ ಪ್ರೇಮಬಾಣವು ನನ್ನ ಪಾಪಗಳನ್ನು ಭೇದಿ

ಸಿತು. ಇಂತಹ ಪ್ರೇಮದ ಅನುಭವವು ಯಾರಿಗಿರುವುದೋ ಅವನೇ ಅದನ್ನು ಬಲ್ಲನು.

'ಪ್ರೇಮಬಾಣಕ್ಕೆ ಗುರಿಯಾದವನಿಗೇ ಅದರ ತೀಕ್ಷ್ಣತೆಯು ಗೊತ್ತು.'

ಇದು ನನಗೆ ಅಹಿಂಸೆಯ ವಸ್ತುಪಾಠವಾಯಿತು. ಆ ಸಮಯದಲ್ಲಿ ತಂದೆಯ ಪ್ರೇಮವೊಂದು ಹೊರತು ಇನ್ನೇನೂ ಇದರಲ್ಲಿ ಕಾಣಲಿಲ್ಲ. ಇಂದಾದರೊ ಅದು ಶುದ್ಧವಾದ ಅಹಿಂಸೆಯ ಪ್ರಯೋಗವೆಂದು ನನಗೆ ಗೊತ್ತು. ಈ ರೀತಿಯಾದ ಅಹಿಂಸೆಯು ಪ್ರಪಂಚವನ್ನೆಲ್ಲಾ ವ್ಯಾಪಿಸಿದಾಗ ಅದರಿಂದ ಮಾರ್ಪಡದಿರುವುದಾವುದು? ಅದರ ಪ್ರಭಾವಕ್ಕೆ ಮಿತಿಯುಂಟೆ?

ಇಂತಹ ಶಾಂತಿಪೂರ್ವಕವಾದ ಘನವಾದ ಕ್ಷಮೆಯು ನಮ್ಮ ತಂದೆಯ ಪ್ರಕೃತಿಗೆ ಸಹಜವಾಗಿರಲಿಲ್ಲ. ಅವರು ಸಿಟ್ಟಾಗಿ ನನ್ನನ್ನು ಬಯ್ದು ಆ ಸಿಟ್ಟಿನಲ್ಲಿ ಬಹುಶಃ ತಮ್ಮ ಹಣೆಯನ್ನು ಚಚ್ಚಿಕೊಳ್ಳುವರೆಂದು ತಿಳಿದುಕೊಂಡಿದ್ದೆನು. ಆದರೆ ಅವರು ಅಗಾಧವಾದ ಶಾಂತಿಯಿಂದಿದ್ದರು. ಇದು ನಾನು ವಿಶುದ್ಧವಾದ ಅಂತಃಕರಣದಿಂದ ನನ್ನ ತಪ್ಪನ್ನು ಒಪ್ಪಿಕೊಂಡುದರ ಫಲವೆಂದು ಎಣಿಸುತ್ತೇನೆ. ಯಾವಾತನಿಗೆ ನಮ್ಮನ್ನು ಕ್ಷಮಿಸುವ ಅಧಿಕಾರವಿರುವಾತನಿಗೆ ನಮ್ಮ ತಪ್ಪನ್ನು ಮುಚ್ಚುಮರೆಯಿಲ್ಲದೆ ಒಪ್ಪಿಕೊಂಡು ಪುನಃ ಆ ರೀತಿಯಾದ ಅಪರಾಧವನ್ನು ಮಾಡುವುದಿಲ್ಲವೆಂದು ಪ್ರತಿಜ್ಞೆಮಾಡುವುದು ಶುದ್ಧತಮವಾದ ಪ್ರಾಯಶ್ಚಿತ್ತ. ಈ ರೀತಿಯಾಗಿ ನಾನು ವರ್ತಿಸಿದುದರಿಂದ ನಮ್ಮ ತಂದೆಯು ನನ್ನ ವಿಚಾರವಾಗಿ ನಿರ್ಭಯರಾದರೆಂದೂ ಇದರಿಂದ ಅವರಿಗೆ ನನ್ನಲ್ಲಿದ್ದ ಪ್ರೇಮವು ಅಳತೆಮೀರಿ ಹೆಚ್ಚಿತೆಂದೂ ನನಗೆ ಗೊತ್ತು.



## ೬

# ನಮ್ಮ ತಂದೆಯ ಮರಣ
# ನನ್ನ ಇಮ್ಮಡಿಯಾದ ಅಪಮಾನ

ನಾನು ಈಗ ಹೇಳುತ್ತಿರುವುದು ನನ್ನ ಹದಿನಾರನೆಯ ವಯಸ್ಸಿಗೆ ಸಂಬಂಧಪಟ್ಟುದು. ನಮ್ಮ ತಂದೆಯು ಭಗಂದರದಿಂದ ನರಳುತ್ತಾ ಹಾಸಿಗೆ ಹಿಡಿದು ಮಲಗಿದ್ದರೆಂದು ಪಾಠಕರಿಗೆ ಗೊತ್ತೇ ಇದೆ. ನಮ್ಮ ತಾಯಿ, ಒಬ್ಬ ಹಳೆಯ ಸೇವಕ, ನಾನು, ಮುಖ್ಯವಾಗಿ ನಾವು ಮೂರು ಜನರೂ ನಮ್ಮ ತಂದೆಯನ್ನು ಉಪಚರಿಸುತ್ತಿದ್ದೆವು. ಗಾಯವನ್ನು ತೊಳೆದು ಬಟ್ಟೆ ಕಟ್ಟುವುದು, ಔಷಧ ಕೊಡುವುದು, ಮನೆಯಲ್ಲಿ ತಯಾರುಮಾಡಬೇಕಾದ ಔಷಧಗಳನ್ನು ಸಿದ್ಧಪಡಿಸುವುದು, ಈ ಕೆಲಸಗಳನ್ನು ನಾನು ನೋಡಿಕೊಳ್ಳುತ್ತಿದ್ದೆನು. ಪ್ರತಿ ರಾತ್ರಿಯೂ ನಮ್ಮ ತಂದೆಯ ಕಾಲುಗಳನ್ನು ನೀವಿ ಅವರು ನಿದ್ದೆ ಹೋದಮೇಲೆ ಅಥವಾ ಅವರು ಹೋಗೆಂದಾಗ ಮಾತ್ರ ನಾನು ವಿಶ್ರಮಿಸುತ್ತಿದ್ದೆನು. ಈ ಸೇವೆಯನ್ನು ನಡೆಸುವುದು ನನಗೆ ಪ್ರಿಯವಾಗಿದ್ದಿತು. ನಾನು ಎಂದೂ ಇದನ್ನು ಅಸಡ್ಡೆಮಾಡಿದಂತೆ ಕಾಣೆ. ದಿನವಹಿ ಕೆಲಸಗಳನ್ನೆಲ್ಲಾ ಮುಗಿಸಿದ ಮೇಲೆ ಉಳಿದ ಹೊತ್ತನ್ನು ನಮ್ಮ ತಂದೆಯ ಸೇವೆಯನ್ನು ಮಾಡುವುದರಲ್ಲೂ ಶಾಲೆಯ ಕೆಲಸದಲ್ಲೂ ವಿನಿಯೋಗಿಸುತ್ತಿದ್ದೆನು. ನಮ್ಮ ತಂದೆಯು ಅಪ್ಪಣೆ ಕೊಟ್ಟಾಗ ಅಥವಾ ಅವರಿಗೆ ಬೇನೆ ಇಲ್ಲದಿದ್ದಾಗ ಮಾತ್ರ ನಾನು ಸಂಜೆ ತಿರುಗಾಡುವುದಕ್ಕೆ ಹೋಗುತ್ತಿದ್ದೆನು.

ಇದೇ ಸಮಯದಲ್ಲೇ ನನ್ನ ಹೆಂಡತಿಯು ಗರ್ಭಿಣಿಯಾಗಿದ್ದಳು. ಇಂದು ನೋಡಿದರೆ ಅದು ನನಗೆ ದ್ವಿಗುಣವಾದ ಅಪಮಾನದ ವಿಚಾರವೆಂದು ತೋರುತ್ತದೆ. ಏಕೆಂದರೆ ಇನ್ನೂ ವಿದ್ಯಾರ್ಥಿಯಾಗಿದ್ದ ನಾನು

ವಿದ್ಯಾರ್ಥಿಯ ದೆಸೆಗೆ ತಕ್ಕಂತೆ ಬ್ರಹ್ಮಚರ್ಯೆಯನ್ನಾಚರಿಸುತ್ತಿರಲಿಲ್ಲ. ಎರಡನೆಯದಾಗಿ, ವಿಷಯಸುಖದ ಆಸೆಯು ಓದು ಬರಹಗಳನ್ನು ಮೂಲೆಗೊತ್ತಿತು. ಇನ್ನೂ ಮುಖ್ಯವಾಗಿ—ಶ್ರವಣನ ಪಿತೃಭಕ್ತಿಯನ್ನೇ ಆದರ್ಶವಾಗಿಟ್ಟುಕೊಂಡಿದ್ದ ನನ್ನನ್ನು ನಮ್ಮ ತಂದೆತಾಯಿಗಳ ಸೇವೆಯ ವಿಚಾರವಾಗಿ ಅಲಕ್ಷ್ಯವುಳ್ಳವನನ್ನಾಗಿ ಮಾಡಿತು. ಪ್ರತಿ ರಾತ್ರಿಯೂ ನನ್ನ ಕೈಗಳು ನಮ್ಮ ತಂದೆಯ ಕಾಲನ್ನೊತ್ತುತ್ತಿರುವಾಗ ನನ್ನ ಮನಸ್ಸು ಮಲಗುವ ಮನೆಯ ಸುತ್ತಮುತ್ತ ಹರಿದಾಡುತ್ತಿದ್ದಿತು. ಅದೂ ಎಂತಹ ಕಾಲದಲ್ಲಿ? ಧರ್ಮಶಾಸ್ತ್ರವೂ ವೈದ್ಯಶಾಸ್ತ್ರವೂ ಸಾಮಾನ್ಯವಾದ ತಿಳಿವಳಿಕೆಯೂ ಕೂಡ ಗಂಡ ಹೆಂಡಿರು ಕೂಡುವುದು ತಪ್ಪೆಂದು ಸಾರುವಾಗ! ನನ್ನ ಕೆಲಸವು ಮುಗಿಯಿತೆಂದರೆ ನನಗೆ ಹರುಷವಾಗುತ್ತಿದ್ದಿತು. ನಮ್ಮ ತಂದೆಗೆ ನಮಸ್ಕಾರ ಮಾಡಿ ನಾನು ನೇರವಾಗಿ ಮಲಗುವ ಮನೆಗೆ ಹೋಗುತ್ತಿದ್ದೆನು.

ಇತ್ತಕಡೆ ನಮ್ಮ ತಂದೆಯ ಸ್ಥಿತಿಯು ಬರಬರುತ್ತಾ ಕೇಡಾಯಿತು. ಆಯುರ್ವೇದ ವೈದ್ಯರು ತಮ್ಮ ಮುಲಾಮುಗಳನ್ನೆಲ್ಲಾ ಹಚ್ಚಿದರು. ಹಕೀಮರು ತಮ್ಮ ಲೇಪಗಳನ್ನೆಲ್ಲಾ ಅಂಟಿಸಿದರು. ಸ್ಥಳದ ವೈದ್ಯರು ತಮ್ಮ ಔಷಧಗಳನ್ನು ಕುಡಿಸಿದರು. ಒಬ್ಬ ಇಂಗ್ಲಿಷ್ ಡಾಕ್ಟರನು ತನ್ನ ಚಾತುರ್ಯವನ್ನೂ ಉಪಯೋಗಿಸಿದನು. ಆತನು ಕಡೆಯ ಉಪಾಯವಾಗಿ ಶಸ್ತ್ರೋಪಚಾರ ಮಾಡಿಸಬೇಕೆಂದು ಹೇಳಿದನು. ಆದರೆ ಮನೆಯ ವೈದ್ಯನು ಅಡ್ಡಬಂದು ನಮ್ಮ ತಂದೆಯು ಈ ವಯಸ್ಸಿನಲ್ಲಿ ಶಸ್ತ್ರೋಪಚಾರ ಮಾಡಿಸಿಕೊಳ್ಳುವುದು ಯುಕ್ತವಲ್ಲವೆಂದು ಹೇಳಿದನು. ಆತನು ಯೋಗ್ಯತೆಯುಳ್ಳವನೂ ಹೆಸರುವಾಸಿಯಾದವನೂ ಆಗಿದ್ದುದರಿಂದ ಆತನ ಮಾತೇ ನಡೆಯಿತು. ಶಸ್ತ್ರೋಪಚಾರವನ್ನು ಬಿಟ್ಟುದಾಯಿತು. ಇದಕ್ಕಾಗಿ ಕೊಂಡ ಅನೇಕ ಔಷಧಗಳು ವ್ಯರ್ಥವಾದುವು. ಮನೆಯ ವೈದ್ಯನು ಶಸ್ತ್ರೋಪಚಾರಕ್ಕೆ ಸಮ್ಮತಿಸಿದ್ದರೆ ಗಾಯವು ಸುಲಭವಾಗಿ ಮಾಯುತ್ತಿದ್ದಿತೆಂದು ನನ್ನ ಭಾವನೆ. ಅದೂ ಅಲ್ಲದೆ ಮುಂಬಯಿಯಲ್ಲಿ ತುಂಬಾ ಪ್ರಸಿದ್ಧನಾದ ಒಬ್ಬ ಡಾಕ್ಟರನಿಂದ ಈ ಶಸ್ತ್ರಪ್ರಯೋಗವು ನಡೆಯಬೇಕಾಗಿದ್ದಿತು. ಆದರೆ ದೇವರ ಉದ್ದೇಶವು ಬೇರೆಯಾಗಿದ್ದಿತು.

ಸಾವು ಒದಗಿದಾಗ ಸರಿಯಾದ ಚಿಕಿತ್ಸೆಯು ಹೊಳೆಯುವುದಾರಿಗೆ? ನಮ್ಮ ತಂದೆಯು ಈಗ ಕೆಲಸಕ್ಕೆ ಬಾರದ ಶಸ್ತ್ರೋಪಚಾರಕ್ಕೆ ಸಂಬಂಧಪಟ್ಟ ಉಪಕರಣಗಳನ್ನು ತೆಗೆದುಕೊಂಡು ಮುಂಬಯಿಯಿಂದ ಹಿಂತಿರುಗಿದರು. ಇನ್ನು ಬದುಕುವ ಆಸೆಯನ್ನು ಅವರು ಬಿಟ್ಟುಬಿಟ್ಟರು. ಬರಬರುತ್ತಾ ಅವರ ಶಕ್ತಿಯು ಕುಂದಿ ಕಡೆಗೆ ಮಲಮೂತ್ರಾದಿಗಳನ್ನು ಹಾಸಿಗೆಯಲ್ಲೇ ಮಾಡಿರೆಂದು ಅವರಿಗೆ ಹೇಳಬೇಕಾಗಿ ಬಂದಿತು. ಆದರೆ ಕಡೆಯವರೆಗೂ ಅವರು ಇದಕ್ಕೊಪ್ಪಲಿಲ್ಲ. ಪ್ರತಿಸಲವೂ ಬಹಳ ಯಾತನೆಯನ್ನನುಭವಿಸಿದರೂ ಹಾಸಿಗೆ ಬಿಟ್ಟೇಹೋಗುತ್ತಿದ್ದರು. ಬಾಹ್ಯ ಶುಚಿಯ ವಿಚಾರವಾಗಿ ವೈಷ್ಣವನಿಯಮಗಳು ಇಷ್ಟು ಕಠಿಣ.

ಈ ತೆರನಾದ ಶುಚಿಯು ಬಹು ಮುಖ್ಯವೆನ್ನುವುದೇನೋ ನಿಜ. ಆದರೆ ಪಾಶ್ಚಾತ್ಯ ವೈದ್ಯಶಾಸ್ತ್ರವು ಸ್ನಾನ, ಮಲಮೂತ್ರವಿಸರ್ಜನೆ, ಇವೆಲ್ಲವನ್ನೂ ಕೊಳೆಗೆ ಸ್ವಲ್ಪವೂ ಅವಕಾಶಕೊಡದಂತೆ ಹಾಸಿಗೆಯಲ್ಲಿಯೇ ನಡೆಸುವ ಏರ್ಪಾಡನ್ನು ಕಲಿಸಿಕೊಟ್ಟಿದೆ. ಈ ರೀತಿಯ ಶುಚಿಯು ವೈಷ್ಣವ ಸಂಪ್ರದಾಯಕ್ಕೆ ಕೊಂಚವೂ ವಿರೋಧವಲ್ಲವೆಂದು ನನ್ನ ಅಭಿಪ್ರಾಯ. ಆದರೆ ಆಗ ನಮ್ಮ ತಂದೆಯು ಈ ಕೆಲಸಗಳಿಗೆಲ್ಲಾ ಹಾಸಿಗೆಯಿಂದ ಯಾತನೆ ಪಟ್ಟುಕೊಂಡು ಎದ್ದು ಬರುವುದು ನನ್ನಲ್ಲಿ ಆಶ್ಚರ್ಯವನ್ನು ಮಾತ್ರ ಉಂಟುಮಾಡುತ್ತಿದ್ದಿತು. ಅದನ್ನು ಕಂಡರೆ ನನಗೆ ಹೇಳಲಾಗದಷ್ಟು ಮೆಚ್ಚಿಗೆ.

ಆ ಭಯಂಕರವಾದ ರಾತ್ರಿಯೊದಗಿತು. ನಮ್ಮ ಚಿಕ್ಕಪ್ಪನು ಆಗ ರಾಜಕೋಟೆಯಲ್ಲೇ ಇದ್ದನು. ನಮ್ಮ ತಂದೆಯ ಕಾಹಿಲೆಯು ಹೆಚ್ಚಾದುದನ್ನು ಕೇಳಿ ಆತನು ರಾಜಕೋಟೆಗೆ ಬಂದಿದ್ದನೆಂದು ನನಗೆ ಎಲ್ಲೋ ಸ್ವಲ್ಪ ನೆನಪಿದೆ. ಅಣ್ಣತಮ್ಮಂದಿರು ಒಬ್ಬರಿಗೊಬ್ಬರು ಬಹಳ ಹೊಂದಿಕೊಂಡಿದ್ದರು. ನಮ್ಮ ಚಿಕ್ಕಪ್ಪನು ಹಗಲೆಲ್ಲಾ ನಮ್ಮ ತಂದೆಯ ಬಳಿಯಲ್ಲೇ ಇರುವನು. ರಾತ್ರಿಯ ಹೊತ್ತು ನಮ್ಮನ್ನೆಲ್ಲಾ ಮಲಗುವುದಕ್ಕೆ ಕಳುಹಿಸಿ ಆತನು ನಮ್ಮ ತಂದೆಯ ಮಗ್ಗಲಲ್ಲೇ ಮಲಗುವನು. ಇದೇ ನಮ್ಮ ತಂದೆಯ ಮರಣಕ್ಕೆಂದು ದೇವರು ನಿಯಮಿಸಿದ್ದ ರಾತ್ರಿಯೆಂದು

ಸಾವಾರೂ ಕನಸಿನಲ್ಲೂ ಕಂಡಿರಲಿಲ್ಲ. ಅವರ ಸ್ಥಿತಿಯೇನೋ ಅಪಾಯ ಕರವಾಗಿಯೇ ಇದ್ದಿತು.

ರಾತ್ರಿ ಸುಮಾರು ೧೦॥ ಅಥವಾ ೧೧ ತಾಸಿನ ಸಮಯದಲ್ಲಿ ನಾನು ನಮ್ಮ ತಂದೆಯವರ ಕಾಲನ್ನು ಒತ್ತುತ್ತಿದ್ದೆನು. ನಮ್ಮ ಚಿಕ್ಕಪ್ಪನು ತಾನು ಒತ್ತುತ್ತೇನೆಂದು ಹೇಳಿದನು. ಇದರಿಂದ ನನಗೆ ಸಂತೋಷವೇ ಆಗಿ ನೇರವಾಗಿ ಮಲಗುವಮನೆಗೆ ಹೋದೆನು. ನನ್ನ ಹೆಂಡತಿಯು ಗಾಢ ವಾದ ನಿದ್ರೆಯಲ್ಲಿದ್ದಳು. ನಾನಿರುವಾಗ ಆಕೆಯು ನಿದ್ದೆಮಾಡುವು ದುಂಟೆ? ಆಕೆಯನ್ನು ಎಬ್ಬಿಸಿದೆನು. ಆದರೆ ೬-೭ ನಿಮಿಷದೊಳಗಾಗಿ ಸೇವಕನು ಬಾಗಿಲನ್ನು ತಟ್ಟಿದನು. ನಾನು ಗಾಬರಿಯಿಂದೆದ್ದೆನು. "ಏಳು, ಬಾಪುವಿಗೆ ಕಾಹಿಲೆ ಬಹಳ ಹೆಚ್ಚಾಗಿದೆ." ಎಂದನು. ನಮ್ಮ ತಂದೆಗೆ ಕಾಹಿಲೆ ಬಹಳ ಹೆಚ್ಚೆಂದು ನನಗೆ ಗೊತ್ತಿದ್ದುದರಿಂದ ಸೇವಕನು 'ಕಾಹಿಲೆ ಬಹಳ ಹೆಚ್ಚು' ಎಂದು ಹೇಳಿದುದರ ನಿಜವಾದ ಅರ್ಥವು ನನಗೆ ಹೊಳೆಯಿತು. ನಾನು ಹಾಸಿಗೆಯಿಂದ ಥಟ್ಟನೆದ್ದು

"ನಿಜವಾಗಿಯೂ ಏನಾಗಿದೆ, ಹೇಳು." ಎಂದು ಕೇಳಿದೆನು.

" ಬಾಪು ಸ್ವರ್ಗಸ್ಥರಾದರು."

ಹಾಗಾದರೆ ಎಲ್ಲವೂ ಮುಕ್ತಾಯವಾಯಿತು! ನಾನು ಕೈಹಿಸು ಕಿಕೊಳ್ಳುವುದೊಂದೇ ಬಾಕಿ ಉಳಿದುದು. ನನಗೆ ಬಹಳ ಪಶ್ಚಾತ್ತಾ ಪವೂ ಸಂಕಟವೂ ಉಂಟಾಯಿತು. ನಮ್ಮ ತಂದೆಯ ಕೊಠಡಿಗೆ ಓಡಿ ಹೋದೆನು. ವಿಷಯಾಸಕ್ತಿಯಿಂದ ನಾನು ಕುರುಡನಾಗಿರದಿದ್ದರೆ ಅವರ ಅಂತ್ಯಕಾಲದಲ್ಲಿ ನಮ್ಮ ತಂದೆಯವರಿಂದ ಅಗಲಿರುವ ಸಂಕಟವು ನನಗೆ ಒದಗುತ್ತಿರಲಿಲ್ಲವೆಂದು ಹೊಳೆಯಿತು. ನಾನು ಅವರ ಕಾಲನ್ನು ಒತ್ತುತ್ತಿರುವಾಗ ಅವರು ನನ್ನ ತೊಡೆಯಮೇಲೆಯೇ ಪ್ರಾಣಬಿಡು ತ್ತಿದ್ದರು. ಈಗಲಾದರೋ ಆ ಅದೃಷ್ಟವು ನಮ್ಮ ಚಿಕ್ಕಪ್ಪನ ಪಾಲಿಗೆ ಬಿದ್ದಿತು. ಆತನಿಗೆ ತಮ್ಮಣ್ಣನಲ್ಲಿ ಅಷ್ಟು ಭಕ್ತಿಯಿದ್ದುದರಿಂದಲೇ ಈ ಅದೃಷ್ಟವು ಆತನಿಗೆ ಲಭಿಸಿತು! ನಮ್ಮ ತಂದೆಗೆ ತಮ್ಮ ಕಡೆಗಾಲವು ಬರು ತ್ತಿದ್ದುದರ ಸುಳಿವು ಗೊತ್ತಿದ್ದಿತು. ಅವರು ಕಾಗದಕ್ಕೂ ಲೆಕ್ಕಣಿಗೂ

ಸನ್ನೆಮಾಡಿ ತರಿಸಿ "ಕಡೆಯ ಸಂಸ್ಕಾರಗಳಿಗೆ ಸಿದ್ಧಪಡಿಸಿಕೊಳ್ಳಿರಿ." ಎಂದು ಬರೆದು ಆಮೇಲೆ ತಮ್ಮ ಕೈಗೆ ಕಟ್ಟಿಕೊಂಡಿದ್ದ ಕಂಕಣವನ್ನೂ ಕೊರಳಿನಲ್ಲಿದ್ದ ಚಿನ್ನದ ತುಳಸೀಮಣಿಯ ಹಾರವನ್ನೂ ಕಿತ್ತು ಎಸೆದಿದ್ದರು. ಇದಾದ ಒಂದುಕ್ಷಣದಲ್ಲಿ ಅವರು ಈ ಲೋಕವನ್ನು ಬಿಟ್ಟರು.

ನಾನು ಹಿಂದಿನ ಒಂದು ಅಧ್ಯಾಯದಲ್ಲಿ ಹೇಳಿರುವ ಪಶ್ಚಾತ್ತಾಪಕ್ಕೆ ಕಾರಣವೇನೆಂದರೆ: ಬಹಳ ಎಚ್ಚರಿಕೆಯಿಂದಿರಬೇಕಾಗಿದ್ದ ಈ ಗಂಡಾಂತರದ ಸಮಯದಲ್ಲೂ ನಾನು ನನ್ನ ವಿಷಯಾಸಕ್ತಿಯನ್ನು ಮರೆಯಲಿಲ್ಲವೆಂದು. ಈ ಕಳಂಕವು ನನ್ನ ಮನಸ್ಸಿನಿಂದ ಇದುವರೆಗೂ ತೊಡೆದುಹೋಗಿಲ್ಲವಲ್ಲದೆ ನಾನು ನನ್ನ ತಂದೆತಾಯಿಗಳಲ್ಲಿ ಮೇರೆಯಿಲ್ಲದಷ್ಟು ಭಕ್ತಿಯಿಟ್ಟಿದ್ದರೂ ಅದಕ್ಕಾಗಿ ಏನನ್ನು ಕೊಡಲೂ ಸಿದ್ಧನಾಗಿದ್ದರೂ ನನ್ನ ಮನಸ್ಸು ಅದೇಕಾಲದಲ್ಲಿ ವಿಷಯಸುಖದ ಹಿಡಿತದಲ್ಲಿ ಸಿಕ್ಕಿದ್ದಿತಾದುದರಿಂದ ನನ್ನ ಪಿತೃಭಕ್ತಿಯನ್ನು ಅಂದು ಪರೀಕ್ಷಿಸಲು ಅದರಲ್ಲಿ ಅಕ್ಷಮ್ಯವಾದ ಕುಂದು ಕಂಡುಬಂದಿತೆಂದೇ ಇಂದಿನವರೆಗೂ ನನ್ನ ಎಣಿಕೆ. ಆದುದರಿಂದ ನಾನು ನನ್ನ ಹೆಂಡತಿಗೆ ಎರಡೆಣಿಸದವನಾಗಿದ್ದರೂ ಕಾಮಿಯಾದ ಪತಿಯೆಂದೇ ನನ್ನ ಭಾವನೆ. ನನಗೆ ಕಾಮದ ಬಲೆಯಿಂದ ತಪ್ಪಿಸಿಕೊಳ್ಳಲು ಬಹುಕಾಲ ಹಿಡಿಯಿತು. ಕಾಮವನ್ನು ಗೆಲ್ಲುವುದಕ್ಕೆ ಮುಂಚೆ ಎಷ್ಟೋ ಪರೀಕ್ಷೆಗಳಿಗೊಳಗಾಗಬೇಕಾಯಿತು.

ನನ್ನ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಆ ಬಡಕೂಸು ಮೂರು ನಾಲ್ಕು ದಿವಸಕೂಡ ಉಸಿರಾಡಲಿಲ್ಲ. ಅಂತಹ ಸಂದರ್ಭದಲ್ಲಿ ಇನ್ನೇನನ್ನು ನಿರೀಕ್ಷಿಸಲಾದೀತು? ಮದುವೆಯಾದವರೆಲ್ಲರೂ ಈ ನನ್ನ ಉದಾಹರಣೆಯಿಂದ ಎಚ್ಚರಗೊಳ್ಳಲೆಂದು ಹೇಳಿ ನನ್ನ ಇಮ್ಮಡಿಯಾದ ಅಪಕೀರ್ತಿಯನ್ನೊಳಗೊಂಡ ಈ ಪ್ರಕರಣವನ್ನು ಮುಗಿಸುವೆನು.



# ೧೦
# ಧರ್ಮದ ಬೆಳಕನ್ನು ಕಂಡುದು

ನನ್ನ ಆರೇಳನೆಯ ವರ್ಷದಿಂದ ಹದಿನಾರನೆಯ ವರ್ಷದವರೆಗೂ ನಾನು ಶಾಲೆಯಲ್ಲಿ ಓದುತ್ತಿದ್ದೆನು. ಆಗ ನನಗೆ ಏನೇನೋ ವಿಷಯಗಳನ್ನು ಹೇಳಿಕೊಡುತ್ತಿದ್ದರಾದರೂ ಧರ್ಮದ ಶಿಕ್ಷಣವು ಎಳ್ಳಷ್ಟೂ ಕೊಡಲ್ಪಡಲಿಲ್ಲ. ಶಿಕ್ಷಕರಿಂದ ನನಗೆ ಯಾವುದು ಅವರಿಗೆ ತೊಂದರೆಯಿಲ್ಲದೆಯೇ ಪ್ರಾಪ್ತವಾಗಬಹುದಾಗಿದ್ದಿತೋ ಅದು ಪ್ರಾಪ್ತವಾಗಲಿಲ್ಲವೆಂದು ಹೇಳಬಹುದು. ಹೀಗಿದ್ದರೂ ನನ್ನ ಸುತ್ತಮುತ್ತಲಿನವರಿಂದ ನಾನು ಧರ್ಮದ ವಿಚಾರವಾಗಿ ಅಷ್ಟು ಇಷ್ಟು ಜ್ಞಾನವನ್ನು ಸಂಪಾದಿಸುತ್ತಿದ್ದೆನು. ಇಲ್ಲಿ 'ಧರ್ಮ' ಎಂಬ ಶಬ್ದಕ್ಕೆ ವಿಶಾಲವಾದ ಮತ್ತು ಉದಾರವಾದ ಅರ್ಥವನ್ನು ಕೊಡಬೇಕು. ಧರ್ಮವೆಂದರೆ ಆತ್ಮದ ಸ್ವರೂಪವನ್ನರಿಯುವುದು—ಆತ್ಮಜ್ಞಾನ.

ನಾನು ವೈಷ್ಣವಮತದಲ್ಲಿ ಹುಟ್ಟಿದುದರಿಂದ ಆಗಾಗ ಹವೇಲಿಗೆ ಹೋಗಬೇಕಾಗುತ್ತಿದ್ದಿತು. ಆದರೆ ಇದರ ವಿಚಾರವಾಗಿ ನನ್ನ ಹೃದಯದಲ್ಲಿ ಶ್ರದ್ಧೆಯೇ ಇರಲಿಲ್ಲ. ಆ ದೇವಸ್ಥಾನದ ಥಳುಕೂ ವೈಭವವೂ ನನ್ನ ಮನಸ್ಸಿಗೆ ಸರಿಬೀಳುತ್ತಿರಲಿಲ್ಲ. ಅಲ್ಲಿ ಅನಾಚಾರಗಳು ಕೂಡ ನಡೆಯುತ್ತಿದ್ದುವೆಂದು ನಾನು ಕೇಳಿದ್ದೆನು. ಆದುದರಿಂದ ನನಗೆ ಅದರ ವಿಚಾರವಾಗಿ ಉದಾಸೀನತೆಯು ಹುಟ್ಟಿತು. ಈ ಕಾರಣದಿಂದ ದೇವಸ್ಥಾನದ ಮೂಲಕ ನನಗೆ ಏನೂ ಪ್ರಯೋಜನವಾಗಲಿಲ್ಲ.

ಆದರೆ ಅಲ್ಲಿಂದ ಕಲಿತುಕೊಳ್ಳುವುದಕ್ಕಾಗದಿದ್ದುದನ್ನು ನಮ್ಮ ಕುಟುಂಬದಲ್ಲಿ ಬಹುದಿನದಿಂದ ಇದ್ದ ಒಬ್ಬಸೇವಕಳಿಂದ ಅರಿತೆನು. ನನ್ನ ಮೇಲೆ ಅವಳಿಗಿದ್ದ ಪ್ರೀತಿಯನ್ನು ಈಗಲೂ ನೆನೆಸಿಕೊಳ್ಳುತ್ತೇನೆ. ನನಗೆ ಭೂತಪಿಶಾಚಿಗಳ ಹೆದರಿಕೆಯಿದ್ದಿತೆಂದು ನಾನು

ಹಿಂದೆಯೇ ಹೇಳಿದ್ದೇನೆ. ರಂಭೆಯು (ರಂಭೆಯೆನ್ನುವುದು ಇವಳ ಹೆಸರು) ಇದಕ್ಕೆ ಔಷಧವು ರಾಮನಾಮವೆಂದು ಹೇಳಿಕೊಟ್ಟಳು. ಈ ಔಷಧದಲ್ಲಿದ್ದುದಕ್ಕಿಂತಲೂ ಅವಳಲ್ಲೇ ನನಗೆ ಹೆಚ್ಚು ನಂಬಿಕೆಯಿದ್ದಿತು. ಆದುದರಿಂದ ಭೂತಪ್ರೇತಾದಿಗಳ ಹೆದರಿಕೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ನಾನು ಚಿಕ್ಕವಯಸ್ಸಿನಲ್ಲೇ ರಾಮನಾಮದ ಉಚ್ಚಾರಣೆಯನ್ನು ಪ್ರಾರಂಭಮಾಡಿದೆನು. ಇದು ಬಹಳದಿನ ನಡೆಯದಿದ್ದರೂ ಬಾಲ್ಯದಲ್ಲಿ ಬಿತ್ತಿದ ಬೀಜವು ವ್ಯರ್ಥವಾಗಲಿಲ್ಲ. ಇಂದು ರಾಮನಾಮವು ನನಗೆ ಒಂದು ಅಮೋಘವಾದ ಶಕ್ತಿಯಾಗಿರುವುದಕ್ಕೆ ರಂಭಾಬಾಯಿಯು ಬಿತ್ತಿದ ಬೀಜವೇ ಕಾರಣವೆಂದು ನನ್ನ ಎಣಿಕೆ.

ಇದೇ ಕಾಲದಲ್ಲಿಯೇ ರಾಮಾಯಣದಲ್ಲಿ ಬಹಳ ಭಕ್ತಿಯುಳ್ಳ ನಮ್ಮ ಚಿಕ್ಕಪ್ಪನ ಮಗನೊಬ್ಬನು ನಾನೂ ನಮ್ಮ ಎರಡನೆಯ ಅಣ್ಣನೂ ರಾಮರಕ್ಷೆಯನ್ನು ಕಲಿತುಕೊಳ್ಳುವುದಕ್ಕೆ ಏರ್ಪಾಡು ಮಾಡಿದನು. ನಾವು ಅದನ್ನು ಬಾಯಿಪಾಠಮಾಡಿ ಪ್ರತಿದಿನ ಬೆಳಿಗ್ಗೆ ಸ್ನಾನವಾದಮೇಲೆ ಪಠಿಸುವ ಪದ್ಧತಿಯನ್ನು ಮಾಡಿಕೊಂಡೆವು. ನಾವು ಪೋರಬಂದರದಲ್ಲಿರುವವರೆಗೂ ಈ ಅಭ್ಯಾಸವು ನಡೆಯಿತು. ರಾಜಕೋಟೆಯ ವಾಯುಮಂಡಲದಲ್ಲಿ ಇದು ಮಾಯವಾಯಿತು ಏಕೆಂದರೆ ಇದರಲ್ಲಿ ನನಗೆ ಹೆಚ್ಚಾದ ನಂಬಿಕೆಯಿರಲಿಲ್ಲ. ಇದನ್ನು ಕಲಿಸಿಕೊಟ್ಟಾತನಲ್ಲಿ ಹೆಚ್ಚಾದ ಪ್ರೀತಿಯಿದ್ದುದರಿಂದಲೂ ರಾಮರಕ್ಷೆಯನ್ನು ಶುದ್ಧವಾಗಿ ಉಚ್ಚರಿಸಬಲ್ಲೆನೆಂಬ ಹೆಮ್ಮೆಯಿಂದಲೂ ನಾನು ಅದನ್ನು ಪಠಿಸುತ್ತಿದ್ದೆನು.

ಎಂದಿಗೂ ಅಳಿಸಿಹೋಗದಂತೆ ನನ್ನ ಹೃದಯದಲ್ಲಿ ನಿಂತುದು ಏನೆಂದರೆ ನಮ್ಮ ತಂದೆಯ ಎದುರಿಗೆ ನಡೆಯುತ್ತಿದ್ದ ರಾಮಾಯಣಪಠನ. ಕಾಹಿಲೆಬಿದ್ದ ಕೆಲವುದಿನ ನಮ್ಮ ತಂದೆಯು ಪೋರಬಂದರದಲ್ಲಿದ್ದರು. ಅಲ್ಲಿ ಪ್ರತಿನಿತ್ಯವೂ ಅವರು ರಾಮಾಯಣವನ್ನು ಕೇಳುತ್ತಿದ್ದರು. ಅದನ್ನು ಓದುತ್ತಿದ್ದವರು ರಾಮದೇವರಲ್ಲಿ ಬಹಳ ಭಕ್ತಿಯುಳ್ಳ ಬಿಲೇಶ್ವರದ ಲಾಧಾಮಹಾರಾಜರೆನ್ನುವರು. ಇವರ ಸಂಬಂಧವಾಗಿ ಜನರು ಇವರು ತಮ್ಮ ಕುಷ್ಠರೋಗವನ್ನು ಯಾವ ಔಷಧದ ಸಹಾಯವೂ ಇಲ್ಲದೆ ಬಿಲೇಶ್ವರದ ಮಹಾದೇವಸ್ವಾಮಿಗೆ ಪೂಜೆಮಾಡಿದ ಬಿಲ್ವಪತ್ರೆಗ

ಳನ್ನು ಗಾಯವಾಗಿರುವ ಸ್ಥಳಗಳಿಗೆ ಪ್ರಯೋಗಿಸುವುದರಿಂದಲೂ ರಾಮ ನಾಮದ ಉಚ್ಚಾರಣೆಯಿಂದಲೂ ವಾಸಿಮಾಡಿಕೊಂಡರೆಂದು ಹೇಳುತ್ತಿದ್ದರು. ಇದು ನಿಜವಿದ್ದಿರಬಹುದು, ಇಲ್ಲದಿರಬಹುದು. ನಾವೇನೋ ನಿಜವೆಂದು ನಂಬಿದೆವು. ಅಂತೂ ವಾಸ್ತವಿಕವಾಗಿ ಇವರು ರಾಮಾಯಣವನ್ನು ಓದುವುದಕ್ಕೆ ಪ್ರಾರಂಭಮಾಡಿದಾಗ ಇವರ ಶರೀರದಲ್ಲಿ ಕುಷ್ಠರೋಗದ ಸುಳಿವೇ ಇರಲಿಲ್ಲ. ಇವರಿಗೆ ಮಧುರವಾದ ಧ್ವನಿಯಿದ್ದಿತು. ದ್ವಿಪದಿಗಳನ್ನೂ ಚೌಪದಿಗಳನ್ನೂ ಹಾಡಿ ಅವುಗಳಿಗೆ ಅರ್ಥವನ್ನು ಹೇಳುತ್ತಿದ್ದರು. ತಾವೂ ಅದರ ರಸದಲ್ಲಿ ಲೀನರಾಗಿ ಕೇಳುವವರೂ ಮೈಮರೆಯುವಂತೆ ಮಾಡುತ್ತಿದ್ದರು. ಆ ಕಾಲದಲ್ಲಿ ನನಗೆ ಹದಿಮೂರುವರ್ಷಗಳಿರಬೇಕು. ಆದರೂ ಅವರ ಓದಿನಿಂದ ನಾನು ಬಹಳ ಆನಂದಪಡುತ್ತಿದ್ದೆನೆಂದು ನನಗೆ ನೆನಪಿದೆ. ನನಗೆ ಈಗ ರಾಮಾಯಣದಲ್ಲಿರುವ ಗಾಢಭಕ್ತಿಗೆ ಈ ರಾಮಾಯಣಶ್ರವಣವೇ ಪಾಯವನ್ನು ಹಾಕಿದುದು. ಇಂದು ತುಲಸೀದಾಸರ ರಾಮಾಯಣವನ್ನು ಭಕ್ತಿಸಾಹಿತ್ಯದಲ್ಲಿ ಸರ್ವೋತ್ತಮವಾದುದೆಂದು ಎಣಿಸುತ್ತೇನೆ.

ಇದಾದ ಕೆಲವು ತಿಂಗಳಿಗೆ ನಾವು ರಾಜಕೋಟೆಗೆ ಬಂದೆವು. ಅಲ್ಲಿ ಈ ರೀತಿಯಾಗಿ ರಾಮಾಯಣಶ್ರವಣವು ನಡೆಯುತ್ತಿರಲಿಲ್ಲ. ಆದರೆ ಪ್ರತಿ ಏಕಾದಶಿಯೂ ಭಾಗವತವು ಓದಲ್ಪಡುತ್ತಿದ್ದಿತು. ಆಗಾಗ ಕೇಳುವುದಕ್ಕೆ ಹೋಗುತ್ತಿದ್ದೆನು. ಆದರೆ ಪಠಿಸುವಾತನಿಗೆ ನಮ್ಮಲ್ಲಿ ಆನಂದವನ್ನುಂಟುಮಾಡುವ ಶಕ್ತಿಯಿರಲಿಲ್ಲ. ಇಂದಾದರೋ ಭಾಗವತವು ಮನುಷ್ಯನ ಹೃದಯದಲ್ಲಿ ಭಕ್ತಿರಸವನ್ನು ಹುಟ್ಟಿಸಬಲ್ಲ ಪುಸ್ತಕವೆಂದು ನನಗೆ ಗೊತ್ತು. ಇದನ್ನು ಗುಜರಾತಿಯಲ್ಲಿ ಅತ್ಯುತ್ಸಾಹದಿಂದ ಓದಿದ್ದೇನೆ. ಮೂಲಭಾಗವತದ ಕೆಲವು ಭಾಗಗಳನ್ನು ನಾನು ಇಪ್ಪತ್ತೊಂದು ದಿವಸ ಉಪವಾಸಮಾಡಿದ ಸಮಯದಲ್ಲಿ ಭಾರತಭೂಷಣ ಪಂಡಿತ ಮದನಮೋಹನ ಮಾಲವೀಯರ ಶುಭಮುಖದಿಂದ ಕೇಳಿದೆನು. ಆಗ "ನನ್ನ ಚಿಕ್ಕಂದಿನಲ್ಲಿ ಇಂತಹರಾರ ಬಾಯಿಂದಲಾದರೂ ಭಾಗವತವನ್ನು ಕೇಳಿದ್ದರೆ ನನಗೆ ಬಾಲ್ಯದಲ್ಲಿಯೇ ಅದರಲ್ಲಿ ಆಸಕ್ತಿ ಹುಟ್ಟುತ್ತಿದ್ದಿತು." ಎನಿಸಿತು. ಇಂತಹ ಸಣ್ಣ ವಯಸ್ಸಿನಲ್ಲಿ ಆದ ಸಂಸ್ಕಾರದ ಬೇರು ಮನು

ಷ್ಯನ ಸ್ವಭಾವದಲ್ಲಿ ಬಹುದೂರ ಹರಡಿಕೊಳ್ಳುತ್ತದೆ. ಈ ಕಾರಣದಿಂದ ಆ ಸಮಯದಲ್ಲಿ ಇಂತಹ ಒಳ್ಳೆಯ ಪುಸ್ತಕಗಳನ್ನು ಹೆಚ್ಚಾಗಿ ಓದಿ ಕೇಳುವ ಅದೃಷ್ಟವು ನನಗಿರಲಿಲ್ಲವೆನ್ನುವುದು ನನಗೆ ಶಾಶ್ವತವಾದ ಪಶ್ಚಾತ್ತಾಪಕ್ಕೆ ಕಾರಣವಾಗಿದೆ.

ಆದರೆ ನಾನು ರಾಜಕೋಟೆಯಲ್ಲಿ ಎಲ್ಲಾ ಮತಗಳನ್ನೂ ಹಿಂದೂ ಧರ್ಮದ ಪ್ರತಿಯೊಂದು ಸಂಪ್ರದಾಯವನ್ನೂ ಸಹನೆಯಿಂದ ಕಾಣುವುದನ್ನು ತಿಳಿದುಕೊಂಡೆನು. ಏಕೆಂದರೆ ನಮ್ಮ ತಂದೆತಾಯಿಗಳು ವಿಷ್ಣುವಿನ ದೇವಸ್ಥಾನಕ್ಕಲ್ಲದೆ ಈಶ್ವರ ಮತ್ತು ರಾಮದೇವರುಗಳ ದೇವಸ್ಥಾನಕ್ಕೂ ಹೋಗುತ್ತಿದ್ದರು. ಹಾಗೆ ಹೋಗುವಾಗ ನಮ್ಮನ್ನೂ ಜೊತೆಗೆ ಕರೆದುಕೊಂಡು ಹೋಗುತ್ತಿದ್ದುದಲ್ಲದೆ ಅನೇಕ ಸಲ ನಮ್ಮನ್ನು ದೇವಸ್ಥಾನಕ್ಕೆ ಕಳುಹಿಸುತ್ತಲೂ ಇದ್ದರು. ಜೈನ ಸನ್ಯಾಸಿಗಳು ನಮ್ಮ ತಂದೆಯನ್ನು ನೋಡುವುದಕ್ಕೆ ಸದಾ ಬರುತ್ತಿದ್ದರು. ಅಷ್ಟೇ ಅಲ್ಲದೆ ಜೈನರಲ್ಲದ ನಮ್ಮ ಮನೆಯಲ್ಲಿ ಭಿಕ್ಷವನ್ನೂ ಸ್ವೀಕರಿಸುತ್ತಿದ್ದರು. ಇವರು ನಮ್ಮ ತಂದೆಯೊಡನೆ ಧರ್ಮಸಂಬಂಧವಾದ ವಿಷಯಗಳ ವಿಚಾರವಾಗಿಯೂ ವ್ಯಾವಹಾರಿಕ ವಿಷಯಗಳ ವಿಚಾರವಾಗಿಯೂ ಮಾತನಾಡುತ್ತಿದ್ದರು.

ಇದೇರೀತಿಯಾಗಿ ನಮ್ಮ ತಂದೆಗೆ ಪಾರಸೀ ಮತ್ತು ಮುಸಲ್ಮಾನ ಮಿತ್ರರಿದ್ದರು. ಅವರೂ ತಮ್ಮ ತಮ್ಮ ಧರ್ಮದ ವಿಚಾರವಾಗಿ ನಮ್ಮ ತಂದೆಯೊಡನೆ ಮಾತನಾಡುತ್ತಿದ್ದರು. ಈ ಮಾತುಗಳನ್ನು ನಮ್ಮ ತಂದೆಯು ಯಾವಾಗಲೂ ಆದರದಿಂದಲೂ ಕೆಲವು ಸಂದರ್ಭದಲ್ಲಿ ಆಸಕ್ತಿಯಿಂದಲೂ ಕೇಳುತ್ತಿದ್ದರು. ನಾನು ನಮ್ಮ ತಂದೆಯವರ ಸೇವೆ ಮಾಡುತ್ತಾ ಇರುತ್ತಿದ್ದುದರಿಂದ ಆಗಾಗ ಈ ಮಾತುಗಳನ್ನು ಕೇಳುವ ಸಂಭವವು ಒದಗುತ್ತಿದ್ದಿತು. ಈ ಅನೇಕ ವಿಷಯಗಳ ಜೋಡಣೆಯಿಂದ ಎಲ್ಲಾ ಧರ್ಮಗಳನ್ನೂ ಒಂದೇ ಸಮನಾಗಿ ಕಾಣಬೇಕೆನ್ನುವುದು ನನ್ನ ಮನಸ್ಸಿಗೆ ಹತ್ತಿತು.

ಈಸಾಯಿ ಧರ್ಮದ ವಿಚಾರ ಮಾತ್ರ ಬೇರೆಯಾಗಿದ್ದಿತು. ಅದರಲ್ಲಿ ನನಗೆ ಒಂದು ತರಹ ಅಪ್ರೀತಿಯು ಹುಟ್ಟಿತು. ಇದಕ್ಕೆ ಒಂದು

ಕಾರಣವಿದ್ದಿತು. ಆ ಕಾಲದಲ್ಲಿ ಈಸಾಯಿ ಮತಪ್ರಚಾರಕರು (ಪಾದ್ರಿಗಳು) ನಮ್ಮ ಹೈಸ್ಕೂಲಿನ ಹತ್ತಿರ ಒಂದು ಮೂಲೆಯಲ್ಲಿ ನಿಂತು ಹಿಂದೂಗಳನ್ನೂ ಅವರ ದೇವರುಗಳನ್ನೂ ಬಯ್ಯುತ್ತಿದ್ದರು. ಇದು ನನಗೆ ತಡೆಯುವದಕ್ಕಾಗುತ್ತಿರಲಿಲ್ಲ. ನಾನು ಅದನ್ನು ಕೇಳುವುದಕ್ಕೆ ಎಲ್ಲೋ ಒಂದು ಸಲ ಮಾತ್ರ ಹೋಗಿದ್ದಿರಬೇಕು. ಆದರೆ ಆ ಅನುಭವವಾದ ಮೇಲೆ ಪುನಃ ಹೋಗಿ ಕೇಳಲು ಎಳ್ಳಷ್ಟೂ ಮನಸ್ಸುಂಟಾಗಲಿಲ್ಲ. ಅದೇ ಸಮಯದಲ್ಲಿ ಒಬ್ಬ ಪ್ರಸಿದ್ಧನಾದ ಹಿಂದುವು ಈಸಾಯಿ ಮತಕ್ಕೆ ಸೇರಿದನೆಂದೂ ಕೇಳಿದೆನು. ಆತನ ಜ್ಞಾನಸ್ನಾನವಾದಾಗ ಆತನು ಗೋಮಾಂಸವನ್ನೂ ಮದ್ಯವನ್ನೂ ಸೇವಿಸಬೇಕಾಯಿತೆಂದೂ ತನ್ನ ಉಡುಪನ್ನು ಬದಲಾಯಿಸಬೇಕಾಯಿತೆಂದೂ ಆಮೇಲೆ ಪರಂಗಿಯವರಂತೆ ಬಟ್ಟೆಯನ್ನೂ ಟೋಪಿಯನ್ನೂ ಹಾಕಿಕೊಂಡು ತಿರುಗಾಡುವುದಕ್ಕೆ ಪ್ರಾರಂಭಿಸಿದನೆಂದೂ ಊರಿನ ಮಾತಾಗಿದ್ದಿತು. ಇದನ್ನೆಲ್ಲಾ ಕೇಳಿ ನನಗೆ ಬಹಳವ್ಯಥೆಯಾಯಿತು. "ಯಾವ ಧರ್ಮದ ಸಲುವಾಗಿ ಗೋಮಾಂಸವನ್ನು ತಿನ್ನುವುದು, ಮದ್ಯವನ್ನು ಸೇವಿಸುವುದು, ಉಡುಪನ್ನು ಬದಲಾಯಿಸುವುದು, ಇದನ್ನೆಲ್ಲಾ ಮಾಡಬೇಕೋ ಅದನ್ನು 'ಧರ್ಮ' ವೆಂದು ಹೇಗೆ ಕರೆಯುವುದು?" ಎನ್ನುವ ಪ್ರಶ್ನೆಯು ನನ್ನ ಮನಸ್ಸನ್ನು ಬಾಧಿಸಿತು. ಇಷ್ಟೇ ಅಲ್ಲದೆ ಹೊಸದಾಗಿ ಈಸಾಯಿಯಾದ ಮನುಷ್ಯನು ಆಗಲೇ ತನ್ನ ಪೂರ್ವಿಕರ ಧರ್ಮವನ್ನೂ ರೀತಿನೀತಿಗಳನ್ನೂ ತನ್ನ ದೇಶವನ್ನೂ ಅಲ್ಲಗಳೆಯುವದಕ್ಕೆ ತೊಡಗಿದ್ದಾನೆಂದು ಕೂಡ ಕೇಳಿದೆನು. ಈ ವಿಷಯಗಳೆಲ್ಲಾ ಒಟ್ಟು ಸೇರಿ ನನ್ನಲ್ಲಿ ಈಸಾಯಿ ಮತದ ದ್ವೇಷವನ್ನುಂಟು ಮಾಡಿದುವು.

ಇತರ ಎಲ್ಲಾ ಮತಗಳನ್ನೂ ಸಮಭಾವದಿಂದ ಕಾಣುವುದನ್ನರಿತಿದ್ದುದರಿಂದ ನನಗೆ ಈಶ್ವರನಲ್ಲಿ ದೃಢವಾದ ನಂಬಿಕೆಯಿದ್ದಿತೆಂದು ತಿಳಿಯಕೂಡದು. ಈ ಸಮಯದಲ್ಲಿ ನಮ್ಮ ತಂದೆಯ ಪುಸ್ತಕಸಂಗ್ರಹದಲ್ಲಿದ್ದ ಮನುಸ್ಮೃತಿಯ ಅನುವಾದವು ನನ್ನ ಕೈಸೇರಿತು. ಅದರಲ್ಲಿದ್ದ ಜಗತ್ತಿನ ಉತ್ಪತ್ತಿಯೇ ಮೊದಲಾದ ವಿಷಯಗಳನ್ನು ಓದಿದೆನು. ಅವುಗಳಲ್ಲಿ

ನಂಬಿಕೆಯುಂಟಾಗಲಿಲ್ಲವಷ್ಟೇ ಅಲ್ಲದೆ ನನ್ನಲ್ಲಿ ನಾಸ್ತಿಕತೆಯು ಸ್ವಲ್ಪ ಹುಟ್ಟಿತು.

ನಮ್ಮ ಇನ್ನೊಬ್ಬ ಚಿಕ್ಕಪ್ಪನ ಮಗನ (ಆತನು ಇನ್ನೂ ಜೀವಂತನಾಗಿದ್ದಾನೆ) ಬುದ್ಧಿಯು ಬಹಳ ಚುರುಕೆಂದು ನಾನು ತಿಳಿದಿದ್ದೆನು. ಆತನಿಗೆ ನನ್ನ ಸಂಶಯವನ್ನು ತಿಳಿಸಿದೆನು. ಆದರೆ ಆತನಿಗೆ ಅವುಗಳನ್ನು ಹೋಗಲಾಡಿಸಲು ಸಾಧ್ಯವಾಗಲಿಲ್ಲ. ಆತನು ನನಗೆ "ನೀನು ದೊಡ್ಡವನಾದ ಮೇಲೆ ಈ ಸಂಶಯಗಳನ್ನು ನೀನೇ ಪರಿಹರಿಸಿಕೊಳ್ಳಬಹುದು. ಹುಡಗರು ಇಂತಹ ಪ್ರಶ್ನೆಗಳನ್ನು ಕೇಳಬಾರದು." ಎಂದು ಹೇಳಿ ಕಳುಹಿಸಿದನು. ಇದರಿಂದ ನಾನು ಸುಮ್ಮನಾದರೂ ನನ್ನ ಮನಸ್ಸಿಗೆ ಸಮಾಧಾನವಾಗಲಿಲ್ಲ. ಮನುಸ್ಮೃತಿಯ ಖಾದ್ಯಾಖಾದ್ಯ ವಿಚಾರವೇ ಮುಂತಾದ ಅಧ್ಯಾಯಗಳಲ್ಲಿನ ವಿಷಯಗಳು ಪ್ರಚಾರದಲ್ಲಿರುವ ಪದ್ಧತಿಗಳಿಗೆ ವಿರೋಧವಾಗಿರುವಂತೆ ತೋರಿದುವು. ಈ ಶಂಕೆಗೂ ಮೊದಲಿನ ರೀತಿಯಾದ ಉತ್ತರವೇ ದೊರಕಿತು. "ಇನ್ನು ಕೆಲವು ದಿವಸಗಳಲ್ಲಿ ನನ್ನ ಬುದ್ಧಿಯು ವಿಕಾಸವಾಗುವುದು. ಆಗ ಹೆಚ್ಚಾಗಿ ಓದಿ ಈ ವಿಷಯಗಳನ್ನೆಲ್ಲಾ ಚೆನ್ನಾಗಿ ಗ್ರಹಿಸಿಕೊಳ್ಳುವೆನು." ಎಂದು ನನ್ನಷ್ಟಕ್ಕೆ ನಾನೇ ಸಮಾಧಾನಮಾಡಿಕೊಂಡೆನು.

ಮನುಸ್ಮೃತಿಯನ್ನು ಓದಿದುದರಿಂದ ನಾನು ಅಹಿಂಸಾತತ್ವವನ್ನೇನೂ ಕಲಿಯಲಿಲ್ಲ. ನಾನು ಮಾಂಸಾಹಾರಮಾಡಿದ ಕತೆಯನ್ನು ಹೇಳಿದ್ದೇನೆ. ಮನುಸ್ಮೃತಿಯು ಇದನ್ನು ಸಮರ್ಥನಮಾಡುವಂತೆ ಕಂಡಿತು. ಹಾವು ಮುಂತಾದುವುಗಳನ್ನೂ ತಗಣೆಯನ್ನೂ ಕೊಲ್ಲುವುದು ನೀತಿಯೆನ್ನುವ ಅಭಿಪ್ರಾಯವು ನನ್ನಲ್ಲಿ ಹುಟ್ಟಿತು. ಆ ವಯಸ್ಸಿನಲ್ಲಿ ಅದು ಧರ್ಮವೆಂದು ತಿಳಿದುಕೊಂಡು ತಗಣೆ ಮುಂತಾದವುಗಳನ್ನು ಕೊಂದುದು ನನಗೆ ನೆನಪಿದೆ.

ಆದರೆ ಒಂದು ವಿಷಯ ಮಾತ್ರ ನನ್ನ ಮನಸ್ಸಿನಲ್ಲಿ ಬೇರೂರಿತು—ನೀತಿಯೇ ಜಗತ್ತಿನ ಆಧಾರ, ಸತ್ಯವೇ ನೀತಿಯ ತತ್ವ. ಸತ್ಯೋಪಾಸನೆಯೇ ನನ್ನ ಮುಖ್ಯೋದ್ದೇಶವಾಯಿತು. ದಿನದಿನವೂ ನನ್ನ ದೃಷ್ಟಿಯಲ್ಲಿ

ಸತ್ಯದ ಮಹಿಮೆಯು ಹೆಚ್ಚಾಗುತ್ತಾ ಬಂದಿತು. ನನ್ನ ದೃಷ್ಟಿಯಲ್ಲಿ ಆ ತತ್ತ್ವಾರ್ಥದ ಮೇರೆಯು ಕೂಡ ವಿಸ್ತಾರವಾಗುತ್ತಾ ಬಂದಿದೆ.

ಹಾಗೆಯೇ ಗುಜರಾತಿಯ ನೀತಿಪದ್ಯವೊಂದು ನನ್ನ ಹೃದಯದಲ್ಲಿ ನೆಲೆಸಿ ನನ್ನ ಮನಸ್ಸಿನಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸಿತು. ಇದರಿಂದ ಅಪಕಾರಕ್ಕೆ ಪ್ರತಿಯಾಗಿ ಉಪಕಾರವನ್ನೆಸಗುವುದೇ ಜೀವನಯಾತ್ರೆಯನ್ನು ನಡೆಸುವುದಕ್ಕೆ ಸೂತ್ರವಾಗಿ ಪರಿಣಮಿಸಿತು. ಈ ತತ್ತ್ವದಲ್ಲಿ ನನ್ನ ಆಸಕ್ತಿಯು ಎಷ್ಟರಮಟ್ಟಿಗೆ ಬಲಗೊಂಡಿತೆಂದರೆ ನಾನು ಅದನ್ನು ಅನೇಕ ವಿಧವಾಗಿ ಕಾರ್ಯಕ್ಷೇತ್ರದಲ್ಲಿ ಪರೀಕ್ಷಿಸತೊಡಗಿದೆನು. ಆ (ನನಗೆ) ಅದ್ಭುತವಾದ ಪದ್ಯವು ಇದೇ :

ಹರಸಿದಗೆ ಒಳಿತಳಸಿ ಭಕುತಿಯಿಂದಲಿ ಬಾಗಿ
ಹರಿಸಿದಗೆ ದಾಹವನು ಅಮೃತಾನ್ನವುಣಿಸಿ ।
ಅರೆಕಾಸನಿತ್ತವಗೆ ವರಹಂಗಳನೆ ನೀಡಿ
ಹರಣವಂ ಕಾಯ್ದವಗೆ ಹರಣವನೆ ನೀಗಿ ॥

ಕಿರಿನೆರವ ನಿತ್ತರ್ಗೆ ಹಿರಿದಾಗಿ ಮಾರ್ಗುಡುವ
ಪರಿಯೆ ಅರಿದರ ತೆರನದೆಂದು ಅರಿಯೈ ।
ಹಿರಿಬಗೆಯ ಸಂತಜನ ನರರೊಳಂತರವಿಡದೆ
ಹರುಷದಿಂ ಕೇಡಿಗಳಿಗೊಳಿತನೆಸಗುವರು ॥



## ೧೧
# ವಿಲಾಯತಿಗೆ ಹೊರಡಲು ಸನ್ನಾಹ

೧೮೮೭ನೆಯ ಇಸವಿಯಲ್ಲಿ ನಾನು ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದೆನು. ಈ ಪರೀಕ್ಷೆಯು ಆಗ ಅಹಮದಾಬಾದ್ ಮತ್ತು ಮುಂಬಯಿ ಈ ಎರಡು ಸ್ಥಳಗಳಲ್ಲಿ ನಡೆಯುತ್ತಿದ್ದಿತು. ಆ ದೇಶದವರು ಸಾಮಾನ್ಯವಾಗಿ ಬಡವರಾಗಿದ್ದುದರಿಂದ ಸಹಜವಾಗಿ ಹುಡುಗರು ಹತ್ತಿರವಿರುವ ಮತ್ತು ಕಡಮೆ ಖರ್ಚು ತಗಲುವ ಅಹಮದಬಾದಿಗೇ ಹೋಗುತ್ತಿದ್ದರು. ನಮ್ಮ ಮನೆಯವರೂ ಹೆಚ್ಚು ಅನುಕೂಲವಿಲ್ಲದವರಾದುದರಿಂದ ನಾನೂ ಇದೇ ರೀತಿ ಮಾಡಿದೆನು. ಇದೇ ನಾನು ಮೊದಲನೆಯ ಸಲ, ಅದೂ ಯಾರ ಜೊತೆಯೂ ಇಲ್ಲದೆ, ರಾಜಕೋಟೆಯಿಂದ ಅಹಮದಾಬಾದಿಗೆ ಪ್ರಯಾಣಮಾಡಿದುದು.

ಈ ಪರೀಕ್ಷೆಯಾದಮೇಲೆ ನಾನು ಕಾಲೇಜಿಗೆ ಹೋಗಿ ಓದಬೇಕೆಂದು ನಮ್ಮ ಹಿರಿಯರಿಗೆ ಇಚ್ಛೆಯಿದ್ದಿತು. ಮುಂಬಯಿಯಲ್ಲಿಯೂ ಭಾವನಗರದಲ್ಲಿಯೂ ಕಾಲೇಜುಗಳಿದ್ದುವು. ಭಾವನಗರದಲ್ಲಿ ಖರ್ಚು ಕಮ್ಮಿ ತಗಲುತ್ತಿದ್ದುದರಿಂದ ಅಲ್ಲಿಗೆ ಹೋಗಿ ಶ್ಯಾಮಲದಾಸ್ ಕಾಲೇಜಿಗೆ ಹೋಗಿ ಸೇರಬೇಕೆಂದು ನಿಶ್ಚಯಮಾಡಿ ಅಲ್ಲಿಗೆ ಹೋದೆನು. ಆದರೆ ಅಲ್ಲಿ ನನಗೆ ಏನೂ ತಿಳಿಯುತ್ತಿರಲಿಲ್ಲ. ಎಲ್ಲ ಪಾಠಗಳೂ ಬಹು ಕಷ್ಟವಾಗಿ ತೋರುತ್ತಿದ್ದುವು. ಅಧ್ಯಾಪಕರ ಭಾಷಣಗಳಲ್ಲಿ ನನಗೆ ಉತ್ಸಾಹವುಂಟಾಗುವುದು ಹಾಗಿರಲಿ, ಅವು ನನಗೆ ಅರ್ಥವಾಗುತ್ತಲೇ ಇರಲಿಲ್ಲ. ಇದರಲ್ಲಿ ಅವರ ದೋಷವೇನೂ ಇರಲಿಲ್ಲ. ಆ ಕಾಲದಲ್ಲಿ ಈ ಕಾಲೇಜಿನ ಅಧ್ಯಾಪಕರು ಮೊದಲನೆಯ ದರ್ಜೆಗೆ ಸೇರಿದವರೆಂದು ಎಣಿಸಲ್ಪಡುತ್ತಿದ್ದರು. ನನ್ನ ಬುದ್ಧಿಯು ಇನ್ನೂ ಸರಿಯಾಗಿ ಕುದುರದೇ

ಇದ್ದುದೇ ಇದಕ್ಕೆ ಕಾರಣ. ವರ್ಷದ ಮೊದಲನೆಯ ಪರೀಕ್ಷೆಯಾದ ಮೇಲೆ ನಾನು ಮನೆಗೆ ಹಿಂತಿರುಗಿ ಬಂದುಬಿಟ್ಟೆನು.

ವ್ಯವಹಾರಕುಶಲರೂ ವಿದ್ವಾಂಸರೂ ಆದ ಮಾವಜಿ ದವೆ ಎಂಬ ಬ್ರಾಹ್ಮಣರೊಬ್ಬರು ನಮ್ಮ ಕುಟುಂಬಕ್ಕೆ ಬಹುಕಾಲದಿಂದ ಮಿತ್ರರಾಗಿಯೂ ಸಲಹೆ ಕೊಡುವವರಾಗಿಯೂ ಇದ್ದರು. ಅವರು ನಮ್ಮ ತಂದೆಯು ಗತಿಸಿದಮೇಲೂ ನಮ್ಮ ಕುಟುಂಬದೊಂದಿಗೆ ಅದೇ ರೀತಿಯಾದ ಸಂಬಂಧವನಿಟ್ಟುಕೊಂಡಿದ್ದರು. ನನಗೆ ರಜ ಬಂದಿದ್ದಾಗ ಅವರು ಒಮ್ಮೆ ನಮ್ಮ ಮನೆಗೆ ಬಂದರು. ನಮ್ಮ ತಾಯಿ ಮತ್ತು ದೊಡ್ಡಣ್ಣ ಇವರೊಡನೆ ಮಾತುಕತೆ ನಡೆಯುತ್ತಿದ್ದಾಗ ಅವರು ನನ್ನ ವ್ಯಾಸಂಗದ ವಿಚಾರವಾಗಿ ಪ್ರಶ್ನೆಮಾಡಿದರು. ನಾನು ಶ್ಯಾಮಲದಾಸ್ ಕಾಲೇಜಿನಲ್ಲಿ ಓದುತ್ತಿದ್ದೆನೆಂದು ಕೇಳಿ ಅವರು

''ಈಗ ಕಾಲವು ಬದಲಾಯಿಸಿದೆ. ಸರಿಯಾದ ವಿದ್ಯಾಭ್ಯಾಸವಿಲ್ಲದೆ ನಿಮ್ಮಲ್ಲಿ ಯಾರೂ ಕಬಾ ಗಾಂಧಿಯ ಗದ್ದಿಗೆಯನ್ನು ಏರಲಾಗುವುದಿಲ್ಲ. ಈ ಹುಡುಗನು ಇನ್ನೂ ಓದುತ್ತಿರುವುದರಿಂದ ನೀವು ನಿಮ್ಮ ಮನೆತನಕ್ಕೇ ಗದ್ದಿಗೆಯನ್ನುಳಿಸುವ ದೃಷ್ಟಿಯಿಂದ ಇವನ ಕಡೆಗೇ ಲಕ್ಷ್ಯ ಕೊಡಬೇಕು. ಇವನಿಗೆ ಬಿ. ಎ. ಆಗಬೇಕಾದರೆ ಇನ್ನೂ ೪—೫ ವರ್ಷ ಹಿಡಿಯುತ್ತದೆ. ಅಷ್ಟುಕಾಲ ಓದಿದರೂ ೫೦—೬೦ ರೂಪಾಯಿನ ಕೆಲಸ ದೊರೆಯುವುದೇ ಹೊರತು ದಿವಾನ ಪದವಿಯೇನೂ ಸಿಕ್ಕುವುದಿಲ್ಲ. ಅಥವಾ ಅವನು ನನ್ನ ಮಗನಹಾಗೆ ವಕೀಲಿ ಪರೀಕ್ಷೆಗೆ ಹೋಗುವುದಾದರೆ ಅದು ಇನ್ನೂ ಹೆಚ್ಚುಕಾಲ ಹಿಡಿಯುತ್ತದೆ. ಅಷ್ಟು ಹೊತ್ತಿಗೆ ಪ್ರಧಾನಪದವಿಗೆ ಸಿದ್ಧರಾಗಿ ಅನೇಕಜನ ವಕೀಲ ಪರೀಕ್ಷೆಯಾದವರಿರುತ್ತಾರೆ ಇದಾವುದಕ್ಕಿಂತಲೂ ನೀವು ಅವನನ್ನು ವಿಲಾಯತಿಗೆ ಕಳುಹಿಸುವುದೇ ಮೇಲೆಂದು ನನಗೆ ತೋರುತ್ತದೆ. ಕೇವಲ ರಾಮನು (ಇದು ಮಾವಜಿ ದವೆಯವರ ಮಗನ ಹೆಸರು) ಬ್ಯಾರಿಸ್ಟರಾಗುವುದು ಬಹಳ ಸುಲಭವೆಂದು ಹೇಳುತ್ತಾನೆ. ಮೂರು ವರ್ಷದಲ್ಲಿಯೇ ಓದನ್ನುಮುಗಿಸಿಕೊಂಡು ವಾಪಸು ಬರಬಹುದು. ವೆಚ್ಚ ಸಹ ನಾಲ್ಕೈದುಸಾವಿರ ರೂಪಾಯಿಗೆ ಹೆಚ್ಚಾಗಿ ಆಗುವುದಿಲ್ಲ. ಹೊಸದಾಗಿ ಬಂದಿರುವ ಬ್ಯಾರಿಸ್ಟರನ್ನು ನೋಡಿ. ಆತನ್

ಎಷ್ಟು ಶೀಘ್ರವಾಗಿಯೇ ಮುಂದಿದ್ದಾನೆ! ಕೇಳುವದೊಂದೇ ತಡ, ಅವನಿಗೆ ದಿವಾನ ಗಿರಿಯು ಸಿಕ್ಕುತ್ತದೆ. ನನಗೆ ತೋರುವುದೇನೆಂದರೆ: ನೀವು ಈ ವರ್ಷವೇ ಮೋಹನದಾಸನನ್ನು ಇಂಗ್ಲೆಂಡಿಗೆ ಕಳುಹಿಸಬೇಕು. ನಮ್ಮ ಕೇವಲ ರಾಮನಿಗೆ ಸೀಮೆಯಲ್ಲಿ ಬಹುಮಂದಿ ಗೆಳೆಯರಿದ್ದಾರೆ. ಅವನು ಅವರಿಗೆ ಪರಿಚಯದ ಕಾಗದವನ್ನು ಬರೆದುಕೊಡುತ್ತಾನೆ. ಮೋಹನದಾಸನಿಗೆ ಅಲ್ಲಿ ಎಲ್ಲವೂ ಸುಸೂತ್ರವಾಗುತ್ತದೆ.'' ಎಂದು ಹೇಳಿದರು.

ಜೋಶಿಜಿಯವರು (ಮಾವಜಿ ದವೆಯವರನ್ನು ನಾವು ಹಾಗೆ ಕರೆಯುತ್ತಿದ್ದೆವು) ನನ್ನ ಕಡೆ ತಿರುಗಿ

''ನಿನಗೆ ಇಲ್ಲೇ ಓದುವುದಕ್ಕಿಂತ ಸೀಮೆಗೆ ಹೋಗುವುದು ಇಷ್ಟವಲ್ಲವೆ?'' ಎಂದು ಕೇಳಿದರು. ಅವರು ತಿರುಗಿ ಮಾತನಾಡಿದ ರೀತಿಯನ್ನು ನೋಡಿದರೆ ಅವರಿಗೆ ನನ್ನ ಉತ್ತರದ ವಿಷಯದಲ್ಲಿ ಸಂಶಯದ ಸುಳಿವೇ ಇರಲಿಲ್ಲವೆನ್ನುವುದು ಸ್ಪಷ್ಟವಾಗಿದ್ದಿತು.

ಅವರು ನನಗೆ ಇದಕ್ಕಿಂತ ಅಧಿಕವಾಗಿ ಮನವೊಪ್ಪುವ ಸಲಹೆಯನ್ನು ಕೊಡುವುದು ಶಕ್ಯವಿರಲಿಲ್ಲ. ಕಾಲೇಜಿನ ಕಠಿಣ ಶಿಕ್ಷಣಕ್ಕೆ ನಾನು ಹಿಂದೇಟು ಹಾಕುತ್ತಿದ್ದೆನು. ಆದುದರಿಂದ ನಾನು ಅವರ ಸೂಚನೆಗೆ ಒಡನೆಯೇ ಒಡಂಬಟ್ಟು ''ಎಷ್ಟು ತ್ವರಿತವಾಗಿ ನನ್ನನ್ನು ಕಳುಹಿಸಿದರೆ ಅಷ್ಟು ಒಳ್ಳೆಯದು. ಪರೀಕ್ಷೆಗಳಲ್ಲಿ ತಡವಿಲ್ಲದೆ ತೇರ್ಗಡೆಯಾಗುವುದೇನೂ ಸುಲಭವಾದ ಮಾತಲ್ಲ. ನನ್ನನ್ನು ಡಾಕ್ಟರ್ (ವೈದ್ಯ) ಪರೀಕ್ಷೆಗೆ ಓದುವುದಕ್ಕೆ ಕಳುಹಿಸಿಕೊಡಬಾರದೇಕೆ?'' ಎಂದು ಕೇಳಿದೆನು.

ನಮ್ಮಣ್ಣನು ನನಗೆ ಅಡ್ಡವಾಗಿ ಬಂದು ''ನಮ್ಮ ತಂದೆಗೆ ಅದೆಂದಿಗೂ ಇಷ್ಟವಿರಲಿಲ್ಲ. ವೈಷ್ಣವರಾದ ನಾವು ಹೆಣಗಳನ್ನು ಕುಯ್ಯುವ ಗೋಜಿಗೆ ಹೋಗಬಾರದೆಂದು ಅವರು ಹೇಳಿದಾಗ ನಿನ್ನ ವಿಚಾರವೇ ಅವರ ಮನಸ್ಸಿನಲ್ಲಿದ್ದಿತು. ನೀನು ವಕೀಲನಾಗಬೇಕೆಂದೇ ಅವರ ಉದ್ದೇಶವಿದ್ದುದು.'' ಎಂದು ಹೇಳಿದನು.

ಜೋಶಿಜಿಯವರು ''ಗಾಂಧೀಜಿ (ನಮ್ಮ ತಂದೆ) ಯವರಿಗಿದ್ದಂತೆ ವೈದ್ಯವೃತ್ತಿಗೆ ವಿರೋಧವಾಗಿ ಯಾವ ಅಭಿಪ್ರಾಯವೂ ನನಗಿಲ್ಲ. ನಮ್ಮ ಶಾಸ್ತ್ರಗಳು ಇದನ್ನೇನೂ ನಿಷೇಧಿಸುವುದಿಲ್ಲ. ಆದರೆ ಡಾಕ್ಟರ್ ಪರೀಕ್ಷೆ

ಯಲ್ಲಿ ಉತ್ತೀರ್ಣನಾಗುವುದರಿಂದ ನೀನೇನೂ ದಿವಾನನಾಗುವಹಾಗಿಲ್ಲ. ನೀನು ಪ್ರಧಾನಪದವಿಗೋ ಸಾಧ್ಯವಿದ್ದರೆ ಇನ್ನೂ ದೊಡ್ಡ ಸ್ಥಾನಕ್ಕೋ ಏರಬೇಕೆಂದು ನನ್ನ ಇಷ್ಟ. ನಿಮ್ಮ ದೊಡ್ಡ ಸಂಸಾರವನ್ನು ಸಲಹುವುದು ಆಗ ಮಾತ್ರ ಸಾಧ್ಯ. ದಿನದಿನಕ್ಕೂ ಕಾಲವು ಬದಲಾಯಿಸುತ್ತಿದೆ — ಕಠಿಣವಾಗುತ್ತಾ ಇದೆ. ಆದುದರಿಂದ ನೀನು ಬ್ಯಾರಿಸ್ಟರನಾಗುವುದಕ್ಕಿಂತ ವಿವೇಕದ ದಾರಿಯಿಲ್ಲ.'' ಎಂದು ಹೇಳಿ ನಮ್ಮ ತಾಯಿಯ ಕಡೆ ತಿರುಗಿ ''ಇನ್ನು ನಾನು ಹೊರಡಬೇಕು. ನಾನು ಹೇಳಿದುದರ ವಿಚಾರವಾಗಿ ಯೋಚಿಸಿ ನೋಡಿ. ಮುಂದಿನ ಸಲ ಇಲ್ಲಿಗೆ ಬಂದಾಗ ಇವನು ಸೀಮೆಗೆ ಹೋಗುವ ಸನ್ನಾಹ ನಡೆಯುತ್ತಿರುವುದನ್ನು ಕೇಳುವೆನೆಂದು ನನ್ನ ನಿರೀಕ್ಷಣೆ. ನನ್ನಿಂದೇನಾದರೂ ಸಹಾಯವಾಗುವುದಾದರೆ ನನಗೆ ಖಂಡಿತ ತಿಳಿಸಿ.'' ಎಂದು ಹೇಳಿ ಜೋಶಿಜಿಯವರು ಹೊರಟುಹೋದರು.

ನಾನು ಮುಗಿಲಿನಲ್ಲಿ ಉಪ್ಪರಿಗೆಗಳನ್ನು ಕಟ್ಟತೊಡಗಿದೆನು.

ನಮ್ಮಣ್ಣನು ಇದರ ಆಲೋಚನೆಯಲ್ಲೇ ಮುಳುಗಿದನು. ಇದಕ್ಕೆ ಬೇಕಾದ ಹಣವನ್ನು ಒದಗಿಸುವುದು ಹೇಗೆ? ನನ್ನಂತಹ ಚಿಕ್ಕ ವಯಸ್ಸಿನವನನ್ನು ಅಷ್ಟುದೂರ ಜೊತೆಯಿಲ್ಲದೆ ಕಳುಹಿಸುವುದು ಸರಿಯೇ?

ನಮ್ಮ ತಾಯಿಗಂತೂ ಏನೂ ತೋಚಲಿಲ್ಲ. ನನ್ನನ್ನು ಅಗಲುವದಕ್ಕೆ ಆಕೆಗೆ ಇಷ್ಟವಿರಲಿಲ್ಲ. ಆಕೆಯು ''ಈಗ ನಿಮ್ಮ ಚಿಕ್ಕಪ್ಪನವರೇ ನಮ್ಮ ಕುಟುಂಬಕ್ಕೆ ಹಿರಿಯರಾಗಿದ್ದಾರೆ. ಮೊದಲು ಅವರ ಸಲಹೆಯನ್ನು ಕೇಳಬೇಕು. ಅವರು ಒಪ್ಪಿದರೆ ಆಮೇಲೆ ಈ ವಿಚಾರ ಯೋಚನೆ ಮಾಡೋಣ.'' ಎಂದು ಹೇಳಿ ನನ್ನ ಪ್ರಯಾಣವನ್ನು ಸದ್ಯಕ್ಕಾದರೂ ನಿಲ್ಲಿಸುವುದಕ್ಕೆ ಪ್ರಯತ್ನಪಟ್ಟಳು.

ನಮ್ಮಣ್ಣನಿಗೆ ಇನ್ನೊಂದು ವಿಚಾರವು ಹೊಳೆಯಿತು: ''ಪೋರಬಂದರ್ ಸಂಸ್ಥಾನದ ಮೇಲೆ ನಮಗೆ ಒಂದು ವಿಧವಾದ ಹಕ್ಕು ಇದೆ. ಲೆಲಿ ಸಾಹೇಬರು ಅಲ್ಲಿಯ ಅಡ್‌ಮಿನಿಸ್ಟ್ರೇಟರ್ ಆಗಿದ್ದಾರೆ. ನಮ್ಮ ಕುಟುಂಬ ಸಂಬಂಧವಾಗಿ ಅವರಿಗೆ ಒಳ್ಳೆಯ ಅಭಿಪ್ರಾಯವೂ ಇದೆ. ಚಿಕ್ಕಪ್ಪನ

ಮೇಲೆ ಅವರಿಗೆ ಕೃಪೆಯಿದೆ. ಅವರು ನಿನಗೆ ಸೀಮೆಯಲ್ಲಿನ ವ್ಯಾಸಂಗಕ್ಕೆ ಸಂಸ್ಥಾನದ ಕಡೆಯಿಂದ ಏನಾದರೂ ಸಹಾಯಮಾಡಬಹುದು."

ನನಗೆ ಇದೆಲ್ಲಾ ಸರಿಯಾಗಿ ಕಂಡಿತು. ನಾನು ಪೋರಬಂದರಿಗೆ ಹೊರಡಲು ಅನುವಾದೆನು. ಆಗಿನ ಕಾಲದಲ್ಲಿ ರೈಲ್ ದಾರಿ ಇರಲಿಲ್ಲ. ಎತ್ತಿನ ಬಂಡಿಯಲ್ಲಿ ಐದು ದಿನದ ಪಯಣ. ನಾನು ಅಂಜುಬುರಕ ನಾಗಿದ್ದೆನೆಂದು ಹಿಂದೆಯೇ ಹೇಳಿದ್ದೇನೆ. ಆದರೆ ಆ ಸಮಯದಲ್ಲಿ ವಿಲಾಯತಿಗೆ ಹೋಗಬೇಕೆಂಬ ಪ್ರಬಲವಾದ ಇಚ್ಛೆಯ ಮುಂದೆ ನನ್ನ ಹೇಡಿತನವು ಮಾಯವಾಯಿತು. ಧೋರಾಜಿಯವರೆಗೆ ಎತ್ತಿನ ಗಾಡಿ ಯಲ್ಲಿ ಹೋದೆನು. ಒಂದು ದಿನ ಮುಂಚಿತವಾಗಿ ಪೋರಬಂದರನ್ನು ಸೇರುವುದಕ್ಕಾಗಿ ಧೋರಾಜಿಯಿಂದ ಒಂಟೆಯಮೇಲೆ ಪಯಣ ಬೆಳೆಸಿ ದೆನು. ನಾನು ಒಂಟೆಯ ಸವಾರಿಯನ್ನು ಮಾಡಿದುದು ಇದೇ ಮೊದಲು.

ಪೋರಬಂದರಿಗೆ ಹೋಗಿ ಸೇರಿದೆನು. ನಮ್ಮ ಚಿಕ್ಕಪ್ಪನಿಗೆ ಸಾಷ್ಟಾಂಗಪ್ರಣಾಮಮಾಡಿ ಎಲ್ಲಾ ವಿಷಯಗಳನ್ನೂ ತಿಳಿಸಿದೆನು. ಅವರು ಮನಸ್ಸಿನಲ್ಲೇ ವಿಚಾರಮಾಡಿ ಹೀಗೆ ಉತ್ತರ ಕೊಟ್ಟರು :

"ವಿಲಾಯತಿಗೆ ಹೋಗಿ ನಾವು ನಮ್ಮ ಧರ್ಮವನ್ನು ರಕ್ಷಿಸುವುದು ಸಾಧ್ಯವೋ ಅಲ್ಲವೋ ನನಗೆ ಗೊತ್ತಿಲ್ಲ. ಅಂತು ನಾನು ಕೇಳಿರುವುದೆ ನ್ನೆಲ್ಲಾ ಯೋಚಿಸಿದರೆ ಸಂದೇಹವೇ ಉಂಟಾಗುತ್ತದೆ. ನಾನು ದೊಡ್ಡ ದೊಡ್ಡ ಬ್ಯಾರಿಸ್ಟರುಗಳನ್ನು ನೋಡಿದಾಗ ಜೀವನದ ರೀತಿಯಲ್ಲಿ ಅವರಿಗೂ ಐರೋಪ್ಯರಿಗೂ ವ್ಯತ್ಯಾಸವೇನೂ ಕಾಣುವುದಿಲ್ಲ. ಊಟತಿಂಡಿಗಳ ವಿಚಾರದಲ್ಲಿ ಅವರಿಗೆ ಯಾವ ವಿಧವಾದ ಶಂಕೆಯೂ ಇಲ್ಲ. ಚುಟ್ಟಾಗಳಂ ತೂ ಸದಾ ಅವರ ಬಾಯಿಯಲ್ಲಿ ಇದ್ದೇ ಇರುತ್ತವೆ. ಉಡುಪೂ ಆಂಗ್ಲೇ ಯರ ಉಡುಪಿನಂತೆಯೇ ನಾಚಿಕೆಗೇಡಿನದಾಗಿರುತ್ತದೆ. ಈ ತೆರದ ನಡತೆ ಯೆಲ್ಲಾ ನಮ್ಮ ಕುಟುಂಬದವರಿಗೆ ತಕ್ಕುದಲ್ಲ. ನಾನು ಇಷ್ಟರಲ್ಲಿಯೇ ಯಾತ್ರೆಗೆ ಹೊರಡುತ್ತೇನೆ. ನನ್ನ ಆಯುಸ್ಸು ಕೂಡ ಮುಗಿಯುತ್ತಾ ಬಂದಿತು. ನಾನು ಮೃತ್ಯುವಿನ ದಡದಲ್ಲಿ ಕುಳಿತುಕೊಂಡು ನೀನು ಸೀಮೆಗೆ ಹೋಗುವುದಕ್ಕೆ—ಸಮುದ್ರವನ್ನು ದಾಟುವುದಕ್ಕೆ—ಅಪ್ಪಣೆ ಕೊಡುವುದು ಹೇಗೆ? ಆದರೆ ನಾನು ನಿನ್ನ ದಾರಿಗೆ ಅಡ್ಡಬರುವುದಿಲ್ಲ. ಇದಕ್ಕೆಲ್ಲಾ ನಿಮ್ಮ

ತಾಯಿಯ ಅಪ್ಪಣೆಯೇ ಮುಖ್ಯ. ಆಕೆಯು ಒಪ್ಪಿದರೆ ಅಗತ್ಯವಾಗಿ ಹೋಗಬಹುದು. ನಾನು ಅಡ್ಡಬರುವದಿಲ್ಲವೆಂದು ಆಕೆಗೆ ಹೇಳು. ಯಾವುದಕ್ಕೂ ನನ್ನ ಆಶೀರ್ವಾದವನ್ನು ನೀನು ಪಡೆದಿರುವೆ.''

''ನಿಮ್ಮಿಂದ ಇದಕ್ಕಿಂತ ಹೆಚ್ಚಾಗಿ ನಾನು ಆಸಿಸಲಾಗು ವುದಿಲ್ಲ. ಇನ್ನು ನಮ್ಮ ತಾಯಿಯ ಒಪ್ಪಿಗೆಯನ್ನು ಪಡೆಯಲು ಪ್ರಯತ್ನ ಪಡುತ್ತೇನೆ. ಆದರೆ ನೀವು ಲೆಲಿಸಾಹೇಬರಿಗೆ ಒಂದು ಶಿಫಾ ರಸು ಪತ್ರವನ್ನು ಬರೆದು ಕೊಡುವುದಿಲ್ಲವೆ?'' ಎಂದು ನಾನು ಕೇಳಿದೆನು.

''ನಾನು ಹೇಗೆ ಬರೆದುಕೊಡಲಿ? ಆದರೆ ಲೆಲಿಸಾಹೇಬರು ಒಳ್ಳೆಯ ಮನುಷ್ಯರು. ನಮ್ಮ ಕುಟುಂಬದ ಪರಿಚಯವನ್ನು ತಿಳಿಸಿ ಅವರಿಗೆ ಒಂದು ಕಾಗದವನ್ನು ಬರೆ. ಅವರು ಖಂಡಿತವಾಗಿ ನಿನ್ನನ್ನು ನೋಡು ತ್ತಾರೆ. ಅವರು ಸಹಾಯಮಾಡಿದರೂ ಮಾಡಬಹುದು.'' ಎಂದು ಉತ್ತರಕೊಟ್ಟನು.

ಸಾಹೇಬರಿಗೆ ಸಿಫಾರಸು ಪತ್ರವನ್ನೇಕೆ ನಮ್ಮ ಚಿಕ್ಕಪ್ಪನು ಕೊಡಲಿಲ್ಲವೆಂದು ಹೇಳಲಾರೆನು. ವಿಲಾಯತಿಗೆ ಹೋಗುವುದು ಧರ್ಮ ವಿರುದ್ಧವಾದ ಕೆಲಸವಾದುದರಿಂದ ಅದಕ್ಕೆ ಕೈಯಾರ ಸಹಾಯಮಾಡಲು ಅವರು ಸಂಕೋಚಪಟ್ಟರೆಂದು ನನಗೆ ಅಸ್ಪಷ್ಟವಾಗಿ ನೆನಪಿದೆ.

ಲೆಲಿಸಾಹೇಬರಿಗೆ ಕಾಗದವನ್ನು ಬರೆದೆನು. ಅವರು ತಮ್ಮ ಬಂಗ ಲೆಯಲ್ಲಿ ಬಂದು ನೋಡಬೇಕೆಂದು ಹೇಳಿ ಕಳುಹಿಸಿದರು. ಅವರು ಆ ಬಂಗಲೆಯ ಮಹಡಿಯ ಮೆಟ್ಟಲನ್ನು ಹತ್ತುತ್ತಿರುವಾಗ ನನ್ನನ್ನು ಕಂಡು ''ಬಿ. ಎ. ಪರೀಕ್ಷೆಮಾಡಿದಮೇಲೆ ನನ್ನನ್ನು ಬಂದು ನೋಡು. ಈಗ ಯಾವ ಸಹಾಯಮಾಡಲೂ ಆಗುವುದಿಲ್ಲ.'' ಎಂದು ಹೇಳಿ ಮೇಲಕ್ಕೆ ಹೊರಟುಹೋದರು. ನಾನು ಈ ಸಂದರ್ಭದಲ್ಲಿ ಹೇಗೆ ನಡೆಯಬೇಕೆನ್ನು ವುದಕ್ಕೆ ಅಗಾಧವಾದ ಪ್ರಯತ್ನದಿಂದ ಸಿದ್ಧನಾಗಿ ಬಹು ಎಚ್ಚರಿಕೆಯಿಂದ ಕೆಲವು ವಾಕ್ಯಗಳನ್ನು ಚೆನ್ನಾಗಿ ಗಟ್ಟಿಮಾಡಿಕೊಂಡು ಹೋಗಿದ್ದೆನು. ಕೆಳಕ್ಕೆ ಬಗ್ಗಿ ಎರಡು ಕೈಗಳಿಂದಲೂ ಆತನಿಗೆ ಸಲಾಂ ಮಾಡಿದ್ದೆನು. ಆದರೆ ಈ ಶ್ರಮವೆಲ್ಲಾ ವ್ಯರ್ಥವಾಯಿತು.

"ನನ್ನ ಹೆಂಡತಿಯ ಒಡವೆಗಳನ್ನು ಉಪಯೋಗಿಸಲೆ?" ಎಂದು ಯೋಚನೆಮಾಡಿದೆನು. ನಮ್ಮ ದೊಡ್ಡಣ್ಣನಲ್ಲಿ ನನಗೆ ಬಹಳ ಭರವಸೆಯಿದ್ದಿತು. ನನ್ನ ವಿಷಯದಲ್ಲಿ ಆತನ ಔದಾರ್ಯಕ್ಕೆ ಮಿತಿಯೇ ಇರಲಿಲ್ಲ. ನನ್ನನ್ನು ಮಗನಂತೆ ಪ್ರೀತಿಸುತ್ತಿದ್ದನು.

ಪೋರಬಂದರದಿಂದ ರಾಜಕೋಟೆಗೆ ಬಂದು ನಡೆದ ವಿಷಯಗಳನ್ನೆಲ್ಲಾ ತಿಳಿಸಿದೆನು. ಜೋಶಿಜಿಯವರ ಸಲಹೆಯನ್ನು ಕೇಳಲು ಆವಶ್ಯಕವಾದರೆ ಸಾಲವನ್ನಾದರೂ ಮಾಡಿ ನನ್ನನ್ನು ಸೀಮೆಗೆ ಕಳುಹಿಸಬೇಕೆಂದು ಅವರು ಸಲಹೆ ಕೊಟ್ಟರು. ನಾನು ನನ್ನ ಹೆಂಡತಿಯ ಒಡವೆಗಳ ಮಾರಾಟವನ್ನು ಸೂಚಿಸಿದೆನು. ಅದರಿಂದ ಎರಡು ಮೂರು ಸಾವಿರ ರೂಪಾಯಿ ದೊರಕುತ್ತಿದ್ದಿತು. ನಮ್ಮಣ್ಣನು ಹೇಗಾದರೂ ಮಾಡಿ ಹಣವನ್ನು ಒದಗಿಸುವೆನೆಂದು ಭರವಸೆ ಕೊಟ್ಟನು.

ಆದರೆ ನಮ್ಮ ತಾಯಿಗೆ ಇನ್ನೂ ಸಮಾಧಾನವಿರಲಿಲ್ಲ. ಆಕೆಯು ಇದಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನೂ ಸೂಕ್ಷ್ಮವಾಗಿ ವಿಚಾರಿಸಿ ತಿಳಿದುಕೊಳ್ಳುವುದಕ್ಕೆ ಪ್ರಾರಂಭಿಸಿದ್ದಳು. ಸೀಮೆಗೆ ಹೋದ ಯುವಕರೆಲ್ಲಾ ಕೆಟ್ಟು ಹೋಗುವರೆಂದು ಆಕೆಗೆ ಯಾರೋ ಹೇಳಿದ್ದರು; ಇನ್ನೊಬ್ಬರು ಅಲ್ಲಿಗೆ ಹೋದವರೆಲ್ಲಾ ಮಾಂಸಾಹಾರಿಗಳಾಗುತ್ತಾರೆಂದು ಹೇಳಿದರು; ಮತ್ತೊಬ್ಬರು ಮದ್ಯವಿಲ್ಲದೆ ಅಲ್ಲಿ ಒಂದು ದಿವಸಕೂಡ ಇರಲಾಗುವುದಿಲ್ಲವೆಂದು ಹೇಳಿದರು. "ಇದಕ್ಕೆಲ್ಲಾ ಏನುಹೇಳುತ್ತೀಯೆ?" ಎಂದು ನನ್ನನ್ನು ಕೇಳಿದಳು. "ನಿನಗೆ ನನ್ನಲ್ಲಿ ನಂಬಿಕೆಯಿಲ್ಲವೆ? ನಾನು ನಿನಗೆ ಎಂದಿಗೂ ಸುಳ್ಳುಹೇಳುವುದಿಲ್ಲ. ಆ ಪದಾರ್ಥಗಳಲ್ಲಿ ಯಾವುದನ್ನೂ ಮುಟ್ಟುವುದಿಲ್ಲವೆಂದು ಪ್ರತಿಜ್ಞೆಮಾಡಿ ಹೇಳುತ್ತೇನೆ. ಈ ರೀತಿಯಾದ ಭಯವೇನಾದರೂ ಇದ್ದರೆ ಜೋಶಿಯವರು ನನ್ನನ್ನು ಸೀಮೆಗೆ ಹೋಗಗೊಡುತ್ತಿದ್ದರೆ?" ಎಂದು ಹೇಳಿದೆನು.

ಆಕೆಯು "ನಿನ್ನಲ್ಲೇನೋ ನನಗೆ ನಂಬಿಕೆಯಿದೆ. ಆದರೆ ದೂರದೇಶದಲ್ಲಿ ಹೇಗೋ ಏನೋ? ನನಗೆ ಭ್ರಮೆಹಿಡಿದಂತಾಗಿ ನನ್ನ ಬುದ್ಧಿಗೆ ಏನೂ ತೋಚುವುದಿಲ್ಲ. ಈ ವಿಚಾರವಾಗಿ ಬೇಚರಜೀಸ್ವಾಮಿಯವರನ್ನು ಕೇಳುತ್ತೇನೆ." ಎಂದಳು.

ಬೇಚರಜೀಸ್ವಾಮಿಯವರು ಮೊದಲು ಮೋಡಬನಿಯರಾಗಿದ್ದವರು ಈಗ ಜೈನಸಾಧುವಾಗಿದ್ದರು. ಅವರೂ ಜೋಶಿಜಿಯವರಂತೆ ನಮ್ಮ ಕುಟುಂಬಕ್ಕೆ ಸಲಹೆ ಕೊಡುವವರಾಗಿದ್ದರು. ಅವರು ಈಗ ನನಗೆ ನೆರವಾಗಿ ಬಂದು "ನಾನು ಆ ಮೂರು ವಿಷಯಗಳಲ್ಲಿಯೂ ಈ ಹುಡುಗನಿಂದ ಪ್ರತಿಜ್ಞೆ ಮಾಡಿಸುತ್ತೇನೆ. ಆಮೇಲೆ ಅವನನ್ನು ಸೀಮೆಗೆ ಕಳುಹಿಸಬಹುದು." ಎಂದು ಹೇಳಿ ನನ್ನ ಕೈಲಿ ಮಾಂಸ, ಮದ್ಯ ಮತ್ತು ಸ್ತ್ರೀಸಂಗ ಇವುಗಳಿಂದ ಯಾವಾಗಲೂ ದೂರವಾಗಿರುತ್ತೇನೆಂದು ಪ್ರತಿಜ್ಞೆ ಮಾಡಿಸಿದರು. ನಾನು ಪ್ರತಿಜ್ಞೆ ಮಾಡಿದಮೇಲೆ ನಮ್ಮ ತಾಯಿಯು ನನಗೆ ಅಪ್ಪಣೆಯನ್ನು ಕೊಟ್ಟಳು.

ಹೈಸ್ಕೂಲಿನವರು ನನಗೆ ಮರ್ಯಾದೆಮಾಡಲು ಒಂದು ಸಂತೋಷ ಕೂಟವನ್ನೇರ್ಪಡಿಸಿದರು. ರಾಜಕೋಟೆಯಿಂದ ಒಬ್ಬ ಹುಡುಗನು ಸೀಮೆಗೆ ಹೋಗುವುದು ಆಗ ಅಪೂರ್ವಘಟನೆಯಾಗಿದ್ದಿತು. ನಾನು ಧನ್ಯವಾದವನ್ನು ಕೊಡುವುದಕ್ಕಾಗಿ ಒಂದೆರಡು ಮಾತುಗಳನ್ನು ಬರೆದು ಕೊಂಡುಹೋಗಿದ್ದೆನು. ಆದರೆ ಅಲ್ಲಿ ಮಾತೇ ಹೊರಡಲೊಲ್ಲದು. ಅದನ್ನು ಓದುತ್ತಿದ್ದಾಗ ನನ್ನ ತಲೆ ತಿರುಗುತ್ತಿದ್ದುದೂ ನನ್ನ ದೇಹವೆಲ್ಲಾ ನಡುಗುತ್ತಿದ್ದುದೂ ನನಗೆ ಜ್ಞಾಪಕವಿದೆ.

ಹಿರಿಯರ ಆಶೀರ್ವಾದವನ್ನು ಹೊಂದಿ ನಾನು ಮುಂಬಯಿಗೆ ಹೊರಟೆನು. ರಾಜಕೋಟೆಯಿಂದ ಮುಂಬಯಿಗೆ ನಾನು ಹೋದುದು ಇದೇ ಮೊದಲನೆಯ ಸಲ. ನಮ್ಮಣ್ಣನೂ ನನ್ನ ಜೊತೆಗೆ ಬಂದನು. ಆದರೆ ಎಷ್ಟೋಸಲ ಕೈಗೆ ಬಂದ ತುತ್ತು ಬಾಯಿಗೆ ಬರುವುದಿಲ್ಲ. ಮುಂಬಯಿಯಲ್ಲಿ ಎದುರಿಸಲು ಅಡಚಣೆಗಳು ಕಾದಿದ್ದುವು.

## ೧೨

## ಜಾತಿಬಹಿಷ್ಕಾರ

ನಮ್ಮ ತಾಯಿಯ ಅಪ್ಪಣೆಯನ್ನೂ ಆಶೀರ್ವಾದವನ್ನೂ ಪಡೆದು, ಮೂರುನಾಲ್ಕು ತಿಂಗಳಿನ ಮಗುವಿನ ಜೊತೆಗೆ ನನ್ನ ಹೆಂಡತಿಯನ್ನೂ ಬಿಟ್ಟು ನಾನು ಉತ್ಸಾಹದಿಂದ ತುಂಬಿತುಳುಕುತ್ತಾ ಮುಂಬಯಿಗೆ ಹೊರಟೆನು. ಆ ಊರನ್ನು ಸೇರುತ್ತಲೇ ಕೆಲವು ಮಿತ್ರರು ಜೂನ್ ಜೂಲೈ ತಿಂಗಳುಗಳಲ್ಲಿ ಹಿಂದೂಸಾಗರದಲ್ಲಿ ತೂಫಾನ್ (ಬಿರುಗಾಳಿ) ಬೀಸುತ್ತಿರುವುದೆಂತಲೂ ಇದು ನನ್ನ ಮೊದಲನೆಯ ಸಮುದ್ರಪ್ರಯಾಣ ವಾದುದರಿಂದ ನೊವೆಂಬರ್ ತಿಂಗಳವರೆಗೂ ನನ್ನನ್ನು ಪ್ರಯಾಣಮಾಡ ಬಿಡಕೂಡದೆಂದೂ ನಮ್ಮಣ್ಣನೊಡನೆ ಹೇಳಿದರು. ಇದರ ಜೊತೆಗೆ ತೂಫಾನಿನ ಹೊಡೆತದಿಂದ ಒಂದು ಜಹಜು ಮುಳುಗಿಹೋಯಿತೆಂದು ಯಾರೋ ಹೇಳಿದರು. ಇದನ್ನೆಲ್ಲಾ ಕೇಳಿ ನಮ್ಮಣ್ಣನಿಗೆ ಹೆದರಿಕೆಯಾಗಿ ಹೀಗೆ ಅಪಾಯವಾಗುವ ಸಂಭವವಿರುವಾಗ ನಾನು ಹೊರಡಲು ಸಮ್ಮ ತಿಸಲಿಲ್ಲ. ನನ್ನನ್ನು ಒಬ್ಬ ಸ್ನೇಹಿತನ ಜೊತೆಯಲ್ಲಿ ಬಿಟ್ಟು ನನ್ನ ಖರ್ಚಿಗೆ ಹಣವನ್ನು ನಮ್ಮ ಭಾವನೊಬ್ಬನ ಕೈಗೆ ಕೊಟ್ಟು ನನಗೆ ಬೇಕಾದಾಗ ಸಹಾಯವನ್ನೆಲ್ಲಾ ಮಾಡುವಂತೆ ಕೆಲವು ಸ್ನೇಹಿತರಿಗೆ ಹೇಳಿ ತಾನು ತನ್ನ ಕೆಲಸದಮೇಲೆ ರಾಜಕೋಟೆಗೆ ಹೊರಟುಹೋದನು.

ಮುಂಬಯಿಯಲ್ಲಿ ಹೊತ್ತು ಕಳೆಯುವುದು ನನಗೆ ಬಹು ಕಷ್ಟ ವಾಯಿತು. ಸೀಮೆಯ ಸಂಬಂಧವಾದ ಕನಸುಗಳೇ ಕಾಣಹತ್ತಿದುವು.

ಇದರ ಮಧ್ಯೆ ನಾನು ಸೀಮೆಗೆ ಹೋಗುವ ವಿಚಾರವಾಗಿ ನಮ್ಮ ಕುಲದಲ್ಲಿ ಸುಂಟರಗಾಳಿಯೆದ್ದಿತು. ಅಂದಿನವರೆಗೂ ಯಾವ ಮೋಢ ಬನಿಯನೂ ಸೀಮೆಗೆ ಹೋಗಿರಲಿಲ್ಲ. ಆದುದರಿಂದ ನಾನು ಹೋಗಲು ಸಾಹಸಮಾಡಿದರೆ ನನಗೆ ತಕ್ಕ ಶಿಕ್ಷೆಯಾಗಬೇಕು! ನಮ್ಮ ಕುಲದ ಸಭೆ

ಯೊಂದು ಏರ್ಪಟ್ಟು ನಾನು ಅವರೆದುರಿಗೆ ಹೋಗಬೇಕೆಂದು ಹೇಳಿ ಕಳುಹಿಸಿದರು. ನಾನು ಹೋದೆನು. ನನಗೆ ಒಮ್ಮೆಯೇ ಅಷ್ಟು ಧೈರ್ಯ ಎಲ್ಲಿಂದ ಬಂದಿತೋ ನಾನು ಕಾಣೆ. ಸ್ವಲ್ಪವೂ ಹೆದರಿಕೆಯಿಲ್ಲದೆ, ಸಂಶಯವಿಲ್ಲದೆ ನಾನು ಅವರೆದುರಿಗೆ ಹೋದೆನು. ಸೇಠರು—ನಮ್ಮ ಕುಲದ ಮುಖ್ಯಸ್ಥರು—ನಮಗೆ ದೂರದ ಸಂಬಂಧದವರಾಗಿದ್ದರಲ್ಲದೆ ನಮ್ಮ ತಂದೆಯವರೊಡನೆ ಸುಸ್ನೇಹದಿಂದಿದ್ದವರಾಗಿದ್ದರು. ಅವರು ನನ್ನೊಡನೆ

''ನಮ್ಮ ಕುಲದವರ ಅಭಿಪ್ರಾಯದಲ್ಲಿ ನೀನು ಸೀಮೆಗೆ ಹೋಗ ಬೇಕೆಂದಿರುವುದು ಉಚಿತವಲ್ಲ, ಸಮುದ್ರವನ್ನು ದಾಟುವುದು ನಮ್ಮ ಧರ್ಮಕ್ಕೆ ವಿರುದ್ಧವಾದುದು. ಇದೂ ಅಲ್ಲದೆ ಸೀಮೆಗೆ ಹೋಗಿ ನಮ್ಮ ಧರ್ಮವನ್ನು ರಕ್ಷಿಸಿಕೊಳ್ಳುವುದು ಸಾಧ್ಯವಲ್ಲವೆಂದು ನಾವು ಕೇಳಿದ್ದೇವೆ. ಅಲ್ಲಿ ಐರೋಪ್ಯರ ಜೊತೆಯಲ್ಲಿ ಅನ್ನಪಾನ ಮಾಡಬೇಕಾಗಿರುತ್ತದೆ!'' ಎಂದು ಹೇಳಿದರು.

ಇದಕ್ಕೆ ಉತ್ತರವಾಗಿ ನಾನು ''ನನ್ನ ಅಭಿಪ್ರಾಯದಲ್ಲಿ ವಿಲಾ ಯತಿಗೆ ಹೋಗುವುದು ನಮ್ಮ ಧರ್ಮಕ್ಕೆ ಸ್ವಲ್ಪವೂ ವಿರುದ್ಧವಾದು ದಲ್ಲ. ನಾನು ಅಲ್ಲಿಗೆ ಹೋಗಿ ಮುಂದಕ್ಕೆ ವ್ಯಾಸಂಗಮಾಡಬೇಕೆಂದಿ ದ್ದೇನೆ. ಮತ್ತು ನೀವು ಯಾವ ವಿಷಯಗಳಲ್ಲಿ ಅತ್ಯಧಿಕವಾಗಿ ಭಯ ಪಡುತ್ತೀರೋ ಅವುಗಳಿಂದ ಯಾವಾಗಲೂ ದೂರವಾಗಿರುತ್ತೇನೆಂದು ನಮ್ಮ ತಾಯಿಯ ಎದುರಿಗೆ ಪ್ರತಿಜ್ಞೆ ಮಾಡಿರುತ್ತೇನೆ. ಹೀಗಿರುವುದ ರಿಂದ ಯಾವ ಭಯವೂ ಇರುವುದಿಲ್ಲ.'' ಎಂದೆನು.

''ಅಲ್ಲಿ ನಿನ್ನ ಧರ್ಮವನ್ನು ರಕ್ಷಿಸಿಕೊಳ್ಳಲು ಆಗುವುದಿಲ್ಲವೆಂದು ನಾವು ಹೇಳುತ್ತೇವೆ! ನಿಮ್ಮ ತಂದೆಯೊಡನೆ ನನಗಿದ್ದ ಪರಿಚಯವು ಯಾವರೀತಿಯದೆಂದು ನಿನಗೆ ತಿಳಿದಿದೆ. ಹೀಗಿರುವಾಗ ನನ್ನ ಆಜ್ಞೆಯಂತೆ ನಡೆಯುವುದು ನಿನ್ನ ಕರ್ತವ್ಯ.'' ಎಂದು ಸೇಠರು ಹೇಳಿದರು.

''ತಮಗೆ ನಮ್ಮ ತಂದೆಯೊಡನೆ ಇದ್ದ ಪರಿಚಯವು ನನಗೆ ಗೊತ್ತು. ತಾವು ನನಗೆ ಪೂಜ್ಯರು. ಆದರೆ ನಾನು ಈ ವಿಷಯದಲ್ಲಿ ಏನೂ ಮಾಡುವಹಾಗಿಲ್ಲ. ವಿಲಾಯತಿಗೆ ಹೋಗಬೇಕೆಂದು ನಿಶ್ಚಯಿಸಿ

ರುವುದನ್ನು ಬದಲಾಯಿಸಲಾರೆನು. ನಮ್ಮ ತಂದೆಯ ಮಿತ್ರರೂ ನಮ್ಮ ಕುಟುಂಬಕ್ಕೆ ಸಲಹೆ ಕೊಡುವವರೂ ವಿದ್ವಾಂಸರೂ ಆದ ಬ್ರಾಹ್ಮಣರೊಬ್ಬರಿದ್ದಾರೆ. ಅವರು ಸೀಮೆಗೆ ಹೋಗುವುದರಲ್ಲಿ ಏನೂ ದೋಷವಿಲ್ಲವೆಂದು ಹೇಳುತ್ತಾರೆ. ನಮ್ಮ ತಾಯಿ ಮತ್ತು ನಮ್ಮಣ್ಣ ಇವರಿಬ್ಬರೂ ಇದಕ್ಕೆ ಆಗಲೆ ತಮ್ಮ ಒಪ್ಪಿಗೆಯನ್ನು ಕೊಟ್ಟಿದ್ದಾರೆ.'' ಎಂದು ಉತ್ತರಕೊಟ್ಟೆನು.

''ಹಾಗಾದರೆ ಕುಲದವರ ಅಪ್ಪಣೆಯನ್ನು ನೀನು ನಿರಾಕರಿಸುವೆಯೋ ?''

''ನಾನು ಇದಕ್ಕೆ ಏನೂ ಉತ್ತರವನ್ನು ಹೇಳಲಾರೆನು. ಈ ವಿಚಾರದಲ್ಲಿ ಅಡ್ಡಬರಬಾರದೆಂದು ನನಗೆ ತೋರುತ್ತದೆ.''

ಈ ಮಾತನ್ನು ಕೇಳಿ ಸೇಠರಿಗೆ ಬಹಳ ಸಿಟ್ಟು ಬಂದಿತು. ಅವರು ನನ್ನನ್ನು ಬಯ್ದರು. ನಾನು ಅಲ್ಲಾಡಲಿಲ್ಲ. ಅವರು ಹೀಗೆ ತೀರ್ಮಾನ ಹೇಳಿದರು :—

''ಈ ಹೊತ್ತಿನಿಂದ ಈ ಹುಡುಗನನ್ನು ಜಾತಿಬಾಹಿರನೆಂದು ತಿಳಿಯಬೇಕು. ಯಾರಾದರೂ ಇವನಿಗೆ ಸಹಾಯಮಾಡಿದರೆ ಅಥವಾ ಅವನನ್ನು ಕಳುಹಿಸುವುದಕ್ಕೆ ಬಂದರಿಗೆ ಹೋದರೆ ಅವರಿಗೆ ೧। ರೂಪಾಯಿ ಜುಲ್ಮಾನೆ ವಿಧಿಸಲಾಗುತ್ತದೆ.''

ಈ ನಿರ್ಣಯದಿಂದ ನಾನೇನೂ ಹೆದರಲಿಲ್ಲ. ಸೇಠರ ಅಪ್ಪಣೆ ಪಡೆದು ಬಂದುಬಿಟ್ಟೆನು. ಇದನ್ನೆಲ್ಲಾ ಕೇಳಿ ನಮ್ಮಣ್ಣನು ಏನು ಹೇಳುತ್ತಾನೋ ಎಂದು ಯೋಚಿಸಿದೆನು. ಆತನು ಇದಕ್ಕೆ ಹೆದರಿಬಿಟ್ಟರೆ? ಸದ್ಭಾಗ್ಯವಶಾತ್ ಆತನು ತನ್ನ ಮನಸ್ಸನ್ನು ಬದಲಾಯಿಸದೆ ಸೇಠರು ಹೀಗೆ ನಿರ್ಣಯಿಸಿದ್ದರೂ ನಾನು ಸೀಮೆಗೆ ಹೋಗುವುದಕ್ಕೆ ತನ್ನ ಅನುಮತಿಯುಂಟೆಂದು ಪತ್ರ ಬರೆದನು

ಈ ಘಟನೆಯಿಂದ ನಾನು ಜಾಗ್ರತೆಯಾಗಿ ಪ್ರಯಾಣಮಾಡಲು ಎಂದಿಗಿಂತಲೂ ಹೆಚ್ಚು ಆತುರವುಳ್ಳವನಾದೆನು. ಕುಲದವರು ನಮ್ಮಣ್ಣನನ್ನು ಈ ವಿಷಯವಾಗಿ ಬಲಾತ್ಕಾರಪಡಿಸಿದರೋ? ಅಥವಾ ಇನ್ನೇನಾದರೂ ವಿಘ್ನವೊದಗಿದರೋ? ಈ ರೀತಿಯಾಗಿ ನಾನು ನನ್ನ ಪರಿಸ್ಥಿ

ತಿಯ ವಿಷಯವಾಗಿ ಚಿಂತೆಯಲ್ಲಿ, ದಿನಗಳನ್ನು ಕಳೆಯುತ್ತಾ ಇರುವಾಗ ಜುನಾಗಢದ ವಕೀಲರೊಬ್ಬರು ಬ್ಯಾರಿಸ್ಟರಾಗುವುದಕ್ಕೋಸ್ಕರ ಸೆಪ್ಟಂಬರ್ ೪ನೆಯ ತಾರೀಖಿನ ದಿನ ವಿಲಾಯತಿಗೆ ಹೊರಡುವರೆಂದು ಕೇಳಿದೆನು. ನಮ್ಮಣ್ಣನು ಮುಂಬಯಿಯಲ್ಲಿ ನನ್ನನ್ನು ನೋಡಿಕೊಳ್ಳುವುದಕ್ಕಾಗಿ ನಿಯಮಿಸಿದ್ದ ಮಿತ್ರರನ್ನು ಹೋಗಿ ನೋಡಿದೆನು. ಅವರೂ ಇಂತಹ ಜೊತೆಯು ಸಿಕ್ಕುವಾಗ ಈ ಸಮಯವನ್ನು ಕಳೆದುಕೊಳ್ಳಬಾರದೆಂದೇ ಅಭಿಪ್ರಾಯಪಟ್ಟರು. ಕಾಲವನ್ನು ಕಳೆಯುವಹಾಗಿರಲಿಲ್ಲ. ಒಡನೆಯೇ ಹೋಗುವುದಕ್ಕೆ ಅಪ್ಪಣೆಕೊಡಬೇಕೆಂದು ನಮ್ಮಣ್ಣನಿಗೆ ತಂತಿ ಕೊಟ್ಟೆನು. ಆತನು ಅಪ್ಪಣೆಕೊಟ್ಟನು. ನಮ್ಮ ಭಾವನನ್ನು ಹೋಗಿ ಹಣಕೇಳಿದೆನು. ನೇತರ ಅಪ್ಪಣೆಗೆ ವಿರೋಧವಾಗಿ ನಡೆದು ಬಹಿಷ್ಕಾರ ಹಾಕಿಸಿಕೊಳ್ಳುವುದಕ್ಕೆ ತಾವು ಸಿದ್ಧವಾಗಿಲ್ಲವೆಂದು ಅವರು ಹೇಳಿದರು. ನಮ್ಮ ಮನೆತನದ ಮಿತ್ರರೊಬ್ಬರ ಬಳಿಗೆ ಹೋಗಿ ನನ್ನ ಪ್ರಯಾಣಕ್ಕೂ ಚಿಲ್ಲರೆ ಖರ್ಚಿಗೂ ಸಾಕಾಗುವಷ್ಟು ಹಣವನ್ನು ನನಗೆ ಕೊಟ್ಟು ಆಮೇಲೆ ಅದನ್ನು ನಮ್ಮಣ್ಣನಿಂದ ವಸೂಲುಮಾಡಿಕೊಳ್ಳಬೇಕೆಂದು ಪ್ರಾರ್ಥಿಸಿದೆನು. ಅವರು ಇದಕ್ಕೆ ಒಪ್ಪಿದುದಲ್ಲದೆ ನನಗೆ ಧೈರ್ಯ ಹೇಳಿದರು. ಈ ಉಪಕಾರವನ್ನು ನಾನು ಬಹುವಾಗಿ ನೆನೆದೆನು. ಆ ಹಣದಲ್ಲಿ ಒಂದು ಭಾಗವನ್ನುಪಯೋಗಿಸಿ ಪ್ರಯಾಣಕ್ಕೆ ಟಿಕಿಟನ್ನು ಕೊಂಡುಕೊಂಡೆನು. ಜಹಜಿನ ಪ್ರಯಾಣಕ್ಕೆ ಬೇಕಾದುದನ್ನೆಲ್ಲಾ ಸಿದ್ಧಪಡಿಸಿಕೊಳ್ಳವುದು ಉಳಿದಿದ್ದಿತು. ಈ ವಿಚಾರದಲ್ಲಿ ಅನುಭವವುಳ್ಳ ಇನ್ನೊಬ್ಬರು ಮಿತ್ರರಿದ್ದರು. ಅವರು ನನಗೆ ಬೇಕಾದ ಬಟ್ಟೆಬರೆಗಳನ್ನೆಲ್ಲಾ ಸಿದ್ಧಪಡಿಸಿಕೊಟ್ಟರು. ಕೆಲವು ಉಡುಪುಗಳು ನನ್ನ ಮನಸ್ಸಿಗೆ ಬಂದುವು, ಕೆಲವು ನನಗೆ ಸರಿದೋರಲಿಲ್ಲ. ಆಮೇಲೆ ಬಹಳ ಉತ್ಸಾಹದಿಂದ ನೆಕ್‌ಟೈಯನ್ನು ಕಟ್ಟಿಕೊಳ್ಳುತ್ತಿದ್ದರೂ ಆಗ ಅದು ನನಗೆ ಅಸಹ್ಯವಾಗಿ ಕಂಡಿತು. ಷಾರ್ಟ್ ಜಾಕೆಟ್ (ಮೋಟಂಗಿ) ಎಂಬುದನ್ನು ಹಾಕಿಕೊಳ್ಳುವುದು ನನಗೆ ನಾಚಿಕೆಗೇಡಾಗಿ ಕಾಣುತ್ತಿದ್ದಿತು. ಆದರೆ ಸೀಮೆಗೆ ಹೋಗುವ ಉತ್ಸಾಹದಿಂದ ನನ್ನ ಮನಸ್ಸು ತುಂಬಿ ತುಳುಕುತ್ತಿದ್ದುದರಿಂದ ಇದೊಂದೂ ದೊಡ್ಡದಾಗಿ ಕಾಣಲಿಲ್ಲ. ತಿಂಡಿ ತೀರ್ಥದ ಪದಾರ್ಥಗಳೂ ಸಾಕಾದುದ

ಕ್ಕಿಂತ ಹೆಚ್ಚಾಗಿಯೇ ಇದ್ದವು. ನನ್ನ ಮಿತ್ರರು ನನಗೆ ಕೂಡ ತ್ರ್ಯಂಬಕ ರಾಯ ಮುಜುಮ್‌ದಾರ (ಜುನಾಗಢದ ವಕೀಲರು) ರ ಕೊಠಡಿಯಲ್ಲೇ ಒಂದು ಸ್ಥಳಕ್ಕೆ ಏರ್ಪಾಡುಮಾಡಿ ನನ್ನನ್ನು ನೋಡಿಕೊಳ್ಳಬೇಕೆಂದು ಅವರಿಗೆ ಹೇಳಿದರು. ಅವರು ಪ್ರೌಢ ವಯಸ್ಸಿನ ಅನುಭವಸ್ಥರಾದ ಗೃಹಸ್ಥರಾಗಿದ್ದರು. ಅವರಿಗೆ ಪ್ರಪಂಚದ ರೀತಿಯು ಗೊತ್ತಿದ್ದಿತು. ನಾನಾದರೋ ಲೋಕಾನುಭವವೇ ಇಲ್ಲದ ಹದಿನೆಂಟುವರ್ಷದ ಪೋರ ನಾಗಿದ್ದೆನು. ನನ್ನ ವಿಚಾರದಲ್ಲಿ ಯಾರೂ ಯೋಚನೆಮಾಡಬೇಕಾದು ದಿಲ್ಲವೆಂದು ಅವರು ನನ್ನ ಮಿತ್ರರಿಗೆ ಹೇಳಿದರು.

ಕಟ್ಟಕಡೆಗೆ ೧೮೮೮ನೆಯ ಇಸವಿ ಸೆಪ್ಟೆಂಬರ್ ೪ನೆಯ ತಾರೀಖಿನ ದಿವಸ ನಾನು ಮುಂಬಯಿಯಿಂದ ಹೊರಟೆನು.



## ೧೩
# ಕಟ್ಟಕಡೆಗೆ ಇಂಗ್ಲೆಂಡನ್ನು ಸೇರಿದುದು

ನಾನು ಜಹಜಿನಲ್ಲಿದ್ದಾಗ ನನಗೆ ಒಂದು ಸಲಕೂಡ ವಾಂತಿಯಾಗಲಿಲ್ಲ. ಆದರೆ ದಿನಗಳು ಕಳೆದಹಾಗೆಲ್ಲಾ ನನಗೆ ಕಳವಳವುಂಟಾಯಿತು. ಹಡಗಿನ ಸ್ಟ್ಯೂವರ್ಡಿನೊಡನೆ (ಉಗ್ರಾಣಾಧಿಕಾರಿ) ಮಾತನಾಡುವುದಕ್ಕೆ ಕೂಡ ನನಗೆ ನಾಚಿಕೆಯಾಗುತ್ತಿದ್ದಿತು. ನನಗೆ ಇಂಗ್ಲಿಷಿನಲ್ಲಿ ಮಾತನಾಡುವ ಅಭ್ಯಾಸವೇ ಇರಲಿಲ್ಲ. ಮುಜಮ್‌ದಾರರೊಬ್ಬರ ಹೊರತು ಎರಡನೆಯ ತರಗತಿಯ ಪ್ರಯಾಣಿಕರೆಲ್ಲರೂ ಐರೋಪ್ಯರಾಗಿದ್ದರು. ನನಗೆ ಅವರೊಡನೆ ಮಾತನಾಡುವುದಕ್ಕೆ ಬರುತ್ತಿರಲಿಲ್ಲ. ಏಕೆಂದರೆ ಅವರು ಒಂದುವೇಳೆ ನನ್ನನ್ನು ಮಾತನಾಡಿಸಿದರೂ ನನಗೆ ಅರ್ಥವಾಗುತ್ತಿರಲಿಲ್ಲ. ತಿಳಿದರೂ ಅದಕ್ಕೆ ಉತ್ತರವನ್ನು ಕೊಡುವುದಕ್ಕೆ ಬರುತ್ತಿರಲಿಲ್ಲ. ಉಚ್ಚರಿಸುವುದಕ್ಕೆ ಮುಂಚೆ ಪ್ರತಿಯೊಂದು ವಾಕ್ಯವನ್ನೂ ಮನಸ್ಸಿನಲ್ಲಿಯೇ ರಚಿಸಿಕೊಳ್ಳಬೇಕಾಗಿದ್ದಿತು. ನನಗೆ ಚಮಚ ಮತ್ತು ಚೂರಿಗಳನ್ನು ಉಪಯೋಗಿಸಿ ಊಟಮಾಡುವುದಕ್ಕೆ ಬರುತ್ತಿರಲಿಲ್ಲ. ಯಾವ ಪದಾರ್ಥದಲ್ಲಿ ಮಾಂಸವಿದೆ, ಇಲ್ಲ ಎನ್ನುವುದನ್ನು ಕೇಳುವುದಕ್ಕೆ ಕೂಡ ಧೈರ್ಯವಿರುತ್ತಿರಲಿಲ್ಲ. ಆದುದರಿಂದ ನಾನು ಇತರರೊಡನೆ ಮೇಜಿನಮೇಲೆ ಊಟಮಾಡುವುದಕ್ಕೆ ಹೋಗದೆ ನನ್ನ ಕೊಠಡಿಯಲ್ಲಿಯೇ ಊಟಮಾಡುತ್ತಿದ್ದೆನು. ನನ್ನ ಜೊತೆಯಲ್ಲಿ ತಂದಿದ್ದ ಮಿಠಾಯಿ ಮತ್ತು ಹಣ್ಣುಗಳೇ ಮುಖ್ಯವಾಗಿ ನನ್ನ ಆಹಾರ. ಮುಜುಮ್‌ದಾರರಿಗೋ ಎಳ್ಳಷ್ಟೂ ಸಂಕೋಚವಿರಲಿಲ್ಲ. ಅವರು ಎಲ್ಲರೊಡನೆಯೂ ಸೇರುತ್ತಿದ್ದರು. ನಿರಾತಂಕವಾಗಿ ಜಹಜಿನ ಪಡಸಾಲೆಯಲ್ಲಿ ಓಡಾಡುತ್ತಿದ್ದರು. ನಾನಾದರೋ ಹಗಲೆಲ್ಲಾ ನನ್ನ ಕೊಠಡಿಯಲ್ಲೇ ಕುಳಿತುಕೊಂಡಿರುತ್ತಿದ್ದೆನು. ಹೆಚ್ಚು ಜನವಿಲ್ಲದಿದ್ದಾಗಮಾತ್ರ ಧೈರ್ಯಮಾಡಿ ಅಂಗಳದಲ್ಲಿ

ಸ್ವಲ್ಪಹೊತ್ತು ಇದ್ದು ಹಿಂತಿರುಗಿ ಬಂದುಬಿಡುತ್ತಿದ್ದೆನು. ಮುಜುವರ್ ದಾರರು ಎಲ್ಲರ ಜೊತೆಯಲ್ಲೂ ಸೇರಬೇಕೆಂದೂ ಸಂಕೋಚವಿಲ್ಲದೆ ಮಾತುಕತೆಯಾಡಬೇಕೆಂದೂ ನನಗೆ ಹೇಳುತ್ತಿದ್ದರು. ವಕೀಲರಿಗೆ ದೊಡ್ಡ ಗಂಟಲಿರಬೇಕೆಂದು ಹೇಳಿ ವಕೀಲಿಕೆಲಸದಲ್ಲಿ ತಮಗಿದ್ದ ಅನುಭವವನ್ನು ವಿವರಿಸುತ್ತಿದ್ದರು. "ಇಂಗ್ಲಿಷು ಭಾಷೆಯು ನಮ್ಮ ಭಾಷೆಯಲ್ಲವೆನ್ನುವುದೇನೋ ನಿಜ; ಅದನ್ನು ಮಾತನಾಡುವುದರಲ್ಲಿ ತಪ್ಪುಗಳಾದರೂ ಧೈರ್ಯಗುಂದದೆ ಮಾತನಾಡುವುದನ್ನು ಅಭ್ಯಾಸಮಾಡಬೇಕು" ಎಂದು ಹೇಳುವರು. ಆದರೆ ನನ್ನ ಮುಖ ಹೇಡಿತನವನ್ನು ನಾನು ಜಯಿಸುವುದಕ್ಕೆ ಆಗಲಿಲ್ಲ.

ನನ್ನಲ್ಲಿ ಮಮತೆಯಿಟ್ಟು ಐರೋಪ್ಯ ಪ್ರಯಾಣಿಕರೊಬ್ಬರು ನನ್ನೊಡನೆ ಮಾತುಕತೆಯಾಡಲು ಆರಂಭಿಸಿದರು. ಅವರು ನನಗಿಂತ ವಯಸ್ಸಿನಲ್ಲಿ ದೊಡ್ಡವರು. ನಾನು ತಿನ್ನುವುದೇನು, ನನ್ನ ಉದ್ಯೋಗವೇನು, ನಾನು ಹೋಗುತ್ತಿದ್ದುದೆಲ್ಲಿಗೆ, ಇದೇ ಮುಂತಾಗಿ ಪ್ರಶ್ನೆಮಾಡಿದರು. ಮೇಜಿನಮೇಲೆಯೇ ಊಟಮಾಡೆಂದು ನನಗೆ ಹೇಳಿದರು. ನಾನು ಮಾಂಸವನ್ನು ಖಂಡಿತವಾಗಿ ತಿನ್ನುವುದಿಲ್ಲವೆಂದು ಕೇಳಿ ನಕ್ಕು ಅವರು ದಯಾಭಾವದಿಂದ, "ಇಲ್ಲಿಯವರೆಗೇನೋ (ನಾವು ಆಗ ಕೆಂಪುಸಮುದ್ರದಲ್ಲಿದ್ದೆವು) ಚಿಂತೆಯಿಲ್ಲ. ಆದರೆ ಬಿಸ್ಕೇಕೊಲ್ಲಿಯಲ್ಲಿ ನಿನ್ನ ಅಭಿಪ್ರಾಯವನ್ನು ಬದಲಾಯಿಸಬೇಕಾಗುತ್ತದೆ. ಇಂಗ್ಲೆಂಡಿನಲ್ಲಂತೂ ಎಷ್ಟು ಚಳಿಯೆಂದರೆ ಮಾಂಸವನ್ನು ತಿನ್ನದೆ ಜೀವಿಸಿರುವುದಕ್ಕೇ ಆಗುವುದಿಲ್ಲ." ಎಂದು ಹೇಳಿದರು.

"ಅಲ್ಲಿ ಮಾಂಸಾಹಾರ ಮಾಡದೆ ಜೀವಿಸುವುದು ಸಾಧ್ಯವೆಂದು ನಾನು ಕೇಳಿದ್ದೇನೆ." ಎಂದು ನಾನು ಹೇಳಿದೆನು.

"ಅದು ಎಲ್ಲಾ ಸುಳ್ಳು. ಮಾಂಸವನ್ನು ತಿನ್ನದೆ ಅಲ್ಲಿ ವಾಸಿಸುತ್ತಿರುವರಾರನ್ನೂ ನಾನು ಕಾಣೆ. ನೋಡು, ನಾನು ಮದ್ಯವನ್ನು ಕುಡಿದರೂ ನೀನು ಹಾಗೆ ಮಾಡೆಂದು ನಿನಗೆ ಹೇಳುತ್ತೇನೆಯೇ? ಆದರೆ ನೀನು ಮಾಂಸವನ್ನು ತಿನ್ನಬೇಕೆಂದೇ ನನ್ನ ಅಭಿಪ್ರಾಯ. ಏಕೆಂದರೆ ಅದಿಲ್ಲದೆ ಜೀವಿಸಿರುವುದೇ ಸಾಧ್ಯವಲ್ಲ." ಎಂದು ಹೇಳಿದನು.

''ನೀವು ಹೀಗೆ ಸಲಹೆ ಕೊಟ್ಟುದು ಉಪಕಾರವೇ ಸರಿ. ಆದರೆ ಮಾಂಸವನ್ನು ಮುಟ್ಟುವುದಿಲ್ಲವೆಂದು ನಮ್ಮ ತಾಯಿಗೆ ಮಾತು ಕೊಟ್ಟಿರುವುದರಿಂದ ನಾನು ಆ ವಿಚಾರ ಯೋಚನೆಯನ್ನೇ ಮಾಡಲಾಗುವುದಿಲ್ಲ. ಮಾಂಸ ತಿನ್ನದೆ ಇರುವುದಕ್ಕೆ ಆಗುವುದಿಲ್ಲವಾದರೆ ಹಿಂದೂಸ್ಥಾನಕ್ಕೆ ಹಿಂತಿರುಗುವೆನೇ ಹೊರತು ನಾನು ಸೀಮೆಯಲ್ಲಿ ನಿಲ್ಲುವದಕ್ಕಾಗಿ ಎಂದಿಗೂ ಮಾಂಸವನ್ನು ತಿನ್ನುವುದಿಲ್ಲ.'' ಎಂದು ಹೇಳಿದೆನು.

ಬಿಸ್ಕೆಕೊಲ್ಲಿಯನ್ನು ಒಳಹೊಕ್ಕೆವು. ನನಗೆ ಅಲ್ಲಿ ಮಾಂಸವನ್ನಾಗಲಿ ಮದ್ಯವನ್ನಾಗಲಿ ಸೇವಿಸಬೇಕಾದ ಆವಶ್ಯಕತೆಯೇನೂ ಕಂಡುಬರಲಿಲ್ಲ. ನಾನು ಮಾಂಸವನ್ನು ತಿನ್ನದೆ ಇರುವುದಕ್ಕೆ ಸಾಕ್ಷೀಪತ್ರಗಳನ್ನು ಒಟ್ಟುಗೂಡಿಸಿ ಇಟ್ಟುಕೊಂಡಿರಬೇಕೆಂದು ನನಗೆ ಹೇಳಿದ್ದರು. ಆದುದರಿಂದ ನಾನು ಈ ಐರೋಪ್ಯ ಮಿತ್ರರನ್ನು ಅಂತಹದೊಂದು ಪತ್ರವನ್ನು ಕೊಡಬೇಕೆಂದು ಕೇಳಿದೆನು. ಅವರು ಸಂತೋಷದಿಂದ ಬರೆದುಕೊಟ್ಟರು. ಅದನ್ನು ನಾನು ಕೆಲವುಕಾಲ ಜೋಪಾನದಿಂದಿಟ್ಟಿದ್ದೆನು. ಆದರೆ ಮಾಂಸಾಹಾರಿಗಳು ಕೂಡ ಶ್ರಮವಿಲ್ಲದೆ ಇಂತಹ ಪತ್ರವನ್ನು ಸಂಪಾದಿಸಬಹುದೆಂದು ನನಗೆ ಆಮೇಲೆ ತಿಳಿದೊಡನೆಯೇ ನನಗೆ ಇದರಲ್ಲಿದ್ದ ಮೋಹವು ಮಾಯವಾಯಿತು. ನನ್ನ ಮಾತಿನಲ್ಲಿ ನಂಬಿಕೆಯಿಲ್ಲದ್ದಿದ್ದರೆ ಈ ರೀತಿಯಾದ ಸಾಕ್ಷೀಪತ್ರವನ್ನಿಟ್ಟುಕೊಂಡು ಪ್ರಯೋಜನವೇನು?

ಅಂತು ಸೌಥಾಂಪಟನ್ ರೇವನ್ನು ಸೇರಿದೆವು. ನನಗೆ ನೆನಪಿರುವ ಮಟ್ಟಿಗೆ ಆ ದಿನ ಶನಿವಾರವಾಗಿದ್ದಿತು. ಜಹಜಿನಲ್ಲಿ ನಾನು ಕರಿಯ ಅಂಗಿ ಷರಾಯಿಗಳನ್ನು ಹಾಕಿಕೊಂಡಿದ್ದೆನು. ಜಹಜಿನಿಂದ ಇಳಿಯುತ್ತಲು ಹಾಕಿಕೊಳ್ಳುವುದಕ್ಕಾಗಿ ನನ್ನ ಸ್ನೇಹಿತರು ತಯಾರುಮಾಡಿಸಿದ್ದ ಬಿಳಿಯ ತುಪ್ಪಟದ ಅಂಗಿ ಷರಾಯಿಗಳನ್ನು ತೆಗೆದಿಟ್ಟಿದ್ದೆನು. ಇವುಗಳನ್ನು ಹಾಕಿಕೊಂಡರೆ ಚೆನ್ನಾಗಿರುವುದೆಂದು ತಿಳಿದು ಈ ಬಟ್ಟೆಗಳನ್ನು ಧರಿಸಿ ಭೂಮಿಯಮೇಲೆ ಕಾಲಟ್ಟೆನು. ಆಗ ಸೆಪ್ಟೆಂಬರ್ ತಿಂಗಳ ಕೊನೆ. ಸುತ್ತಮುತ್ತಲು ನೋಡಲು ಇನ್ನೊಬ್ಬರೂ ಈ ರೀತಿಯಾದ ಉಡುಪನ್ನು ಹಾಕಿಕೊಂಡಿರಲಿಲ್ಲ. ನನ್ನ ಸಾಮಾನುಗಳನ್ನು ಗ್ರಿಂಡ್ಲೆ ಕಂಪೆನಿಯ ನೌಕರನೊಬ್ಬನ ವಶಕ್ಕೆ ಕೊಟ್ಟೆನು. ಇತರರೂ ಹಾಗೆಯೇ ಮಾಡಿದುದ

ರಿಂದ ನಾನೂ ಅವರನ್ನು ಅನುಸರಿಸಬೇಕೆಂದು ಬೀಗದಕ್ಕೈಗಳನ್ನೂ ಅವನ ವಶಕ್ಕೆ ಕೊಟ್ಟೆನು.

ನನ್ನ ಬಳಿ ನಾಲ್ಕು ಪರಿಚಯ ಪತ್ರಗಳಿದ್ದುವು—ಡಾಕ್ಟರ್ ಪ್ರಾಣ ಜೀವನ ಮೆಹತಾ, ಶ್ರೀ ದಲಪತಿರಾಮುಶುಕ್ಲ, ರಾಜಕುಮಾರ ರಣಜಿತ ಸಿಂಗಜೀ ಮತ್ತು ದಾದಾಬಾಯಿ ನವರೋಜೀ—ಇವರುಗಳ ಹೆಸರಿಗೆ ಈ ಪತ್ರಗಳು ಬರೆಯಲ್ಪಟ್ಟಿದ್ದುವು. ನಾನು ಡಾ|| ಮೆಹತಾರವರಿಗೆ ಸೌಂಥಾಂಪ್ಟನ್ನಿಂದ ತಂತಿ ಕೊಟ್ಟೆನು. ಜಹಜಿನಲ್ಲಿ ಯಾರೋ ಲಂಡನಿನಲ್ಲಿ ವಿಕ್ಟೋರಿಯಾ ಹೋಟಲಿನಲ್ಲಿ ಹೋಗಿ ಇಳಿಯಬೇಕೆಂದು ಸಲಹೆ ಕೊಟ್ಟಿದ್ದರು. ಅದೇ ರೀತಿಯಾಗಿ ಮಜುಮುದಾರರೂ ನಾನೂ ಅಲ್ಲಿಗೆ ಹೋದೆವು. ಬಿಳಿಯ ಉಡುಪನ್ನು ಧರಿಸಿದ್ದವನು ನಾನೊಬ್ಬನೇ ಎನ್ನುವುದರಿಂದ ಆಗಲೇ ನನಗೆ ಅರ್ಧಪ್ರಾಣ ಹೋದಹಾಗೆ ಆಗಿದ್ದಿತು. ಮಾರನೆಯ ದಿನ ಭಾನುವಾರವಾದುದರಿಂದ ಸೋಮವಾರದವರೆಗೂ ನನ್ನ ಸಾಮಾನುಗಳು ನನಗೆ ತಲಪುವುದಿಲ್ಲವೆಂದು ಗೊತ್ತಾಗಲು ನನಗೆ ಪ್ರಾಣ ಪೂರ್ತಿಯಾಗಿ ಹೋದಹಾಗೆಯೇ ಆಯಿತು.

ಸಂಜೆ ಸುಮಾರು ಎಂಟುಗಂಟೆಯ ಹೊತ್ತಿಗೆ ನನ್ನನ್ನು ನೋಡಲು ಡಾ|| ಮೆಹತಾರವರು ಬಂದರು. ಅವರು ನನ್ನನ್ನು ಬಹಳ ಸಂತೋಷದಿಂದ ಎದುರುಗೊಂಡು ನನ್ನ ಬಿಳಿಯ ಉಡುಪನ್ನು ನೋಡಿ ನಕ್ಕರು. ಹೀಗೆ ಮಾತುಕತೆ ನಡೆಯುತ್ತಿರುವಾಗ ನಾನು ಅವರ ರೇಷ್ಮೆಯ ಟೋಪಿಯನ್ನು ತೆಗೆದುಕೊಂಡು ಅದು ಎಷ್ಟು ನಯವಾಗಿದೆಯೆನ್ನುವುದನ್ನು ನೋಡುವುದಕ್ಕೋಸ್ಕರ ಅದರಮೇಲೆ ಕೈಯಾಡಿಸಿದೆನು. ಹಾಗೆ ಮಾಡಿದುದರಿಂದ ರೇಷ್ಮೆಯೆಲ್ಲಾ ಮೇಲಕ್ಕೆದ್ದುಬಿಟ್ಟಿತು. ಡಾ|| ರವರು ಇದನ್ನು ನೋಡಿ ಸ್ವಲ್ಪ ಸಿಟ್ಟಾದವರಂತೆ ಬಂದು ನಾನು ಮಾಡುತ್ತಿದ್ದುದನ್ನು ನಿಲ್ಲಿಸಿದರು. ಆದರೆ ರೇಷ್ಮೆಯು ಸರಿಹೋಗಲಿಲ್ಲ. ಮುಂದೆ ಹೇಗೆ ನಡೆದುಕೊಳ್ಳಬೇಕೆನ್ನುವುದಕ್ಕೆ ಇದು ಎಚ್ಚರಿಕೆ ಕೊಟ್ಟಂತಾಯಿತು. ಐರೋಪ್ಯರ ರೀತಿನೀತಿಗಳನ್ನು ಅಭ್ಯಾಸಮಾಡುವುದಕ್ಕೆ ಇದೇ ಮೊದಲೆಂದು ಹೇಳಬಹುದು. ಡಾ|| ಮೆಹತಾರವರು ನಗುತ್ತಾ ಈ ವಿಚಾರವಾಗಿ ನನಗೆ ಸಲಹೆಯನ್ನು ಕೊಟ್ಟರು: "ಇತರರ ವಸ್ತುಗಳನ್ನು

ಮುಟ್ಟಬಾರದು. ಪರಿಚಯವಾದೊಡನೆಯೇ ನಾವು ಹಿಂದೂಸ್ಥಾನದಲ್ಲಿ ಪ್ರಶ್ನೆಗಳನ್ನು ಕೇಳುವಹಾಗೆ ಕೇಳಬಾರದು. ಮಾತುಕತೆಯಾಡುವಾಗ ಗಟ್ಟಿಯಾಗಿ ಮಾತನಾಡಬಾರದು. ಹಿಂದೂಸ್ಥಾನದಲ್ಲಿ ಐರೋಪ್ಯರೊಡನೆ ಮಾತನಾಡುವಾಗ ನಾವು ಉಪಯೋಗಿಸುವ 'ಸರ್' ಎನ್ನುವುದನ್ನು ಇಲ್ಲಿ ಉಪಯೋಗಿಸುವುದು ಅನಾವಶ್ಯಕ. ಈ ಪದವನ್ನು ಇಲ್ಲಿ ಜವಾನರು ಮತ್ತು ಸಣ್ಣಪುಟ್ಟ ಅಧಿಕಾರಿಗಳು ಮಾತ್ರ ತಮ್ಮ ಯಜಮಾನರೊಡನೆ ಮಾತನಾಡುವಾಗ ಉಪಯೋಗಿಸುತ್ತಾರೆ.'' ಇತ್ಯಾದಿ. ಮತ್ತು ಹೋಟಲಿನಲ್ಲಿ ಇರುವುದಕ್ಕೆ ಹೆಚ್ಚು ಖರ್ಚು ತಗಲುವುದೆಂದೂ ಯಾರ ಸಂಸಾರದೊಂದಿಗಾದರೂ ಇರುವುದು ಉತ್ತಮವೆಂದೂ ಹೇಳಿ ಆ ವಿಚಾರವನ್ನು ಸೋಮವಾರ ನೋಡಿಕೊಳ್ಳೋಣವೆಂದು ತಿಳಿಸಿ ಡಾ|| ಮೆಹತಾರವರು ಹೊರಟುಹೋದರು.

ಮಜುಮದಾರರಿಗೂ ನನಗೂ ಹೋಟಲು ಸರಿಬೀಳಲಿಲ್ಲ. ಅದೂ ಅಲ್ಲದೆ ಅಲ್ಲಿಯ ವೆಚ್ಚವೂ ಹೆಚ್ಚಾಗಿದ್ದಿತು. ಮಾಲ್ಟಾದ್ವೀಪದಿಂದ ಸಿಂಧಿ ಪ್ರಯಾಣಿಕರೊಬ್ಬರು ನಮ್ಮೊಡನೆ ಬಂದಿದ್ದರು. ಅವರು ಲಂಡನ್ ಪಟ್ಟಣಕ್ಕೆ ಹೊಸಬರಾಗಿರಲಿಲ್ಲವಾದುದರಿಂದ ನಮಗಾಗಿ ಅವರು ಬಾಡಿಗೆ ಕೊಠಡಿಯನ್ನು ಗೊತ್ತುಮಾಡಿಕೊಡುತ್ತೇವೆಂದು ಹೇಳಿದರು. ನಾವು ಇದಕ್ಕೆ ಒಪ್ಪಿದೆವು. ಸೋಮವಾರದ ದಿನ ನಮ್ಮ ಸಾಮಾನು ಬಂದೊಡನೆಯೇ ಹೋಟಲಿಗೆ ಕೊಡಬೇಕಾದ ಹಣವನ್ನು ಕೊಟ್ಟು ನಮ್ಮ ಸಿಂಧೀ ಮಿತ್ರರು ಗೊತ್ತುಮಾಡಿದ್ದ ಕೊಠಡಿಗೆ ಹೋದೆವು. ನಾನು ಹೋಟಲಿಗೆ ಕೊಡಬೇಕಾದ ಹಣವು ಮೂರುಪೌಂಡಿನ (ಸುಮಾರು ೪೫ ರೂ.) ವರೆಗೆ ಬಂದಿತೆಂದು ನನಗೆ ನೆನಪಿದೆ. ಇದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಅಷ್ಟು ಕೊಟ್ಟಿದ್ದರೂ ನನ್ನ ಹಸಿವು ಬೇರೆ ಹೋಗಿರಲಿಲ್ಲ. ಏಕೆಂದರೆ ನನಗೆ ಏನೂ ಸೇರುತ್ತಿರಲಿಲ್ಲ. ಒಂದು ತಿಂಡಿಯು ಸರಿಯಾಗಿಲ್ಲವೆಂದು ಇನ್ನೊಂದನ್ನು ತರಿಸುತ್ತಿದ್ದೆನು. ಆದರೆ ಎರಡರ ಬೆಲೆಯನ್ನೂ ಕೊಡಬೇಕಾಗಿದ್ದಿತು. ನಿಜವಾದ ಸಂಗತಿಯೇನೆಂದರೆ ನಾನು ಮುಂಬಯಿಯಿಂದ ತೆಗೆದುಕೊಂಡು ಬಂದಿದ್ದ ಪದಾರ್ಥಗಳನ್ನೇ ನಂಬಿ ಇದುವರೆಗೂ ಉಪಯೋಗಿಸುತ್ತಿದ್ದೆನು.

ಹೊಸಮನೆಯಲ್ಲಿ ಕೂಡ ನನಗೆ ಮನಶ್ಶಾಂತಿಯುಂಟಾಗಲಿಲ್ಲ. ನಮ್ಮ ಮನೆಯ ನೆನಪೂ ನಮ್ಮ ದೇಶದ ನೆನಪೂ ಯಾವಾಗಲೂ ಬರುತ್ತಿದ್ದಿತು. ನಮ್ಮ ತಾಯಿಯ ಪ್ರೇಮಮಯಮೂರ್ತಿಯು ಹಗಲೆಲ್ಲಾ ನನ್ನ ಕಣ್ಣೆದುರಿಗೆ ನಿಂತಿರುವಂತಿದ್ದಿತು. ರಾತ್ರಿಯಲ್ಲಿ ಮನೆಯವರ ಜ್ಞಾಪಕವು ಅನೇಕ ವಿಧವಾಗಿ ಬಂದು ಕಣ್ಣೀರು ಕೆನ್ನೆಯಮೇಲೆ ಸುರಿದು ನಿದ್ರೆಗೆ ಅವಕಾಶವೇ ಇರುತ್ತಿರಲಿಲ್ಲ. ಈ ದುಃಖವನ್ನೆಲ್ಲಾ ಇತರರೆದುರಿಗೆ ಹೇಳಿಕೊಳ್ಳುವಹಾಗಿರಲಿಲ್ಲ. ಒಂದುವೇಳೆ ಹೇಳಿಕೊಂಡರೂ ಫಲವೇನು ? ಈ ಮನಃಕ್ಲೇಶದ ಉಪಶಮನಕ್ಕೆ ನನಗೆ ಮಾರ್ಗವೇ ಗೊತ್ತಿರಲಿಲ್ಲ. ಜನರೂ ಅವರ ರೀತಿನೀತಿಗಳೂ ಕಡೆಗೆ ಅವರ ವಸತಿಗಳೂ ಎಲ್ಲವೂ ವಿಚಿತ್ರವಾಗಿ ಕಾಣುತ್ತಿದ್ದುವು. ಆಂಗ್ಲೇಯ ಸದ್ಗೃಹಸ್ಥರ ಮಧ್ಯೆ ನಡೆದುಕೊಳ್ಳುವ ವಿದ್ಯೆಯಲ್ಲಿ ನಾನು ಕೇವಲ ಎಳೆಮಗುವಾಗಿದ್ದೆನು. ಆದುದರಿಂದ ಈ ವಿಷಯದಲ್ಲಿ ನಾನು ಸದಾ ಎಚ್ಚರಿಕೆಯಿಂದಿರಬೇಕಾಗಿದ್ದಿತು. ಇದರ ಜೊತೆಗೆ ಮಾಂಸವನ್ನು ಸೇವಿಸುವುದಿಲ್ಲವೆಂದು ನಾನು ಮಾಡಿದ್ದ ಪ್ರತಿಜ್ಞೆಯ ತೊಂದರೆ ಬೇರೆ. ನಾನು ತಿನ್ನಬಹುದಾದ ಪದಾರ್ಥಗಳು ಕೂಡ ಶುಷ್ಕವಾಗಿಯೂ ನೀರಸವಾಗಿಯೂ ಇರುತ್ತಿದ್ದುವು. ಸೀಮೆಯಲ್ಲಿರುವುದು ನನಗೆ ಸರಿಹೋಗಲಿಲ್ಲ. ಹಿಂದೂಸ್ಥಾನಕ್ಕೆ ಹಿಂತಿರುಗುವ ಯೋಚನೆಯನ್ನೇ ಮಾಡುವಂತಿರಲಿಲ್ಲ. ಹೀಗೆ ನಾನು ಉಭಯ ಸಂಕಟಕ್ಕೆ ಸಿಕ್ಕಿಬಿದ್ದೆನು. "ಇಲ್ಲಿಗೆ ಬಂದುದಂತೂ ಆಯಿತು. ನೀನು ಮೂರು ವರ್ಷಗಳನ್ನು ಹೇಗಾದರೂ ಕಳೆಯಲೇಬೇಕು." ಎಂದು ನನ್ನ ಅಂತರ್ವಾಣಿಯು ನುಡಿಯಿತು.



೧೪

# ನಾನು ಮನಃಪೂರ್ವಕವಾಗಿ ಶಾಕಾಹಾರಿಯಾದುದು

ಡಾ|| ಮೆಹತಾರವರು ನನ್ನನ್ನು ನೋಡುವುದಕ್ಕೋಸ್ಕರ ಸೋಮವಾರ ವಿಕ್ಟೋರಿಯಾ ಹೋಟಲಿಗೆ ಹೋದರು. ಅಲ್ಲಿ ನಾವಿಲ್ಲದಿರುವುದನ್ನು ಕಂಡು ನಮ್ಮ ಹೊಸ ವಿಳಾಸವನ್ನು ತಿಳಿದುಕೊಂಡು ನಮ್ಮ ಕೊಠಡಿಗೆ ಬಂದರು. ಕೇವಲ ಅವಿವೇಕದಿಂದ ನಾನು ಜಹಜಿನಲ್ಲಿ ಹುಳುಕಡ್ಡಿಯನ್ನು ಸಂಪಾದಿಸಿದ್ದೆನು. ಜಹಜಿನಲ್ಲಿ ಸ್ನಾನಕ್ಕೂ ಬಟ್ಟೆಯೊಗೆಯುವುದಕ್ಕೂ ಸಮುದ್ರದ ನೀರನ್ನು ಉಪಯೋಗಿಸಬೇಕಾಗುತ್ತಿದ್ದಿತು. ಉಪ್ಪುನೀರಿನಲ್ಲಿ ಸಾಬೂನು ಕರಗುವುದಿಲ್ಲ. ನಾನು ಸಾಬೂನನ್ನು ಉಪಯೋಗಿಸುವುದು ಕೇವಲ ನಾಗರಿಕತೆಯ ಚಿಹ್ನೆಯೆಂದು ತಿಳಿದುಕೊಂಡು ಅದನ್ನು ಮೈಗೆ ಹಾಕಿಕೊಳ್ಳಲು ಅದರಿಂದ ಶರೀರವು ನಿರ್ಮಲವಾಗುವುದರ ಬದಲು ಮೈಯೆಲ್ಲಾ ಅಂಟಾಗಿ ಹುಳುಕಡ್ಡಿಯೆದ್ದಿತು. ಇದನ್ನು ಡಾ|| ಮೆಹತಾರವರಿಗೆ ತೋರಿಸಲು ಅವರು 'ಎಸೆಟಿಕ್ ಆಸಿಡ್' ಎಂಬ ದ್ರಾವಕವನ್ನು ಹಚ್ಚಬೇಕೆಂದು ಹೇಳಿದರು. ಅದನ್ನು ಉಪಯೋಗಿಸುತ್ತಲು ಉಂಟಾದ ಉರಿಯಿಂದ ನಾನು ಅತ್ತುದು ನನಗೆ ನೆನಪಿದೆ. ಡಾ|| ಮೆಹತಾರವರು ನಾವಿದ್ದ ಕೊಠಡಿಯನ್ನೂ ಅದರ ವ್ಯವಸ್ಥೆಯನ್ನೂ ನೋಡಿ ತಲೆಯಲ್ಲಾಡಿಸಿ ''ಈ ಸ್ಥಳದಲ್ಲಿರುವುದರಿಂದೇನೂ ಪ್ರಯೋಜನವಿಲ್ಲ. ಓದುವ ಉದ್ದೇಶಕ್ಕಿಂತ ಹೆಚ್ಚಾಗಿ ಆಂಗ್ಲೇಯ ಜೀವನದ ರೀತಿನೀತಿಗಳ ಅನುಭವವನ್ನು ಸಂಪಾದಿಸುವುದಕ್ಕಾಗಿಯೇ ನಾವು ವಿಲಾಯತಿಗೆ ಬರುವುದು. ಆದುದರಿಂದ ಯಾವುದಾದರೂ ಕುಟುಂಬದೊಂದಿಗೆ ನೀನು ವಾಸಿಸಬೇಕು. ಆದರೆ ನನಗೆ ತೋರುವುದೇನೆಂದರೆ ಸ್ವಲ್ಪ ಅನುಭವವನ್ನು ಸಂಪಾದಿಸುವುದಕ್ಕೋಸ್ಕರ ................ರ ಜೊತೆಯಲ್ಲಿ

ನೀನು ಇರುವುದು ಒಳ್ಳೆಯದೆಂದು ತೋರುತ್ತದೆ. ನಾನು ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ.'' ಎಂದು ಹೇಳಿದರು.

ನಾನು ಅವರ ಸೂಚನೆಗೆ ಕೃತಜ್ಞತೆಯಿಂದ ಒಪ್ಪಿ ಆ ಸ್ನೇಹಿತರ ಮನೆಗೆ ಹೋದೆನು. ಅವರು ನನ್ನನ್ನು ಬಹಳ ಆದರದಿಂದಲೂ ಶ್ರದ್ಧೆಯಿಂದಲೂ ಕಂಡರು. ನನ್ನನ್ನು ತಮ್ಮ ತಮ್ಮನೆಂದೆಣಿಸಿ ಇಂಗ್ಲಿಷರ ರೀತಿನೀತಿಗಳನ್ನು ಹೇಳಿಕೊಟ್ಟು, ಇಂಗ್ಲಿಷಿನಲ್ಲಿ ಮಾತನಾಡುವುದನ್ನು ಕಲಿಸಿಕೊಟ್ಟರು. ಆದರೆ ನನ್ನ ಊಟದ ವಿಷಯವು ಬಹಳ ಕಷ್ಟದ ಮಾತಾಯಿತು. ಉಪ್ಪು ಮತ್ತು ಮಸಾಲೆ ಪದಾರ್ಥಗಳನ್ನು ಹಾಕದೆ ಬೇಯಿಸಿದ ತರಕಾರಿಯು ನನಗೆ ಸೇರುತ್ತಿರಲಿಲ್ಲ. ನನ್ನ ಊಟಕ್ಕೆ ಏನು ಸಿದ್ಧಮಾಡಬೇಕೆನ್ನುವುದು ಆ ಮನೆಯ ಯಜಮಾನಿಗೆ ತೋಚುತ್ತಿರಲಿಲ್ಲ. ಬೆಳಿಗ್ಗಿಯ ಊಟಕ್ಕೇನೋ ತೋಕೆಗೋಧಿಯ ಅಂಬಲಿಯನ್ನು ಮಾಡುತ್ತಿದ್ದರು. ಇದರಿಂದ ಹೊಟ್ಟೆ ಅಷ್ಟು ಇಷ್ಟು ತುಂಬಿದರೂ ಮಧ್ಯಾಹ್ನದ ಮತ್ತು ಸಂಜೆಯ ಊಟದಿಂದ ನನ್ನ ಹಸಿವು ಹೋಗುತ್ತಲೇ ಇರಲಿಲ್ಲ. ನನ್ನ ಮಿತ್ರರು ಮಾಂಸಾಹಾರಮಾಡಬೇಕೆಂದು ನನಗೆ ಪ್ರತಿನಿತ್ಯವೂ ವಿವೇಕ ಹೇಳುತ್ತಿದ್ದರು. ನಾನು ನಮ್ಮ ತಾಯಿಗೆ ಭಾಷೆಕೊಟ್ಟಿದ್ದೇನೆಂದು ಹೇಳಿ ಸುಮ್ಮನಾಗಿಬಿಡುತ್ತಿದ್ದೆನು. ಮಧ್ಯಾಹ್ನದ ಊಟಕ್ಕೆ ರೊಟ್ಟಿ, ಬಸಳೆಸೊಪ್ಪಿನ ಪಲ್ಯ ಮತ್ತು ಮುರಬ್ಬ ಇವುಗಳನ್ನು ಬಡಿಸುತ್ತಿದ್ದರು. ಸಂಜೆಗೂ ಇವೇ. ನನ್ನ ಹೊಟ್ಟೆ ದೊಡ್ಡಹೊಟ್ಟೆ. ನಾನು ಎರಡು ಮೂರುಚಾರು ರೊಟ್ಟಿಯನ್ನು ಮಾತ್ರ ತಿನ್ನುತ್ತಿದ್ದೆನು. ಹೆಚ್ಚಿಗೆ ಕೇಳುವುದಕ್ಕೆ ನಾಚಿಕೆಯಾಗುತ್ತಿದ್ದಿತು. ಹಾಗೆ ಕೇಳುವುದು ಚೆನ್ನಾಗಿರುವುದಿಲ್ಲವೆಂದು ತೋರುತ್ತಿದ್ದಿತು. ಇವೆಲ್ಲದರ ಜೊತೆಗೆ ಮಧ್ಯಾಹ್ನವಾಗಲಿ ರಾತ್ರಿಯಾಗಲಿ ಹಾಲು ಸಿಕ್ಕುತ್ತಿರಲಿಲ್ಲ. ಈ ಸ್ಥಿತಿಯನ್ನು ನೋಡಿ ನನ್ನ ಮಿತ್ರರಿಗೆ ಬಹಳ ಬೇಸರವಾಗಿ ಒಂದುದಿನ ಅವರು ''ನೀನು ನನ್ನ ಸ್ವಂತ ತಮ್ಮನಾಗಿದ್ದಪಕ್ಷದಲ್ಲಿ ನಿನ್ನನ್ನು ಹಿಂದಕ್ಕೆ ಕಳುಹಿಸಿಬಿಡುತ್ತಿದ್ದೆನು. ಇಲ್ಲಿಯ ಪರಿಸ್ಥಿತಿಯನ್ನು ತಿಳಿಯದ ನಿರಕ್ಷರಳಾದ ನಿಮ್ಮ ತಾಯಿಯಮುಂದೆ ನೀನುಮಾಡಿದ ಪ್ರತಿಜ್ಞೆಗೆ ಬೆಲೆಯೇನುಂಟು? ಅದು ಪ್ರತಿಜ್ಞೆಯೇ ಅಲ್ಲ. ಕಾನೂನಿನಪ್ರಕಾರ ಅದನ್ನು ಪ್ರತಿಜ್ಞೆ

ಯೆಂದು ಯಾರೂ ಒಪ್ಪುವುದಿಲ್ಲ. ಇಂತಹ ಪ್ರತಿಜ್ಞೆಯನ್ನು ನಡೆಸುವುದು ಕೇವಲ ಮೂಢತನ. ಈ ಮೊಂಡತನದಿಂದ ನಿನಗೆ ಇಲ್ಲಿ ಎಳ್ಳಷ್ಟೂ ಪ್ರಯೋಜನವಾಗುವುದಿಲ್ಲ. ಮಾಂಸವನ್ನು ತಿಂದಿರುವೆಯೆಂದೂ ಅದು ನಿನಗೆ ರುಚಿಯಾಗಿದ್ದಿತೆಂದೂ ನೀನೇ ಒಪ್ಪಿಕೊಳ್ಳುತ್ತೀಯೆ. ತಿನ್ನುವುದಕ್ಕೆ ಆವಶ್ಯಕತೆ ಇಲ್ಲದಕಡೆಯಲ್ಲಿ ತಿಂದೆ, ಕೇವಲ ಆವಶ್ಯಕತೆಯಿರುವ ಕಡೆ ತಿನ್ನುವುದಿಲ್ಲ. ಇದು ಎಲ್ಲಿಯ ನ್ಯಾಯ?'' ಎಂದರು. ಆದರೆ ನಾನು ಮಾತ್ರ ನನ್ನ ಮನಸ್ಸನ್ನು ಬದಲಾಯಿಸಲಿಲ್ಲ.

ಹಗಲೆಲ್ಲಾ ಇದೇರೀತಿಯಾಗಿ ಅವರು ಚರ್ಚಿಸಿ ನನ್ನನ್ನು ಒತ್ತಾಯಮಾಡುತ್ತಿದ್ದರು. ''ಆಗುವುದಿಲ್ಲ'' ಎಂಬುದೊಂದೇ ಸದಾ ಇದಕ್ಕೆ ನನ್ನ ಉತ್ತರ. ಅವರು ಚರ್ಚಿಸಿದಹಾಗೆಲ್ಲಾ ನನ್ನ ದೃಢತೆಯು ಹೆಚ್ಚಾಗುತ್ತಿದ್ದಿತು. ನನ್ನನ್ನು ರಕ್ಷಿಸಬೇಕೆಂದು ಪ್ರತಿನಿತ್ಯವೂ ದೇವರನ್ನು ಪ್ರಾರ್ಥಿಸುತ್ತಿದ್ದೆನು. ದೇವರು ನನ್ನಮೇಲೆ ಕೃಪೆಯಿಟ್ಟನು. ಈಶ್ವರನೆಂದರೆ ಯಾವ ವಸ್ತುವೆಂದು ನನಗೆ ತಿಳಿದಿದ್ದಿತೆಂದಲ್ಲ. ರಂಭೆಯು ನನ್ನಲ್ಲಿ ಬಿತ್ತಿದ್ದ ಭಕ್ತಿಯ ಬೀಜವು ನನ್ನಿಂದ ಈ ಕೆಲಸವನ್ನು ನಡೆಸುತ್ತಿದ್ದಿತು.

ಒಂದುದಿನ ಈ ಮಿತ್ರರು ಬೆಂಥಮ್ ಎಂಬಾತನ 'ಉಪಯೋಗವಾದ' ಎಂಬ ಪುಸ್ತಕವನ್ನು ಓದಿಹೇಳಲು ಪ್ರಾರಂಭಿಸಿದರು. ಇದನ್ನು ಕೇಳಿ ನನ್ನ ಬುದ್ಧಿಯು ಚಲಿಸದೆಹೋಯಿತು. ಭಾಷೆಯು ಕಠಿಣವಾಗಿದ್ದುದರಿಂದ ನನಗೆ ಅದನ್ನು ಅರ್ಥಮಾಡಿಕೊಳ್ಳಲು ಆಗಲಿಲ್ಲ. ಅವರು ಅದರ ಅರ್ಥವನ್ನು ತಿಳಿಯಹೇಳಹೊರಟರು. ನಾನು

'' ನೀವು ನನ್ನನ್ನು ಕ್ಷಮಿಸಬೇಕು. ಈ ಗಹನವಿಷಯಗಳು ನನ್ನ ಬುದ್ಧಿಶಕ್ತಿಯನ್ನು ಮೀರಿವೆ. ಮಾಂಸವನ್ನು ತಿನ್ನುವುದು ಆವಶ್ಯಕವೆಂದು ಒಪ್ಪಿಕೊಳ್ಳುತ್ತೇನೆ. ಆದರೆ ನಾನು ಕೊಟ್ಟಭಾಷೆಗೆ ತಪ್ಪಲಾರೆನು. ಈವಿಷಯವಾಗಿ ನಾನು ಚರ್ಚಿಸಲೂ ಆಗುವುದಿಲ್ಲ. ನಾನು ಚರ್ಚೆಯಲ್ಲಿ ನಿಮ್ಮನ್ನು ಎದುರಿಸಲಾರೆನೆಂದು ನನಗೆ ಗೊತ್ತು. ನಾನು ಮೂರ್ಖನೆಂದೋ ಹಟಮಾರಿಯೆಂದೋ ತಿಳಿದು ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿರಿ. ನೀವು ನನ್ನಲ್ಲಿಟ್ಟಿರುವ ಪ್ರೇಮದ ಮನವರಿಕೆಯು ಸಹ

ಗುಂಟು. ನೀವು ನನ್ನ ಹಿತೈಷಿಗಳೆಂದು ನನಗೆ ಗೊತ್ತು. ನನ್ನ ಪರಿಸ್ಥಿತಿಯನ್ನು ನೋಡಿ ನಿಮಗೆ ದುಃಖವಾಗುವುದರಿಂದಲೇ ನೀವು ಪದೇ ಪದೇ ಹೇಳುತ್ತಿರುವಿರೆಂದು ನನಗೆ ತಿಳಿದಿದೆ. ಆದರೆ ಇದಕ್ಕೆ ಉಪಾಯವಿಲ್ಲ. ಭಾಷೆಯೆಂದರೆ ಭಾಷೆ. ಅದಕ್ಕೆ ತಪ್ಪಲಾಗುವುದಿಲ್ಲ." ಎಂದು ಹೇಳಿದೆನು.

ನನ್ನ ಮಿತ್ರರು ಆಶ್ಚರ್ಯದಿಂದ ನನ್ನ ಕಡೆಗೆ ನೋಡಿದರು. ಆಮೇಲೆ ಪುಸ್ತಕವನ್ನು ಮುಚ್ಚಿ "ಒಳ್ಳೆಯದು, ನಾನಿನ್ನು ಚರ್ಚಿಸುವುದಿಲ್ಲ." ಎಂದು ಹೇಳಿದರು. ನನಗೆ ಸಂತೋಷವಾಯಿತು. ಇದಾದಮೇಲೆ ಅವರು ಈ ಮಾತನ್ನು ಪುನಃ ಎಂದೂ ಎತ್ತಲಿಲ್ಲ. ಆದರೆ ನನ್ನ ಸಂಬಂಧವಾಗಿ ಅವರ ಚಿಂತೆಯು ಕೊನೆಗಾಣಲಿಲ್ಲ. ಅವರು ಚುಟ್ಟಾ ಸೇದುತ್ತಿದ್ದರು; ಮತ್ತು ಮದ್ಯವನ್ನು ಸೇವಿಸುತ್ತಿದ್ದರು. ಈ ಪದಾರ್ಥಗಳಲ್ಲಿ ಯಾವುದನ್ನಾಗಲಿ ಉಪಯೋಗಿಸಬೇಕೆಂದು ಅವರು ನನಗೆ ಹೇಳಲಿಲ್ಲ. ಇಷ್ಟೇ ಅಲ್ಲ. ಅವುಗಳಸೇವನೆ ಮಾಡಬಾರದೆಂದೇ ಹೇಳುತ್ತಿದ್ದರು. ಅವರನ್ನು ಬಾಧಿಸುತ್ತಿದ್ದ ಚಿಂತೆಯೊಂದೇ ಒಂದು: ಮಾಂಸಾಹಾರವಿಲ್ಲದೆ ನಾನು ದುರ್ಬಲನಾಗಿ ಇಂಗ್ಲೆಂಡಿನಲ್ಲಿ ನಿಶ್ಚಿಂತನಾಗಿರುವುದಕ್ಕಾಗುವುದಿಲ್ಲವೆಂದು.

ಒಂದುತಿಂಗಳು ಸೀಮೆಯ ಅನುಭವವನ್ನು ಸಂಪಾದಿಸಿದುದು ಹೀಗೆ. ಈ ಮಿತ್ರರ ಮನೆಯು ರಿಚ್‌ಮಂಡಿನಲ್ಲಿದ್ದಿತು. ಅಲ್ಲಿಂದ ಲಂಡನಿಗೆ ವಾರಕ್ಕೆ ಒಂದೆರಡುಸಲಕ್ಕಿಂತ ಹೆಚ್ಚಾಗಿ ಹೋಗುವುದಕ್ಕಾಗುತ್ತಿರಲಿಲ್ಲ. ಆದುದರಿಂದ ಡಾ|| ಮೆಹತಾ ಮತ್ತು ಶ್ರೀ ದಲಪತಿರಾಮ್ ಶುಕ್ಲ ಇವರಿಬ್ಬರೂ ನಾನು ಯಾವುದಾದರೂ ಒಂದು ಕುಟುಂಬದೊಂದಿಗೆ ಇರಬೇಕೆಂದು ನಿರ್ಧರಿಸಿದರು. ಶ್ರೀ ಶುಕ್ಲರು ವೆಸ್ಟ್‌ಕೆನ್ಸಿಂಗ್ಟನ್‌ನಲ್ಲಿ ಒಬ್ಬ ಆಂಗ್ಲೋ ಇಂಡಿಯನ (ಹಿಂದೂಸ್ಥಾನದ ಸಂಬಂಧವಿರುವ ಆಂಗ್ಲೇಯ) ರ ಮನೆಯನ್ನು ಹುಡುಕಿ ನಾನು ಅಲ್ಲಿರುವುದಕ್ಕೆ ಏರ್ಪಾಡುಮಾಡಿದರು. ಆ ಮನೆಯ ಗೃಹಿಣಿಯು ವಿಧವೆಯಾಗಿದ್ದಳು. ಆಕೆಗೆ ನಾನು ಮಾಂಸತ್ಯಾಗ ಮಾಡಿರುವೆನೆಂದು ತಿಳಿಸಿದೆನು. ನನ್ನನ್ನು ಸರಿಯಾಗಿ ನೋಡಿಕೊಳ್ಳುವೆನೆಂದು ಆಕೆಯು ಹೇಳಿದಳು. ಇಲ್ಲಿಯೂ ಕೂಡ

ನಾನು ಹಸಿವು ತೀರದೆಯೇ ಇರಬೇಕಾಗಿದ್ದಿತು. ಮಿಠಾಯಿ ಮುಂತಾದ ತಿಂಡಿಗಳಿಗೆ ಊರಿಗೆ ಬರೆದಿದ್ದೆನು. ಆದರೆ ಯಾವುದೂ ಇನ್ನೂ ಬಂದಿರಲಿಲ್ಲ. ಊಟದ ಪದಾರ್ಥವೆಲ್ಲಾ ಸಪ್ಪಗಿರುತ್ತಿದ್ದಿತು. ಪ್ರತಿದಿನವೂ ಆ ಮುದುಕಿಯು "ಅಡಿಗೆಯು ಸರಿಯಾಗಿದೆಯೆ?" ಎಂದು ಕೇಳುತ್ತಿದ್ದಳು. ಆದರೆ, ಪಾಪ, ಆಕೆಯೇನು ಮಾಡಿಯಾಳು? ಯಾವಾಗಿನಂತೆಯೇ ಲಜ್ಜೆಯು ನನ್ನನ್ನು ಬಿಟ್ಟಿರದಿದ್ದುದರಿಂದ ನನ್ನೆದುರಿಗಿದ್ದುದಕ್ಕಿಂತ ಹೆಚ್ಚಾಗಿ ಕೇಳಲು ನನಗೆ ಧೈರ್ಯವಿರುತ್ತಿರಲಿಲ್ಲ. ಆಕೆಗೆ ಇಬ್ಬರು ಹೆಣ್ಣುಮಕ್ಕಳಿದ್ದರು. ಅವರು ಬಲವಂತಮಾಡಿ ಇನ್ನಷ್ಟು ರೊಟ್ಟಿಯ ಚೂರುಗಳನ್ನು ಕೊಡುತ್ತಿದ್ದರು. ಒಂದು ಇಡೀ ರೊಟ್ಟಿಯನ್ನು ತಿಂದಹೊರತು ನನ್ನ ಹೊಟ್ಟೆಯು ತುಂಬದೆಂದು, ಪಾಪ, ಅವರಿಗೇನುಗೊತ್ತು?

ಆದರೆ ಈ ಹೊತ್ತಿಗೆ ನನ್ನ ರೆಕ್ಕೆ ಬಲಿತಿದ್ದಿತು. ನಾನು ಕ್ರಮವಾಗಿ ಓದುವುದಕ್ಕೆ ಇನ್ನೂ ಪ್ರಾರಂಭಿಸಿರಲಿಲ್ಲ. ಹಾಗೂ ಹೀಗೂ ಕಷ್ಟಪಟ್ಟುಕೊಂಡು ಸಮಾಚಾರಪತ್ರಗಳನ್ನು ಓದುವುದಕ್ಕೆ ಮೊದಲು ಮಾಡಿದ್ದೆನು. ಇದು ಶ್ರೀ ಶುಕ್ಲರ ಪ್ರಭಾವ. ನಾನು ಭಾರತದೇಶದಲ್ಲಿ ವೃತ್ತಪತ್ರವನ್ನು ಎಂದೂ ಓದಿರಲಿಲ್ಲ. ಆದರೆ ಇಲ್ಲಿ ಪ್ರತಿನಿತ್ಯವೂ ಓದುವುದರಿಂದ ಇವುಗಳಲ್ಲಿ ಅಭಿರುಚಿಯನ್ನುಂಟುಮಾಡಿಕೊಳ್ಳುವ ಪ್ರಯತ್ನದಲ್ಲಿ ಸಫಲನಾದೆನು. "ಡೆಯ್ಲೀ ನ್ಯೂಸ್" "ಡೆಯ್ಲೀ ಟೆಲಿಗ್ರಾಫ್" ಮತ್ತು "ಪೆಲ್‌ಮೆಲ್ ಗೆಜೆಟ್" ಈ ಸಮಾಚಾರ ಪತ್ರಗಳನ್ನು ಪ್ರತಿನಿತ್ಯವೂ ತಿರುವಿಹಾಕುತ್ತಿದ್ದೆನು. ಇದಕ್ಕೆ ಒಂದು ತಾಸು ಕೂಡ ಹಿಡಿಯುತ್ತಿರಲಿಲ್ಲ.

ಆದುದರಿಂದ ನಾನು ತಿರುಗಾಡುವುದಕ್ಕೆ ಹೊರಟು ಶಾಕಾಹಾರದ ಹೋಟಲನ್ನು ಹುಡುಕಿಕೊಂಡು ಹೋಗುತ್ತಿದ್ದೆನು. ಮನೆಯ ಯಜಮಾನಿಯು ಲಂಡನಿನಲ್ಲಿ ಇಂಥಾ ಕೆಲವು ಸ್ಥಳಗಳಿವೆಯೆಂದು ಹೇಳಿದ್ದಳು. ದಿನವೂ ೧೦—೧೨ ಮೈಲಿ ನಡೆದು ಯಾವುದಾದರೊಂದು ಅಗ್ಗವಾದ ಹೋಟಲಿಗೆ ನುಗ್ಗಿ ಹೊಟ್ಟೆತುಂಬ ರೊಟ್ಟಿಯನ್ನು ತಿನ್ನುತ್ತಿದ್ದೆನು. ಆದರೆ ಇದರಿಂದ ಏನೂ ಸಮಾಧಾನವಾಗುತ್ತಿರಲಿಲ್ಲ. ಹೀಗೆ ತಿರುಗಾಡುತ್ತಿ

ರುವಾಗ ಒಂದು ದಿನ ಫಾರಿಂಗ್‌ಡನ್ ಬೀದಿಯಲ್ಲಿ ಶಾಕಾಹಾರದ ವಿಶ್ರಾಂತಿಗೃಹ (ಹೋಟಲು) ವೊಂದು ನನ್ನ ಕಣ್ಣಿಗೆ ಬಿದ್ದಿತು. ತನ್ನ ಬಯಕೆಯ ಪದಾರ್ಥವು ದೊರಕಿದೊಡನೆ ಮಗುವಿಗೆ ಎಷ್ಟು ಸಂತೋಷ ವಾಗುತ್ತದೆಯೋ ನನಗೂ ಆಗ ಅಷ್ಟು ಸಂತೋಷವಾಯಿತು. ಒಳಕ್ಕೆ ಹೋಗುವುದಕ್ಕೆ ಮುಂಚೆ ಬಾಗಿಲಿನ ಹತ್ತಿರ ಗಾಜಿನ ಕಿಟಿಕೆಯೊಳಗೆ ಮಾರಾಟಕ್ಕಾಗಿ ಪ್ರದರ್ಶಿಸಲ್ಪಟ್ಟಿದ್ದ ಕೆಲವು ಪುಸ್ತಕಗಳನ್ನು ನೋಡಿ ದೆನು. ಅವುಗಳಲ್ಲಿ ಸಾಲ್ಟ್ ಎಂಬಾತನು ಬರೆದ "ಸಾತ್ವಿಕಾಹಾರದ ಗುಣ" ಎಂಬುದೊಂದಾಗಿದ್ದಿತು. ಅದಕ್ಕೆ ಒಂದು ಷಿಲಿಂಗ್ (೧೨ ಆಣೆ) ಕೊಟ್ಟು ಕೊಂಡುಕೊಂಡು ಒಳಕ್ಕೆ ಹೋದೆನು. ವಿಲಾಯತಿಯನ್ನು ತಲಪಿದಮೇಲೆ ಇಂದೇ ನಾನು ಹೊಟ್ಟೆತುಂಬ ಊಟಮಾಡಿದುದು. ದೇವರು ಇಂದು ನನ್ನ ಸಹಾಯಕ್ಕೆ ಬಂದನು.

ನಾನು ಸಾಲ್ಟನ ಪುಸ್ತಕವನ್ನು ಮೊದಲಿಂದ ಕೊನೆಯವರೆಗೂ ಓದಿದೆನು. ಅದು ನನ್ನ ಮನಸ್ಸನ್ನು ಸೂರೆಗೊಂಡಿತು. ಈ ಪುಸ್ತಕ ವನ್ನು ಓದಿದಂದಿನಿಂದ ನಾನು ಮನಃಪೂರ್ವಕವಾಗಿ ಶಾಕಾಹಾರಿ ಯಾದೆನೆಂದು ಹೇಳಬಹುದು. ನಮ್ಮ ತಾಯಿಯ ಮುಂದೆ ಪ್ರತಿಜ್ಞೆ ಮಾಡಿದ ದಿನವೇ ಸುದಿನವೆಂದೆಣಿಸಿದೆನು. ಅಂದಿನವರೆಗೂ ಸತ್ಯಕ್ಕಾಗಿ ಮಾತ್ರ, ನಮ್ಮ ತಾಯಿಗೆ ಕೊಟ್ಟ ಮಾತಿನ ಸಲುವಾಗಿ ಮಾತ್ರ, ನಾನು ಮಾಂಸವನ್ನು ತ್ಯಜಿಸಿದ್ದೆನು. ಆದರೆ ಉಳಿದವರೆಲ್ಲರೂ ಮಾಂಸಾಹಾರಿ ಗಳಾಗಬೇಕೆಂದು ಇಚ್ಛಿಸುತ್ತಿದ್ದೆನಲ್ಲದೆ ಮುಂದೆ ಎಂದಾದರೂ ಒಂದು ದಿನ ನಾನು ಕೂಡ ಮುಚ್ಚುಮರೆಯಿಲ್ಲದೆ ಮಾಂಸಾಹಾರಿಯಾಗಿರುವ ಸಮಯವನ್ನು ಎದುರು ನೋಡುತ್ತಿದ್ದೆನು. ಇತರರಿಗೂ ಮಾಂಸಾ ಹಾರದ ಮಹಿಮೆಯನ್ನು ಉಪದೇಶಿಸಲೆಳಸುತ್ತಿದ್ದೆನು. ಈ ದಿನದಿಂದ ನಾನು ಮನಃಪೂರ್ವಕವಾಗಿ ಶಾಕಾಹಾರಿಯಾದೆನು. ಇದರ ತತ್ವ ವನ್ನು ಇತರರಿಗೆ ಉಪದೇಶಿಸುವುದು ನನ್ನ ಪವಿತ್ರ ಕರ್ತವ್ಯವಾಯಿತು.

## ೧೫

# ನಾನು 'ಆಂಗ್ಲೇಯ ನಾಗರಿಕ'ನಾದುದು

ಸಾತ್ವಿಕಾಹಾರದಲ್ಲಿ ನನ್ನ ನಂಬಿಕೆಯು ದಿನದಿನಕ್ಕೂ ಹೆಚ್ಚುತ್ತಾಬಂದಿತು. ಸಾಲ್ಟನ ಪುಸ್ತಕವನ್ನು ಓದಿದುದರಿಂದ ಆಹಾರವಿಷಯಕವಾದ ಪುಸ್ತಕಗಳನ್ನು ಓದಬೇಕೆಂಬ ತೀವ್ರವಾದ ಇಚ್ಛೆಯುಂಟಾಯಿತು. ದೊರಕಿದ ಪುಸ್ತಕಗಳನ್ನೆಲ್ಲಾ ಕೊಂಡುಕೊಂಡು ಓದಿದೆನು. ಇವುಗಳಲ್ಲೊಂದಾದ ಹವರ್ಡ್ ವಿಲಿಯಮ್ಸ್ ಎಂಬಾತನ 'ಆಹಾರ ನೀತಿ' ಎಂಬ ಪುಸ್ತಕವು ಮಾನುಷಾಹಾರ ವಿಷಯಕವಾದ ಜೀವನಸ್ಮೃತ್ಯಾತ್ಮಕವಾದ ಇತಿಹಾಸವಾಗಿದ್ದಿತು. ಪುರಾತನಕಾಲದಿಂದ ಇಂದಿನವರೆಗಿನ ಪೈಥಾಗೊರಾಸ್ ಮತ್ತು ಕ್ರಿಸ್ತನೇ ಮೊದಲಾಗಿ ಇಂದಿನ ಜ್ಞಾನಿಗಳು ಅವತಾರಪುರುಷರೆಲ್ಲರೂ ಶಾಕಾಹಾರಿಗಳಾಗಿದ್ದರೆಂದು ತೋರಿಸುವುದಕ್ಕೆ ಈ ಗ್ರಂಥಕರ್ತನು ಪ್ರಯತ್ನಪಟ್ಟಿದ್ದನು. ಡಾ|| ಅನ್ನಾ ಕಿಂಗ್ಸ್‌ಫರ್ಡ್ ಎಂಬಾಕೆಯ 'ಆಹಾರದ ವಿಷಯದಲ್ಲಿ ಅತ್ಯುತ್ತಮವಾದ ಮಾರ್ಗ' ಎಂಬ ಪುಸ್ತಕವೂ ಹೃದಯಂಗಮವಾಗಿದ್ದಿತು. ಇದೇರೀತಿಯಾಗಿ ಡಾ|| ಆಲಿಸನ್ನರ ಆರೋಗ್ಯರಕ್ಷಣಾ ವಿಷಯಕವಾದ ಲೇಖನಗಳಿಂದಲೂ ನಾನು ಬಹಳ ಸಹಾಯವನ್ನು ಹೊಂದಿದೆನು. ರೋಗಿಗೆ ಉಚಿತವಾದ ಆಹಾರವನ್ನು ಕೊಡುವುದರಿಂದ ರೋಗವನ್ನು ಗುಣಮಾಡುವ ಪದ್ಧತಿಯ ಪಕ್ಷಪಾತಿಗಳಿವರು. ತಾವೇ ಸ್ವಯಂ ಶಾಕಾಹಾರಿಗಳಾಗಿದ್ದುದಲ್ಲದೆ ರೋಗಿಗಳನ್ನು ಕೂಡ ಕೇವಲ ಶಾಕಾಹಾರದಲ್ಲೇ ಇಟ್ಟಿರುತ್ತಿದ್ದರು. ಈ ಪುಸ್ತಕಗಳನ್ನೆಲ್ಲಾ ಓದಿದುದರ ಪರಿಣಾಮವೇನೆಂದರೆ: ಆಹಾರದ ವಿಚಾರದ ಶೋಧನೆಗಳು ನನ್ನ ಜೀವನದಲ್ಲಿ ಪ್ರಾಮುಖ್ಯಸ್ಥಾನವನ್ನು ಹೊಂದಿದವು. ಮೊಟ್ಟಮೊದಲು ಇವುಗಳನ್ನು ಮಾಡಿದುದು ಮುಖ್ಯ

ವಾಗಿ ಆರೋಗ್ಯದೃಷ್ಟಿಯಿಂದಲೇ. ಆದರೆ ಆಮೇಲೆ ಧಾರ್ಮಿಕದೃಷ್ಟಿಯೇ ಸರ್ವಪ್ರಧಾನವಾಯಿತು.

ಈ ಮಧ್ಯೆ ಆ ಮಿತ್ರರು ನನ್ನ ವಿಷಯದಲ್ಲಿನ ಚಿಂತೆಯನ್ನು ಬಿಟ್ಟಿರಲಿಲ್ಲ. ಅವರು ನನ್ನಲ್ಲಿಟ್ಟಿದ್ದ ಪ್ರೇಮವು ನಾನು ಮಾಂಸಾಹಾರವನ್ನು ಮಾಡದಿದ್ದರೆ ದುರ್ಬಲನಾಗುವುದೊಂದೇ ಅಲ್ಲದೆ ಆಂಗ್ಲ ಸಮಾಜದಲ್ಲಿ ಸರಿಯಾಗಿ ವರ್ತಿಸುವುದಕ್ಕೆ ಬಾರದ ಮುಟ್ಠಾಳನಾಗುತ್ತೇನೆಂದು ಅವರು ಯೋಚಿಸುವಂತೆ ಮಾಡಿತು. ನಾನು ಶಾಕಾಹಾರವಿಷಯಕವಾದ ಪುಸ್ತಕಗಳನ್ನು ಓದುತ್ತಿರುವೆನೆಂದು ಅವರಿಗೆ ತಿಳಿದೊಡನೆಯೇ ಅವರು ಈ ಓದಿನಿಂದ ಚಿತ್ತಭ್ರಮೆಯಾಗುವುದೆಂದೂ ಈ ಶೋಧನೆಗಳಲ್ಲೇ ನನ್ನ ಜೀವನವೆಲ್ಲಾ ವ್ಯರ್ಥವಾಗುವುದೆಂದೂ ನಾನು ನನ್ನ ಕರ್ತವ್ಯಗಳನ್ನು ಮರೆತು ಕೇವಲ ಹುಚ್ಚನಾಗುವೆನೆಂದೂ ಭಯಪಟ್ಟು ನನ್ನನ್ನು ಸರಿಯಾದ ದಾರಿಗೆ ತರಬೇಕೆಂದು ಅವರು ಒಂದು ಅಂತಿಮ ಪ್ರಯತ್ನವನ್ನು ಮಾಡಿದರು. ಒಂದುದಿನ ನನ್ನನ್ನು ಅವರು ನಾಟಕವನ್ನು ನೋಡುವುದಕ್ಕೆ ಕರೆದರು. ನಾವು ನಾಟಕಶಾಲೆಗೆ ಹೋಗುವುದಕ್ಕೆ ಮೊದಲು ಹಾಲ್‌ಬರ್ನ್ ಭೋಜನಗೃಹದಲ್ಲಿ ನಾವಿಬ್ಬರೂ ಜೊತೆಗೆ ಊಟಮಾಡಬೇಕೆಂದು ಏರ್ಪಾಡಾಯಿತು. ಆ ಭೋಜನಗೃಹವು ನನಗೆ ಅರಮನೆಯಂತೆ ಕಂಡಿತು. ವಿಕ್ಟೋರಿಯಾ ಹೋಟಲನ್ನು ಬಿಟ್ಟಮೇಲೆ ಇಂಥಾ ಗೃಹದೊಳಕ್ಕೆ ಪ್ರವೇಶಿಸಿದುದು ಇದೇ ಮೊದಲು. ಆ ಹೋಟಲಿಗೆ ನಾನು ಹೋದಾಗ ನನ್ನ ಬುದ್ಧಿಯು ಎಲ್ಲಿಯೋ ಅಲೆಯುತ್ತಿದ್ದುದರಿಂದ ಅಲ್ಲಿನ ಅನುಭವವು ಉಪಯೋಗಕರವಾಗಿದ್ದಿತೆಂದು ಹೇಳುವಂತಿಲ್ಲ. ನಾನು ನಾಚಿಕೆಯಿಂದಲಾದರೂ ಊಟದ ಪದಾರ್ಥಗಳ ವಿಚಾರವಾಗಿ ಪ್ರಶ್ನೆಗಳನ್ನು ಕೇಳುವುದಿಲ್ಲವೆಂಬ ಎಣಿಕೆಯಿಂದ ನನ್ನ ಮಿತ್ರರು ನನ್ನನ್ನು ಈ ಗೃಹಕ್ಕೆ ಕರೆತಂದಿದ್ದರು. ನೂರಾರು ಜನರ ಮಧ್ಯದಲ್ಲಿ ನಾವಿಬ್ಬರೂ ಹೋಗಿ ಒಂದು ಮೇಜಿನ ಬಳಿ ಕುಳಿತುಕೊಂಡೆವು. ಮೊದಲು ನಮ್ಮ ಮುಂದೆ ತಂದಿಟ್ಟಿದ್ದ ತಟ್ಟೆಗಳಲ್ಲಿ ಒಂದು ತರಹ ಸಾರು (ಸೂಪ್) ಇದ್ದಿತು. ನನಗೆ ಅದು ಏನುಹಾಕಿ ಮಾಡಿದುದೋ ಎಂದು ಸಂಶಯವಾಯಿತು. ಆದರೆ ಮಿತ್ರರನ್ನು ಕೇಳುವುದಕ್ಕೆ ಧೈರ್ಯವಾಗಲಿಲ್ಲ. ಆದುದರಿಂದ ಹತ್ತಿರ ಇದ್ದ

ಸೇವಕನನ್ನು ಕರೆದೆನು. ಮಿತ್ರರು ಇದನ್ನು ತಿಳಿದು ಸಿಟ್ಟಿನಿಂದ ಸಮಾಚಾರವೇನೆಂದು ಕೇಳಿದರು. ನಾನು ಸಂಕೋಚದಿಂದ 'ಸಾರಿಗೆ ಮಾಂಸವೇನಾದರೂ ಹಾಕಿದೆಯೋ ಏನೋ ಎಂದು ವಿಚಾರಿಸೋಣವೆಂದು ಅವನನ್ನು ಕರೆದೆನು.' ಎಂದೆನು.

"ಸುಶಿಕ್ಷಿತರ ಮಧ್ಯೆ ಇರಲು ನೀನು ಯೋಗ್ಯನಲ್ಲ. ನಿನಗೆ ಸರಿಯಾಗಿ ನಡೆದುಕೊಳ್ಳುವುದಕ್ಕೆ ಬಾರದಿದ್ದರೆ ಹೊರಗೆಹೋಗಿ ಬೇರೆ ಯಾವುದಾದರೂ ಭೋಜನಗೃಹದಲ್ಲಿ ಊಟಮಾಡಿ ನಾನು ಬರುವವರೆಗೂ ಹೊರಗೆ ಕಾದುಕೊಂಡಿರು." ಎಂದರು.

ಇದರಿಂದ ನನಗೆ ಬಹಳ ಸಂತೋಷವಾಯಿತು. ನಾನು ಹೊರಗೆ ಹೋಗಿ ಬೇರೆ ಭೋಜನಗೃಹವನ್ನು ಹುಡುಕಿದೆನು. ಹತ್ತಿರವೇ ಒಂದು ಶಾಕಾಹಾರದ ಭೋಜನಗೃಹವಿದ್ದಿತು. ಆದರೆ ಅದು ಮುಚ್ಚಿದ್ದಿತು. ನನಗೆ ಏನುಮಾಡಬೇಕೆಂದು ತಿಳಿಯಲಿಲ್ಲ. ಆ ರಾತ್ರಿಯನ್ನು ಊಟವಿಲ್ಲದೆ ಕಳೆದೆನು. ನಾವು ನಾಟಕಮಂದಿರಕ್ಕೆ ಹೋದೆವು. ಮಿತ್ರರು ನನ್ನ ನಡತೆಯ ವಿಷಯವಾಗಿ ಒಂದು ಮಾತನ್ನೂ ಆಡಲಿಲ್ಲ. ನಾನು ಹೇಳಬೇಕಾದುದಂತೂ ಏನೂ ಇರಲಿಲ್ಲ. ನಾನುತಾನೆ ಏನು ಹೇಳುವುದು? ಇದೇ ನಮ್ಮಿಬ್ಬರಿಗೂ ಆದ ಕಡೆಯ ಮಿತ್ರ ಯುದ್ಧ. ಇದರಿಂದ ನಮ್ಮ ಮೈತ್ರಿಗೆ ಕೊಂಚವೂ ಕುಂದುಂಟಾಗಲಿಲ್ಲ. ಇವರ ಪ್ರಯತ್ನಗಳಿಗೆಲ್ಲಾ ಇವರು ನನ್ನಮೇಲೆ ಇಟ್ಟಿದ್ದ ಪ್ರೇಮವೇ ಮೂಲವೆಂದು ಅರಿತಿದ್ದೆನು. ಆಚಾರವಿಚಾರಗಳಲ್ಲಿ ಭಿನ್ನಾಭಿಪ್ರಾಯವಿದ್ದರೂ ಅವರಲ್ಲಿ ನನಗೆ ಆದರವೇನೂ ಕಡಮೆಯಾಗಲಿಲ್ಲ. ಹೆಚ್ಚೇ ಆಯಿತು.

ನಾನು ಅವರ ಚಿಂತೆಯನ್ನು ತೊಲಗಿಸಬೇಕೆಂದೂ ಇನ್ನುಮುಂದೆ ಒರಟುತನವನ್ನು ಬಿಟ್ಟು ನಯವಾಗಲು ಪ್ರಯತ್ನಪಟ್ಟು ನಾನು ಶಾಕಾಹಾರಿಯಾಗಿರುವುದರಿಂದ ಉಂಟಾಗಿರುವ ವಿಚಿತ್ರತೆಯನ್ನು ಮರೆಸುವುದಕ್ಕಾಗಿ ಸಭ್ಯ ಸಮಾಜದೊಡನೆ ಸೇರಲು ಯೋಗ್ಯನಾಗುವಂತೆ ಇತರ ನಾಗರಿಕ ಲಕ್ಷಣಗಳನ್ನು ಹೊಂದಲು ಪ್ರಯತ್ನಪಡುವೆನೆಂದು ಅವರಿಗೆ ಭರವಸೆ ಕೊಡಬೇಕೆಂದೂ ನಿಶ್ಚಯಿಸಿದೆನು. ಈ ಉದ್ದೇಶದಿಂದ ನನ್ನ

ಶಕ್ತಿಗೆ ಮೀರಿದ ಇಂಗ್ಲಿಷ್ 'ಜಂಟಲ್‌ಮನ್' (ಆಂಗ್ಲೇಯ ನಾಗರಿಕ) ಆಗುವ ಕಾರ್ಯವನ್ನು ಕೈಗೊಂಡೆನು.

ನಾನು ಹಾಕಿಕೊಂಡಿದ್ದ ಮುಂಬಯಿಯಲ್ಲಿ ಹೊಲಿಸಿದ ಬಟ್ಟೆಗಳು ಇಂಗ್ಲಿಷ್ ಸಮಾಜಕ್ಕೆ ತಕ್ಕುವಲ್ಲವೆಂದು 'ಆರ್ಮಿ ಅಂಡ್ ನೇವಿ ಸ್ಟೋರ್ಸ್'ನಲ್ಲಿ ಹೊಸ ಬಟ್ಟೆಗಳನ್ನು ತಯಾರುಮಾಡಿಸಿದೆನು. ೧೯ ಷಿಲಿಂಗ್ (ಸುಮಾರು ೧೪ ರೂ.)—ಆಗ ಇದು ಬಹಳ ಹೆಚ್ಚು ಬೆಲೆ—ಕೊಟ್ಟು ಒಂದು ಗೋಪುರದ ಮಾದರಿಯ ಟೋಪಿಯನ್ನು ಕೊಂಡು ಕೊಂಡೆನು. ಇಷ್ಟಕ್ಕೇ ತೃಪ್ತಿಪಡದೆ ಸೊಗಸುಗಾರರ ಯಾತ್ರಾಕ್ಷೇತ್ರವಾದ 'ಬಾಂಡ್ ಸ್ಟ್ರೀಟ್'ಗೆ ಹೋಗಿ ೧೦ ಪೌಂಡು (ಸುಮಾರು ೧೫೦ ರೂ.) ಸುರಿದು ಸಂಜೆಯ ಪೋಷಾಕನ್ನು (ಈವಿನಿಂಗ್ ಸೂಟ್) ಹೊಲಿಸಿದೆನು. ವಿಶಾಲಹೃದಯನಾದ ನಮ್ಮಣ್ಣನಿಗೆ ಬರೆದು ಗಡಿಯಾರಕ್ಕೆ ಹಾಕುವ ಎರಡೆಳೆಯ ಚಿನ್ನದ ಸರಪಣಿಯನ್ನು ತರಿಸಿಕೊಂಡೆನು. ತಯಾರುಮಾಡಿದ ಕಂಠಗ್ರಂಥಿ (ನೆಕ್‌ಟೈ) ಯನ್ನು ಧರಿಸಿಕೊಳ್ಳುವುದು ಶಿಷ್ಟಾಚಾರವಲ್ಲವೆಂದೆಣಿಸಿ ಅದನ್ನು ಅಂದವಾಗಿ ಕಟ್ಟಿಕೊಳ್ಳುವ ಕಲೆಯನ್ನು ಹಸ್ತಗತಮಾಡಿಕೊಂಡೆನು. ಭಾರತದೇಶದಲ್ಲಿ ಕನ್ನಡಿಯನ್ನು ಉಪಯೋಗಿಸುವ ಸುಸಮಯವೊದಗುತ್ತಿದ್ದುದು ಕ್ಷೌರಮಾಡಿಸಿಕೊಂಡಾಗ ಮಾತ್ರ. ಇಲ್ಲಿಯಾದರೋ ಪ್ರತಿನಿತ್ಯವೂ ಒಂದುದೊಡ್ಡ ಕನ್ನಡಿಯಮುಂದೆ ನಿಂತುಕೊಂಡು ನೆಕ್‌ಟೈಯನ್ನು ಅಂದವಾಗಿ ಕಟ್ಟಿಕೊಳ್ಳುವುದರಲ್ಲಿ ಮೂ ಬೈತಲೆಯನ್ನು ನೇರವಾಗಿ ಬಿಡಿಸಿಕೊಳ್ಳುದರಲ್ಲಿಯೂ ಹತ್ತುಹತ್ತು ನಿಮಿಷಗಳನ್ನು ಕಳೆಯುತ್ತಿದ್ದೆನು. ಕೂದಲು ಒರಟಾಗಿದ್ದುದರಿಂದ ಅದನ್ನು ಸರಿಮಾಡುವುದರಲ್ಲಿ ಪ್ರತಿದಿನವೂ ಬ್ರಷ್ (ತಲೆ ಬಾಚಿಕೊಳ್ಳುವ ಕೂರ್ಚ) ನೊಡನೆ ಯುದ್ಧಮಾಡಬೇಕಾಗಿರುತ್ತಿದ್ದಿತು. ಟೋಪಿಯನ್ನು ಹಾಕಿಕೊಳ್ಳುವಾಗ ಮತ್ತು ತೆಗೆಯುವಾಗ ಕೈಯು ತನ್ನಷ್ಟಕ್ಕೆ ತಾನೆ ಬೈತಲೆಯನ್ನು ಸರಿಮಾಡುವುದಕ್ಕೆ ಹೋಗುತ್ತಿದ್ದಿತು. ನಾಲ್ಕು ಜನರ ಮಧ್ಯೆ ಕುಳಿತಿರುವಾಗ ಕ್ಷಣಕ್ಕೊಂದುಸಲ ಬೈತಲೆಯನ್ನು ಸರಿಮಾಡಿಕೊಳ್ಳುವ ನಾಗರಿಕ ಲಕ್ಷಣದ ವಿಚಾರವನ್ನು ಹೇಳಬೇಕಾದುದೇ ಇಲ್ಲ.

ಈ ಸಂಭ್ರಮವು ಇಷ್ಟಕ್ಕೇ ಮುಗಿಯಲಿಲ್ಲ. ಠೀವಿಯಾದ ಪೋಷಾಕನ್ನು ಧರಿಸುವುದರಿಂದಲೆ ಸರಿಯಾದ 'ಆಂಗ್ಲನಾಗರಿಕ' ನಾಗುವೆನೇನು? ನಾಗರಿಕತೆಗೆ ಬೇಕಾದ ಇನ್ನೂ ಕೆಲವು ಬಾಹ್ಯಲಕ್ಷಣಗಳನ್ನು ಅಭ್ಯಾಸ ಮಾಡುವುದರ ಕಡೆಗೆ ನನ್ನ ದೃಷ್ಟಿಯನ್ನು ತಿರುಗಿಸಿದೆನು. ಇಂಥಹ ನಾಗರಿಕನಿಗೆ ನರ್ತನವೂ ಫ್ರೆಂಚ್ ಭಾಷೆಯೂ ವಾಕ್ಪಟುತ್ವವೂ ಆವಶ್ಯಕವೆಂದು ಹೇಳಿದರು. ಏಕೆಂದರೆ ಫ್ರೆಂಚು ಇಂಗ್ಲೆಂಡಿನ ಪಕ್ಕದಲ್ಲಿರುವ ಫ್ರಾನ್ಸ್‌ದೇಶದ ಭಾಷೆಯಾಗಿರುವುದಲ್ಲದೆ ಸಮಸ್ತ ಯೂರೋಪ್‌ಖಂಡದ ರಾಷ್ಟ್ರಭಾಷೆ. ನನಗೆ ಯೂರೋಪ್‌ದೇಶವನ್ನೆಲ್ಲಾ ನೋಡಬೇಕೆಂಬ ಇಚ್ಛೆಯಿದ್ದಿತು. ನಾನು ನಾಟ್ಯವನ್ನು ಕಲಿತುಕೊಳ್ಳಬೇಕೆಂದು ನಿಶ್ಚಯಿಸಿ ಇದಕ್ಕಾಗಿ ಏರ್ಪಟ್ಟ ಒಂದು ವರ್ಗಕ್ಕೆ ಸೇರಿಬಿಟ್ಟು ಒಂದು ಟರ್ಮಿಗಾಗಿ ಮೂರು ಪೌಂಡನ್ನು ಕೊಟ್ಟೆನು. ಮೂರುವಾರಗಳಲ್ಲಿ ನಾನು ಆರುಸಲ ಹೇಳಿಸಿಕೊಳ್ಳುವುದಕ್ಕೆ ಹೋಗಿರಬೇಕು. ನನಗೆ ತಾಳಕ್ಕೆ ಸರಿಯಾಗಿ ಕಾಲನ್ನಿಡುವುದಕ್ಕೆ ಬರುತ್ತಿರಲಿಲ್ಲ. ಪಿಯಾನೋವನ್ನು ನುಡಿಸುತ್ತಿದ್ದರು. ಆದರೆ ಆದರ ಸಂಗೀತವು ನನಗೆ ತಿಳಿಯುತ್ತಿರಲಿಲ್ಲ. ಏನು ಮಾಡುವುದು? ಇಲಿಗಳ ತೊಂದರೆಯಿಂದ ತಪ್ಪಿಸಿಕೊಳ್ಳುವದಕ್ಕಾಗಿ ಬೆಕ್ಕನ್ನು ಸಾಕಿದ ಸನ್ಯಾಸಿಯ ಕತೆಯ ಹಾಗಾಯಿತು. ಬೆಕ್ಕಿಗೆ ಹಾಲು ಒದಗಿಸುವುದಕ್ಕಾಗಿ ಒಂದು ಆಕಳು, ಆ ಆಕಳನ್ನು ಕಾಪಾಡುವುದಕ್ಕಾಗಿ ಒಬ್ಬ ಆಳು, ಹೀಗೆ ಆತನ ಪರಿವಾರವು ಬೆಳಿಯುತ್ತಾ ಹೋದಂತೆ ನನ್ನ ಮಹಾಕಾಂಕ್ಷೆಯ ಪರಿವಾರವುಕೂಡ ದೊಡ್ಡದಾಯಿತು. ಪಾಶ್ಚಾತ್ಯ ಸಂಗೀತದೊಡನೆ ನನ್ನ ಶ್ರೋತ್ರೇಂದ್ರಿಯವು ಸಲಿಗೆಯನ್ನು ಬೆಳಿಸುವುದಕ್ಕಾಗಿ ಪಿಟೀಲು ಬಾರಿಸುವುದನ್ನು ಅಭ್ಯಾಸಮಾಡಬೇಕೆಂದು ಮನಸ್ಸುಮಾಡಿ ಮೂರು ಪೌಂಡನ್ನು ಕೊಟ್ಟು ಪಿಟೀಲನ್ನು ಕೊಂಡುಕೊಂಡುದಲ್ಲದೆ ಇದನ್ನು ಕಲಿತುಕೊಳ್ಳುವುದಕ್ಕಾಗಿ ಇನ್ನಷ್ಟು ಹಣವನ್ನು ಖರ್ಚುಮಾಡಿದೆನು. ವಾಕ್ಪಟುತ್ವವನ್ನು ಕಲಿಸುವುದಕ್ಕೋಸ್ಕರ ಮೂರನೇ ಶಿಕ್ಷಕನನ್ನು ಹುಡುಕಿ ಆತನಿಗೆ ಒಂದು ಗಿನಿ (ಸುಮಾರು ೧೭ ರೂ.) ಯ ಸಂಚಕಾರವನ್ನು ಕೊಟ್ಟೆನು. ಆತನ ಮಾತಿನ ಪ್ರಕಾರ "ಬೆಲ್ಸ್ ಸ್ಟ್ಯಾಂಡರ್ಡ್ ಎಲೋಕ್ಯೂಷನಿಸ್ಟ್" ಎಂಬ

ಪುಸ್ತಕವನ್ನು ಕೊಂಡುಕೊಂಡು ಪಿಟ್ ಮಹಾಶಯನ ಭಾಷಣವೊಂದನ್ನು ಅಭ್ಯಸಿಸತೊಡಗಿದೆನು.

ಆದರೆ ಬೆಲ್ ಸಾಹೇಬರು ನನ್ನ ಕಿವಿಯ ಹತ್ತಿರ ಗಂಟೆಯನ್ನು ಬಾರಿಸಿದರು, ನಾನು ಎಚ್ಚತ್ತೆನು.

"ನಾನು ಇಂಗ್ಲೆಂಡಿನಲ್ಲಿ ಎಷ್ಟು ದಿನವನ್ನು ಕಳೆಯಬೇಕು ? ಇಂಗ್ಲಿಷ್ ಭಾಷೆಯಲ್ಲಿ ಒಳ್ಳೆಯ ಭಾಷಣವನ್ನು ಮಾಡುವುದನ್ನು ಕಲಿತು ನಾನು ಮಾಡುವುದೇನು ? ನಾಟ್ಯವಾಡುವುದನ್ನು ಕಲಿಯುವುದರಿಂದ ನಾನು ದೊಡ್ಡ ಮನುಷ್ಯನಾಗುತ್ತೇನೆಯೆ ? ಪಿಟೀಲನ್ನು ನಮ್ಮ ದೇಶದಲ್ಲಿಯೇ ಕಲಿಯಬಹುದು. ನಾನು ವಿದ್ಯಾರ್ಥಿ. ನನ್ನ ಓದಿಗೆ ಸಂಬಂಧಪಟ್ಟ ಪಾಠಗಳನ್ನು ಕಲಿತುಕೊಂಡು ವಕೀಲಿಯ ಶಾಲೆಗೆ ಸೇರಲು ಯೋಗ್ಯತೆಯನ್ನು ಸಂಪಾದಿಸಬೇಕು. ನನ್ನ ಸದ್ವ್ಯವಹಾರದಿಂದ ನಾನು ನಾಗರಿಕನೆನಿಸಿಕೊಂಡರೆ ಒಳ್ಳೆಯದೇ ಆಯಿತು. ಇಲ್ಲದಿದ್ದರೆ ಈ ಕಾಂಕ್ಷೆಯನ್ನು ಬಿಡಬೇಕು."

ಈ ರೀತಿಯಾದ ವಿಚಾರಗಳು ನನ್ನ ಮನಸ್ಸನ್ನು ಹಿಡಿದುವು. ನನಗೆ ವಾಕ್ಪಟುತ್ವವನ್ನು ಕಲಿಸುತ್ತಿದ್ದ ಶಿಕ್ಷಕನಿಗೆ ಇವುಗಳನ್ನೆಲ್ಲಾ ನಿರೂಪಿಸಿ ಇನ್ನು ಮುಂದೆ ಪಾಠಕ್ಕೆ ಬರದೆ ಇರುವದಕ್ಕಾಗಿ ಕ್ಷಮಿಸಬೇಕೆಂದು ಪತ್ರ ಬರೆದೆನು. ಎರಡು ಮೂರು ಪಾಠಗಳು ಮಾತ್ರ ಆಗಿದ್ದವು. ನಾಟ್ಯದ ಶಿಕ್ಷಕನಿಗೂ ಇದೇ ರೀತಿಯಾದ ಕಾಗದವನ್ನು ಬರೆದೆನು. ಪಿಟೀಲಿನ ಶಿಕ್ಷಕಳ ಮನೆಗೆ ತೆಗೆದುಕೊಂಡುಹೋಗಿ ಅದನ್ನು ದೊರೆತಷ್ಟು ಬೆಲೆಗೆ ಮಾರಿಬಿಡಬೇಕೆಂದು ಆಕೆಗೆ ಹೇಳಿದೆನು. ಆಕೆಯು ನನ್ನನ್ನೊಡನೆ ಮಿತ್ರಭಾವದಿಂದ ವರ್ತಿಸುತ್ತಿದ್ದುದರಿಂದ ನೈಜವಲ್ಲದ ಧ್ಯೇಯವನ್ನಿಟ್ಟುಕೊಂಡಿದ್ದೇನೆಂಬ ಜ್ಞಾನವು ನನ್ನಲ್ಲಿ ಹುಟ್ಟಿದರೀತಿಯನ್ನು ಆಕೆಗೆ ತಿಳಿಸಿದೆನು. ಸಂಪೂರ್ಣಪರಿವರ್ತನೆ ಮಾಡಿಕೊಳ್ಳಬೇಕೆಂಬ ನನ್ನ ಮನೋನಿಶ್ಚಯಕ್ಕೆ ಆಕೆಯು ಬೆಂಬಲಕೊಟ್ಟಳು.

ನಾಗರಿಕನಾಗಬೇಕೆಂಬ ಈ ಹುಚ್ಚು ನನಗೆ ಸುಮಾರು ಮೂರು ತಿಂಗಳು ಹಿಡಿದಿರಬೇಕು. ಪೋಷಾಕಿನ ನಾಜೋಕು ಇನ್ನೂ ಅನೇಕ ವರ್ಷಗಳಿದ್ದಿತು. ಆದರೆ ಅಂದಿನಿಂದ ನಾನು ವಿದ್ಯಾರ್ಥಿಯಾದೆನು.

## ೧೬
## ಪರಿವರ್ತನ

ನಾನು ನಾಟ್ಯ ಮುಂತಾದುವುಗಳನ್ನು ಕಲಿಯುತ್ತಿದ್ದುದರಿಂದ ಸ್ವಚ್ಛಂದವರ್ತಿಯಾಗಿದ್ದೆನೆಂದು ಯಾರೂ ಎಣಿಸದಿರಲಿ. ಆಗಲೂ ನನ್ನಲ್ಲಿ ವಿವೇಕವಿದ್ದಿತೆನ್ನುವುದು ಪಾಠಕರ ದೃಷ್ಟಿಗೆ ಬಿದ್ದಿರುವುದು. ಆ ಮೂಢ ತನದ ಕಾಲದಲ್ಲಿ ಕೂಡ ನಾನು ಕೇವಲ ವಿವೇಚನೆಯಿಲ್ಲದವನಾಗಿರಲಿಲ್ಲ. ಪ್ರತಿಯೊಂದು ಕಾಸಿಗೂ ಲೆಕ್ಕವನ್ನಿಡುತ್ತಿದ್ದೆನು. ಖರ್ಚಿನ ಮಿತಿಯನ್ನು ಮೊದಲೇ ಗೊತ್ತುಮಾಡಿರುತ್ತಿದ್ದೆನು. ಮೋಟಾರ್‌ಬಸ್ಸಿನಲ್ಲಿ ಹೋಗುವ ಖರ್ಚು, ಅಂಚೆಯ ವೆಚ್ಚ, ವೃತ್ತ ಪತ್ರಗಳನ್ನು ಕೊಂಡ ಖರ್ಚು ಇವೆಲ್ಲವನ್ನೂ ಬರೆದು ಮಲಗುವುದಕ್ಕೆ ಮುಂಚೆ ಜಮಾಖರ್ಚನ್ನು ನೋಡುತ್ತಿದ್ದೆನು. ಈ ಅಭ್ಯಾಸವು ಇಂದಿನವರೆಗೂ ನಡೆದುಬಂದಿದೆ. ಈ ಕಾರಣದಿಂದ ನಾನು ಕೈಹಾಕಿರುವ ಅನೇಕ ಸಾರ್ವಜನಿಕ ಕಾರ್ಯ ಗಳಲ್ಲಿ ಲಕ್ಷಾಂತರ ರೂಪಾಯಿಗಳ ಆಡಳಿತಗಳನ್ನು ನಡೆಸಬೇಕಾದ ಸಂದ ರ್ಭವೊದಗಿದರೂ ಪ್ರತಿಯೊಂದರಲ್ಲೂ ಮಿತವ್ಯಯ ಮಾಡಿದ್ದೇನೆಂದೂ ಪ್ರತಿಯೊಂದರಲ್ಲೂ ಒಂದು ಕಾಸೂ ಸಾಲ ಮಾಡದೇ ಇದ್ದುದಷ್ಟೇ ಅಲ್ಲದೆ ಸ್ವಲ್ಪ ಹಣವಾದರೂ ಜಮಾಖಾತೆಯಲ್ಲಿರುವಂತೆ ಮಾಡಿದ್ದೇನೆ. ಪ್ರತಿಯೊಬ್ಬ ಯುವಕನೂ ಇದನ್ನೇ ಆದರ್ಶವಾಗಿಟ್ಟುಕೊಂಡು ಕೈಗೆ ಬಂದ, ಕೈಬಿಟ್ಟು ಹೋದ ಪ್ರತಿಯೊಂದು ಕಾಸಿಗೂ ಲೆಕ್ಕವಿಟ್ಟದ್ದೇ ಆದರೆ ಇದರಿಂದ ಅವನಿಗೂ ನನಗುಂಟಾದಂತೆಯೇ ಮುಂದೆ ಲಾಭವಾಗದೆ ಇರಲಾರದು.

ಹೀಗೆ ನನ್ನ ಜೀವನದ ರೀತಿಯಮೇಲೆ ಸೂಕ್ಷ್ಮವಾಗಿ ಲಕ್ಷ್ಯ ವಿಟ್ಟುಕೊಂಡಿದ್ದುದರಿಂದ ಮಿತವ್ಯಯ ಮಾಡುವುದು ಆವಶ್ಯಕವೆಂದು ನನಗೆ ತಿಳಿಯಿತು. ಆಗ ನನ್ನ ಖರ್ಚನ್ನು ಅರ್ಧಕ್ಕೆ ಇಳಿಸಬೇಕೆಂದು

ನಿಶ್ಚಯಿಸಿದೆನು. ಖರ್ಚಿನ ಪಟ್ಟಿಯನ್ನು ನೋಡಿದುದರಿಂದ ತಿರುಗಾಡುವ ಬಾಡಿಗೆಯು ಬಹಳ ಹಣವನ್ನು ನುಂಗುತ್ತಿದ್ದಿತೆನ್ನುವುದು ಗೊತ್ತಾಯಿತು. ಮತ್ತು ಕುಟುಂಬದೊಡನೆ ವಾಸಿಸುತ್ತಿದ್ದುದರಿಂದ ಪ್ರತಿ ವಾರವೂ ಹಣವನ್ನು ಕೊಡಬೇಕಾಗುತ್ತಿದ್ದತು. ಕುಟುಂಬದ ಜನರನ್ನು ಆಗಾಗ ಹೊರಕ್ಕೆ ಊಟಕ್ಕೆ ಕರೆದುಕೊಂಡು ಹೋಗುವುದು ವಾಡಿಕೆಯೆಂದೆಣಿಸಲ್ಪಡುತ್ತಿದ್ದಿತು. ಅವರ ಜೊತೆಗೆ ಬೇರೆಕಡೆ ಊಟಕ್ಕೋ ತಿಂಡಿಗೋ ಹೋಗುವುದೂ ಒದಗುತ್ತಿದ್ದಿತು. ಈ ಸಂದರ್ಭಗಳಲ್ಲೆಲ್ಲಾ ಬಾಡಿಗೆಗಾಗಿ ಹೆಚ್ಚಾಗಿ ವೆಚ್ಚಮಾಡಬೇಕಾಗುತ್ತಿದ್ದಿತು. ಜೊತೆಗೆ ಹೆಂಗಸರನ್ನು ಕರೆದುಕೊಂಡು ಹೋದಾಗಲಂತೂ ಗಂಡಸರೇ ಅವರ ಖರ್ಚನ್ನೆಲ್ಲಾ ವಹಿಸಿಕೊಳ್ಳಬೇಕೆಂಬ ಪದ್ಧತಿಯಿದ್ದಿತು. ಹೊರಗೆ ಹೋಗಿ ಊಟಮಾಡಿದರೂ ಮನೆಯ ಊಟದ ಖರ್ಚಿನಲ್ಲೇನೂ ಉಳಿತಾಯವಾಗುತ್ತಿರಲಿಲ್ಲ. ಈ ಖರ್ಚುಗಳನ್ನೂ ಆ ದೇಶದ ವಾಡಿಕೆಗಳಿಗೆ ವಿವೇಚನೆಯಿಲ್ಲದೆ ಕಟ್ಟುಬಿದ್ದು ಮಾಡುತ್ತಿದ್ದ ವೆಚ್ಚವನ್ನೂ ಉಳಿಸಬಹುದೆಂದು ನನಗೆ ತೋರಿತು.

ಕುಟುಂಬದ ಜೊತೆಗೆ ವಾಸಿಸುವುದರ ಬದಲು ನಾನೇ ಬೇರೆ ಕೊಠಡಿಯನ್ನು ಗೊತ್ತುಮಾಡಲು ನಿಶ್ಚಯಿಸಿದೆನು. ಮತ್ತು ನನಗಿರುವ ಕೆಲಸಕ್ಕೆ ತಕ್ಕಂತೆ ಕೊಠಡಿಗಳನ್ನು ಬದಲಾಯಿಸುತ್ತಾ ಅನುಭವ ಸಂಪಾದಿಸುವ ಯೋಚನೆಯನ್ನು ಮಾಡಿದೆನು. ನನಗೆ ಕೆಲಸವಿರುವ ಸ್ಥಳಕ್ಕೆ ಅರ್ಧಘಂಟೆಯೊಳಗಾಗಿ ನಡೆದುಕೊಂಡು ಹೋಗಬಹುದಾದಷ್ಟು ಹತ್ತಿರದಲ್ಲಿದ್ದ ಕೊಠಡಿಗಳನ್ನು ಆರಿಸುತ್ತಿದ್ದುದರಿಂದ ನನಗೆ ಗಾಡೀಬಾಡಿಗೆಯ ವೆಚ್ಚವು ಉಳಿಯುತ್ತಿದ್ದಿತು. ಇದಕ್ಕೆ ಮೊದಲು ಗಾಡಿಬಾಡಿಗೆಗೆ ಖರ್ಚುಮಾಡಬೇಕಾಗಿತ್ತಲ್ಲದೆ ತಿರುಗಾಡುವುದಕ್ಕೆ ಬೇರೆ ಸಮಯವನ್ನು ಹೊಂದಿಸಬೇಕಾಗಿದ್ದಿತು. ಈಗ ನಾನು ನನ್ನ ಕೆಲಸದ ಸಲುವಾಗಿ ನಡೆಯಬೇಕಾಗಿದ್ದುದರಿಂದ ದಿನವಹಿ ೮—೧೦ ಮೈಲಿ ತಿರುಗಾಡುವ ಸಂದರ್ಭವೊದಗುತ್ತಿದ್ದಿತು. ಮುಖ್ಯವಾಗಿ ಈ ಕಾರಣದಿಂದಲೇ ನನಗೆ ವಿಲಾಯತಿಯಲ್ಲಿರುವವರೆಗೂ ಹೆಚ್ಚುಕಡಿಮೆ ಯಾವ ಕಾಹಿಲೆಯೂ ಬರದೇ ಇದ್ದುದು ಮತ್ತು ನಾನು ತಕ್ಕಮಟ್ಟಿಗೆ ದೃಢಕಾಯನಾದುದು.

ಹೀಗೆ ನಾನು ಕುಟುಂಬದೊಡನೆ ವಾಸಿಸುವುದನ್ನು ಬಿಟ್ಟು ಎರಡು ಕೊಠಡಿಗಳನ್ನು ಬಾಡಿಗೆಗೆ ಗೊತ್ತುಮಾಡಿದೆನು–ಒಂದು ಮಲಗುವುದಕ್ಕೆ, ಒಂದು ಬೈಠಕಖಾನೆಯಾಗಿ. ಈ ಸ್ಥಿತಿಯು ನನ್ನ ಪರಿವರ್ತನದ ಎರಡನೆಯ ಮೆಟ್ಟಲೆಂದು ಹೇಳಬಹುದು. ಮೂರನೆಯ ಮೆಟ್ಟಲನ್ನು ಇಷ್ಟರಲ್ಲೇ ಏರುವವನಾಗಿದ್ದೆನು.

ಈ ಮಾರ್ಪಾಟುಗಳಿಂದ ನನ್ನ ಖರ್ಚು ಅರ್ಧಕ್ಕೆ ಇಳಿಯಿತು. ಆದರೆ ಹೊತ್ತನ್ನು ವಿನಿಯೋಗಿಸುವುದು ಹೇಗೆ? ಬ್ಯಾರಿಸ್ಟರ್ ಪರೀಕ್ಷೆಗಾಗಿ ಬಹಳ ಓದುವುದು ಆವಶ್ಯಕವಿಲ್ಲವೆಂದು ನನಗೆ ತಿಳಿದಿದ್ದಿತು. ಇದರಿಂದ ನನಗೆ ಕಾಲವು ಸಾಲದೆಂದು ತೋರಲವಕಾಶವಿರಲಿಲ್ಲ. ನನಗೆ ಇಂಗ್ಲಿಷ್ ಭಾಷೆಯು ಸರಿಯಾಗಿ ಬರದೇ ಇದ್ದುದು ಹಗಲೆಲ್ಲಾ ವ್ಯಾಕುಲವನ್ನುಂಟುಮಾಡುತ್ತಿದ್ದಿತು. ಮಿ॥ ಲೆಲಿ (ಆಮೇಲೆ ಇವರು ಸರ್ ಫ್ರೆಡರಿಕ್ ಲೆಲಿಯವರಾದರು) ಯವರು ಹೇಳಿದ "ಮೊದಲು ಬಿ. ಎ. ಪ್ಯಾಸ್ ಮಾಡು. ಆಮೇಲೆ ನನ್ನ ಬಳಿಗೆ ಬಾ." ಎನ್ನುವ ಮಾತುಗಳು ಇನ್ನೂ ನನ್ನ ಕಿವಿಯನ್ನು ಕೊರೆಯುತ್ತಿದ್ದುವು. ಬ್ಯಾರಿಸ್ಟರಾಗುವುದಲ್ಲದೆ ಸಾಹಿತ್ಯಪದವಿ (ಡಿಗ್ರಿ) ಯೊಂದನ್ನೂ ಸಂಪಾದಿಸಬೇಕೆಂದು ನನಗೆ ತೋರಿತು. ಆಕ್ಸ್ಫರ್ಡ್ ಮತ್ತು ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯಗಳಲ್ಲಿನ ಅಭ್ಯಾಸ ಕ್ರಮ, ಅಲ್ಲಿರುವುದಕ್ಕೆ ತಗಲುವ ಖರ್ಚು ಇವುಗಳ ವಿಷಯವನ್ನು ವಿಚಾರಿಸಿ ಕೆಲವು ಮಿತ್ರರ ಸಲಹೆಯನ್ನು ಕೇಳಿದೆನು. ಅಲ್ಲಿ ಬಹಳ ವೆಚ್ಚ ತಗಲುವುದೆಂದೂ ದೀರ್ಘಕಾಲ ಅಲ್ಲಿರಬೇಕಾಗುವುದೆಂದೂ ತಿಳಿಯಬಂದಿತು. ಆದರೆ ಇದಕ್ಕೆ ನಾನು ಸಿದ್ಧನಾಗಿರಲಿಲ್ಲ. ಒಬ್ಬ ಮಿತ್ರರು 'ನೀನು ನಿಜವಾಗಿಯೂ ಕಠಿಣವಾದ ಪರೀಕ್ಷೆಯಲ್ಲಿ ತೇರ್ಗಡೆಯಾಗುವ ತೃಪ್ತಿಯನ್ನು ಹೊಂದಬೇಕೆಂದು ಇಚ್ಛಿಸಿದರೆ ಲಂಡನ್ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಉತ್ತೀರ್ಣನಾಗಲು ಪ್ರಯತ್ನಪಡು. ಅದಕ್ಕಾಗಿ ನೀನು ಹೆಚ್ಚು ಶ್ರದ್ಧೆಯಿಂದ ಓದಬೇಕು. ನಿನ್ನ ಸಾಮಾನ್ಯ ಜ್ಞಾನವೂ ವೃದ್ಧಿಯಾಗುತ್ತದೆ. ಹೆಚ್ಚಾಗಿ ಖರ್ಚೂ ಆಗುವುದಿಲ್ಲ." ಎಂದು ಹೇಳಿದರು. ಈ ಸೂಚನೆಯು ನನಗೆ ಸರಿದೋರಿತು. ಆದರೆ ಪರೀಕ್ಷಾ ವಿಷಯಗಳನ್ನು ನೋಡಿ ನನಗೆ ಗಾಬರಿಯಾಯಿತು.

ಲ್ಯಾಟಿನ್ ಮತ್ತು ಈಗಿನ ಕಾಲದ ಭಾಷೆಯೊಂದು, ಇವನ್ನು ಓದಲೇ ಬೇಕಾಗಿದ್ದಿತು. ಲ್ಯಾಟಿನ್ ಭಾಷೆಯನ್ನು ಕಲಿಯುವುದು ಹೇಗೆ? ಒಬ್ಬ ಮಿತ್ರರು "ವಕೀಲರಿಗೆ ಲ್ಯಾಟಿನ್ ಭಾಷೆಯಿಂದ ಬಹಳ ಉಪಯೋಗವುಂಟು. ಲ್ಯಾಟಿನ್ ತಿಳಿದಿರುವವರಿಗೆ ಕಾನೂನಿನ ಪುಸ್ತಕಗಳನ್ನು ಅರ್ಥಮಾಡಿಕೊಳ್ಳುವುದು ಬಹಳ ಸುಲಭ. ಮತ್ತು ರೋಮನ್ ಕಾನೂನಿನಲ್ಲಿ ಒಂದು ಪ್ರಶ್ನಪತ್ರಿಕೆಯು ಲ್ಯಾಟಿನ್ನಿನಲ್ಲೇ ಇರುತ್ತದೆ. ಇದರ ಜೊತೆಗೆ ಲ್ಯಾಟಿನ್ನಿನ ಜ್ಞಾನದಿಂದ ಇಂಗ್ಲಿಷ್ ಭಾಷೆಯನ್ನು ಸರಿಯಾಗಿ ಉಪಯೋಗಿಸುವುದಕ್ಕೂ ಸಹಾಯವಾಗುತ್ತದೆ." ಎಂದು ಹೇಳಿದರು. ಈ ಮಾತುಗಳು ನನ್ನ ಮನಸ್ಸಿನಲ್ಲಿ ನಾಟಿದುವು. ಅದು ಎಷ್ಟೇ ಕಷ್ಟವಾಗಿರಲಿ ಲ್ಯಾಟಿನ್ ಭಾಷೆಯನ್ನು ಕಲಿಯಲು ನಿಶ್ಚಯಿಸಿದೆನು. ಫ್ರೆಂಚ್ ಭಾಷೆಯನ್ನು ಕಲಿಯಲು ಆಗಲೇ ಪ್ರಾರಂಭಿಸಿದ್ದುದರಿಂದ ಅದನ್ನೇ ಆಧುನಿಕ ಭಾಷೆಯಾಗಿ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಸಿದ್ಧಪಡಿಸುವುದಕ್ಕಾಗಿ ಏರ್ಪಟ್ಟಿದ್ದ ಒಂದು ವರ್ಗವನ್ನು ಸೇರಿದೆನು. ಆರುತಿಂಗಳಿಗೊಮ್ಮೆ ಈ ಪರೀಕ್ಷೆಯು ನಡೆಯುತ್ತಿದ್ದಿತು. ನನ್ನ ಮುಂದೆ ೫ ತಿಂಗಳು ಮಾತ್ರ ಉಳಿದಿದ್ದಿತು. ಈ ಕೆಲಸವು ನನ್ನ ಶಕ್ತಿಗೆ ಮೀರಿದುದಾಗಿಯೇ ಇದ್ದಿತೆನ್ನಬಹುದು. ಆದರೆ ಆಂಗ್ಲ ನಾಗರಿಕನಾಗಬೇಕೆಂಬ ಪ್ರಬಲವಾದ ಇಚ್ಛೆಯುಳ್ಳವನಾದ ನಾನು ಬಹು ಶ್ರದ್ಧೆಯುಳ್ಳ ವಿದ್ಯಾರ್ಥಿಯಾದೆನು. ಪ್ರತಿಯೊಂದು ನಿಮಿಷವನ್ನೂ ಲೆಕ್ಕಹಾಕಿ ವೇಳಾಪತ್ರಿಕೆ (ಟೈಂಟೇಬಲ್) ಯನ್ನು ಬರೆದೆನು ಆದರೆ ನನ್ನ ಬುದ್ಧಿಶಕ್ತಿಯಾಗಲಿ ಜ್ಞಾಪಕಶಕ್ತಿಯಾಗಲಿ ಉಳಿದಿದ್ದ ಕಾಲದಲ್ಲಿ ಫ್ರೆಂಚ್ ಲ್ಯಾಟಿನ್ ಭಾಷೆಗಳನ್ನೂ ಉಳಿದ ವಿಷಯಗಳನ್ನೂ ಗ್ರಹಿಸುವುದಕ್ಕೆ ತಕ್ಕಷ್ಟು ಕುದುರಿರುವಂತೆ ತೋರಲಿಲ್ಲ. ಪರೀಕ್ಷೆಗೆ ಕುಳಿತುಕೊಂಡೆನು. ಲ್ಯಾಟಿನ್ನಿನಲ್ಲಿ ಉತ್ತೀರ್ಣನಾಗಲಿಲ್ಲ. ಇದರಿಂದ ನನಗೆ ದುಃಖವಾದರೂ ನಾನು ಎದೆಗುಂದಲಿಲ್ಲ. ಲ್ಯಾಟಿನ್ನಿನಲ್ಲಿ ನನಗೆ ಅಭಿರುಚಿ ಹುಟ್ಟಿತು. ಇನ್ನೊಂದುಬಾರಿ ಪರೀಕ್ಷೆಗೆ ಹೋಗುವುದರಿಂದ ಫ್ರೆಂಚ್ ಭಾಷೆಯ ಜ್ಞಾನವು ಇನ್ನೂ ಚೆನ್ನಾಗಿ ಉಂಟಾಗುವುದೆಂದು ಯೋಚಿಸಿದೆನು. ಮತ್ತು ಪರೀಕ್ಷೆಗೆ ವಿಜ್ಞಾನದ ಗುಂಪಿನಲ್ಲಿ ಹೊಸ

ವಿಷಯವನ್ನು ತೆಗೆದುಕೊಳ್ಳಲು ನಿಶ್ಚಯಿಸಿದೆನು. ನಾನು ಹಿಂದೆ ಆರಿಸಿದ್ದ ರಸಾಯನಶಾಸ್ತ್ರವು ಹೃದಯಂಗಮವಾದ ವಿಷಯವಾಗಿರಬೇಕಾದರೂ ಪ್ರಯೋಗಗಳ ಅಭಾವದಿಂದ ನನಗೆ ಅದರಲ್ಲಿ ಅಭಿರುಚಿಯುಂಟಾಗಿರಲಿಲ್ಲ. ಭಾರತದೇಶದಲ್ಲಿ ನಾನು ಓದುತ್ತಿದ್ದಾಗ ಅದು ಎಲ್ಲರೂ ಓದಬೇಕಾದ ವಿಷಯವಾಗಿದ್ದಿತು. ನಾನು ಅವನ್ನು ಲಂಡನ್ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಐಚ್ಛಿಕವಿಷಯವಾಗಿ ತೆಗೆದುಕೊಂಡಿದ್ದೆನು. ಆದರೆ ಈ ಸಲ ಕಾವು ಮತ್ತು ಉಷ್ಣ (ಇವು ಭೌತಿಕಶಾಸ್ತ್ರದ ಭಾಗಗಳು) ಎಂಬ ವಿಷಯವನ್ನು ತೆಗೆದುಕೊಂಡೆನು. ಇದು ಸರಳವಾದ ವಿಷಯವೆಂದು ಹೇಳುತ್ತಿದ್ದರು. ಆಮೇಲೆ ನನಗೂ ಹಾಗೆಯೇ ತೋರಿಬಂದಿತು.

ಇನ್ನೊಂದು ಸಲ ಪರೀಕ್ಷೆಗೆ ಸಿದ್ಧಪಡಿಸಿಕೊಳ್ಳುವುದರ ಜೊತೆಗೆ ನನ್ನ ಜೀವನದ ರೀತಿಯನ್ನು ಇನ್ನೂ ಸರಳವಾಗಿ ಮಾಡುವುದಕ್ಕೆ ಪ್ರಯತ್ನ ಪಟ್ಟೆನು. ನಮ್ಮ ಸಂಸಾರದ ಬಡತನಕ್ಕೆ ಸರಿಯಾದಷ್ಟು ಸರಳವಾದ ರೀತಿಯಲ್ಲಿ ನಾನು ಜೀವಿಸುತ್ತಿರಲಿಲ್ಲವೆಂದು ನನಗೆ ತೋರಿತು. ನಮ್ಮಣ್ಣನು ಕಷ್ಟಪಟ್ಟು ನಾನು ಕೇಳಿದಾಗಲೆಲ್ಲಾ ಉದಾರಬುದ್ಧಿಯಿಂದ ಹಣವನ್ನು ಕಳುಹಿಸುತ್ತಿದ್ದುದು ನನ್ನ ಮನಸ್ಸನ್ನು ಕೊರೆಯುತ್ತಿದ್ದಿತು. ತಿಂಗಳಿಗೆ ಎಂಟರಿಂದ ಹದಿನೈದುಪೌಂಡಿನವರೆಗೆ ಖರ್ಚು ಮಾಡುತ್ತಿದ್ದ ವಿದ್ಯಾರ್ಥಿಗಳಿಗೆ ಸಾಮಾನ್ಯವಾಗಿ ವೇತನವು ದೊರೆಯುತ್ತಿದ್ದಿತೆಂಬುದನ್ನು ನಾನು ಕಂಡೆನು. ನನಗಿಂತ ಇನ್ನೂ ಸರಳವಾದ ರೀತಿಯಲ್ಲಿ ಇರುತ್ತಿದ್ದವರನ್ನು ನಾನು ನೋಡುತ್ತಿದ್ದೆನು. ಒಬ್ಬ ವಿದ್ಯಾರ್ಥಿಯು ಬಡಜನರು ಜೀವಿಸುವಕಡೆ ವಾರಕ್ಕೆ ಎರಡು ಷಿಲಿಂಗಿನಂತೆ ಒಂದು ಕೊಠಡಿಯನ್ನು ಬಾಡಿಗೆಮಾಡಿಕೊಂಡು ಲಾಕ್ಹಾರ್ಟ್ ಎಂಬಾತನ ಅಗ್ಗವಾದ ಹೋಟಲಿನಲ್ಲಿ ಎರಡು ಪೆನ್ನಿ (ಸುಮಾರು ಎರಡಾಣೆ) ಯಷ್ಟು ರೊಟ್ಟಿ ಕೋಕೋವನ್ನು ಕೊಂಡುಕೊಂಡು ಪ್ರತಿಹೊತ್ತಿನ ಊಟವನ್ನ ಸಾಗಿಸುತ್ತಿದ್ದನು. ಈ ರೀತಿಯಲ್ಲಿ ನಾನೂ ಇರಬೇಕೆಂದು ನಾನೇನೂ ಯೋಚಿಸಲಿಲ್ಲ. ಆದರೆ ಎರಡು ಕೊಠಡಿಯ ಬದಲು ಒಂದೇ ನನಗೆ ಸಾಕೆಂದೂ ನನ್ನ ಅಡಿಗೆಯನ್ನು ನಾನೇ ಮಾಡಿಕೊಳ್ಳುವುದು ಸಾಧ್ಯವೆಂದೂ ನನಗೆ ತೋರಿತು. ಹೀಗೆ ಮಾಡುವುದ

ರಿಂದ ತಿಂಗಳಿಗೆ ನಾಲ್ಕೈದು ಪೌಂಡಿನ ಉಳಿತಾಯವಾಗುತ್ತಿದ್ದಿತು. ಸರಳ ಜೀವನಕ್ಕೆ ಸಂಬಂಧಪಟ್ಟ ಕೆಲವು ಪುಸ್ತಕಗಳೂ ನನಗೆ ಸಿಕ್ಕಿ ದುವು. ಎರಡು ಕೊಠಡಿಗಳನ್ನು ಬಿಟ್ಟು ವಾರಕ್ಕೆ ಎಂಟು ಷಿಲಿಂಗ್ ಬಾಡಿಗೆಗೆ ಒಂದು ಕೊಠಡಿಯನ್ನು ಗೊತ್ತುಮಾಡಿ ಒಂದು ಅಗ್ಗಿಷ್ಟಿಕೆ ಯನ್ನು ಕೊಂಡುಕೊಂಡು ಬೆಳಗಿನ ಅಡಿಗೆಯನ್ನು ನಾನೇ ಮಾಡಲು ಪ್ರಾರಂಭಿಸಿದೆನು. ಈ ಕೆಲಸಕ್ಕೆ ನನಗೆ ಸುಮಾರು ೨೦ ನಿಮಿಷಕ್ಕಿಂತ ಹೆಚ್ಚಾಗಿ ಹಿಡಿಯುತ್ತಿರಲಿಲ್ಲ. ಜವೆಗೋಧಿ ಹಿಟ್ಟಿನ ಅಂಬಲಿಯನ್ನು ಬೇಯಿಸಿ ಕೋಕೋಗಾಗಿ ನೀರನ್ನು ಕುದಿಸುವುದಕ್ಕೆ ಇನ್ನೆಷ್ಟು ಹೊತ್ತು ಬೇಕು? ಮಧ್ಯಾಹ್ನ ಹೋಟಲಿನಲ್ಲಿ ಊಟಮಾಡುತ್ತಿದ್ದೆನ. ಸಂಜೆ ಕೊಠಡಿಯಲ್ಲೇ ರೊಟ್ಟಿ ತಿಂದು ಕೋಕೋ ಕುಡಿಯುತ್ತಿದ್ದೆನು. ಈ ರೀತಿಯಾಗಿ ೧। ಷಿಲಿಂಗಿನಲ್ಲಿ ದಿನದ ಊಟದ ಖರ್ಚನ್ನು (ಸುಮಾರು ೧೫ ಆಣೆ) ಮುಗಿಸಿಬಿಡುತ್ತಿದ್ದೆನು. ಈ ಸಮಯದಲ್ಲಿಯೇ ನಾನು ಹೆಚ್ಚಾಗಿ ಓದಬೇಕಾಗಿದ್ದಿತು. ಸರಳ ಜೀವನದಿಂದ ನನಗೆ ಬೇಕಾದಷ್ಟು ಹೊತ್ತು ಉಳಿಯುತ್ತಿದ್ದಿತು. ಎರಡನೆಯ ಸಲ ಪರೀಕ್ಷೆಗೆ ಹೋಗಿ ತೇರ್ಗಡೆಯಾದೆನು.

ಈ ರೀತಿಯಾದ ಸರಳತೆಯಿಂದ ನನ್ನ ಜೀವನವು ಶುಷ್ಕವಾಯಿ ತೆಂದು ಪಾಠಕರೆಣಿಸದಿರಲಿ. ಈ ಪರಿವರ್ತನದಿಂದ ನನ್ನ ಆಂತರಿಕ ಜೀವನದ ಶಕ್ತಿಯೂ ಬಾಹ್ಯಜೀವನದ ಶಕ್ತಿಯೂ ಒಂದುಗೂಡಿದುವು. ಮತ್ತು ನಮ್ಮ ಕುಟುಂಬದ ಪರಿಸ್ಥಿತಿಗೂ ಈ ರೀತಿಯಿರುವುದು ತಕ್ಕು ದಾಗಿದ್ದಿತು. ನನ್ನ ಜೀವನವು ಅಧಿಕವಾಗಿ ಸತ್ಯಮಯವಾಯಿತು. ಇದ ರಿಂದ ನನ್ನ ಆತ್ಮನ ಆನಂದವು ಎಲ್ಲೆಯಿಲ್ಲದುದಾಯಿತು.

# ೧೭

# ಆಹಾರವಿಷಯುಕವಾದ ಶೋಧನೆಗಳು

ನಾನು ಆತ್ಮಪರಾಮರ್ಶೆ ಮಾಡಿಕೊಂಡಂತೆಲ್ಲಾ ನನ್ನ ಬಾಹ್ಯ ಮತ್ತು ಆಂತರಿಕ ರೀತಿಗಳಲ್ಲಿ ಮಾರ್ಪಾಟು ಆವಶ್ಯಕವೆಂದು ತೋರುತ್ತಾ ಬಂದಿತು. ನನ್ನ ಜೀವನದ ರೀತಿಯೂ ಖರ್ಚುವೆಚ್ಚಗಳೂ ಮಾರ್ಪಾಟಾಗುತ್ತಾ ಬಂದಹಾಗೆಲ್ಲಾ ನನ್ನ ಆಹಾರವೂ ಅವುಗಳ ಜೊತೆಯಲ್ಲಿಯೇ ಅಥವಾ ಇನ್ನೂ ತೀವ್ರವಾಗಿಯೇ ಮಾರ್ಪಾಟಾಗುತ್ತಾ ಬಂದಿತು. ಶಾಕಾಹಾರದ ವಿಷಯುವಾಗಿ ಬರೆದ ಇಂಗ್ಲಿಷಿನ ಪುಸ್ತಕಗಳಲ್ಲಿ ಈ ವಿಷಯುವು ಬಹು ಸೂಕ್ಷ್ಮವಾಗಿ ಧಾರ್ಮಿಕ, ವೈಜ್ಞಾನಿಕ, ವ್ಯಾವಹಾರಿಕ ಮತ್ತು ವೈದ್ಯಶಾಸ್ತ್ರೀಯ ದೃಷ್ಟಿಯಿಂದ ಪರಿಶೀಲಿಸಲ್ಪಟ್ಟಿದ್ದಿತೆಂಬುದನ್ನು ನಾನು ಕಂಡೆನು. ನೈತಿಕದೃಷ್ಟಿಯಿಂದ ವಿಚಾರಿಸಿ ನೋಡಿದರೆ ಇವರ ಅಭಿಪ್ರಾಯುದಲ್ಲಿ ಮನುಷ್ಯನ ಆಧಿಪತ್ಯಕ್ಕೆ ಪಶು ಪಕ್ಷಿಗಳು ಒಳಗಾಗಿರುವುದು ಮನುಷ್ಯನು ಅವುಗಳನ್ನು ಕೊಂದು ತಿನ್ನುವುದಕ್ಕಲ್ಲ; ಮನುಷ್ಯರಲ್ಲಿ ಒಬ್ಬರಿಗೊಬ್ಬರು ನೆರವಾಗಿದ್ದು ಶಕ್ತರು ಅಶಕ್ತರನ್ನು ಕಾಪಾಡುವಂತೆ ಮನುಷ್ಯರು ಪಶು ಪಕ್ಷಿಗಳ ವಿಚಾರದಲ್ಲಿಯೂ ಇದೇ ರೀತಿಯಾಗಿ ವರ್ತಿಸಬೇಕೆಂದು. ಮನುಷ್ಯರು ಆಹಾರವನ್ನು ಸೇವಿಸುವುದು ಕೇವಲ ಭೋಗದೃಷ್ಟಿಯಿಂದಲ್ಲ. ಜೀವನವನ್ನು ನಡೆಸುವುದಕ್ಕೆ. ಈ ಅಭಿಪ್ರಾಯುಕ್ಕನುಸಾರವಾಗಿ ಇವರಲ್ಲಿ ಕೆಲವರು ಮಾಂಸವನ್ನು ಮಾತ್ರವೇ ಅಲ್ಲದೆ ಮೊಟ್ಟೆ ಮತ್ತು ಹಾಲು ಇವುಗಳನ್ನು ಕೂಡ ತ್ಯಜಿಸಬೇಕೆಂದು ಸೂಚಿಸಿ ತಾವೂ ಅದೇರೀತಿಯಾಗಿ ವರ್ತಿಸಿದ್ದರು. ಕೆಲವರು ಮನುಷ್ಯನ ಶರೀರರಚನೆಯನ್ನು ವಿಜ್ಞಾನದೃಷ್ಟಿಯಿಂದ ನೋಡಿ ಮನುಷ್ಯನು ತನ್ನ ಆಹಾರವನ್ನು ತಾನು ಬೇಯಿಸಿಕೊಂಡು ತಿನ್ನುವುದಕ್ಕೆ ಎಷ್ಟು ಆವಶ್ಯಕತೆಯೂ ಇಲ್ಲ; ಅವನ ಶರೀ

ರವು ಪಕ್ವವಾದ ಹಣ್ಣುಗಳನ್ನು ಸೇವಿಸುವುದಕ್ಕೆ ತಕ್ಕಹಾಗೆ ಮಾಡಲ್ಪಟ್ಟಿದೆ; ಹಾಲು ಕುಡಿಯಬೇಕಾದರೆ ತಾಯಿಯ ಹಾಲನ್ನು ಮಾತ್ರ ಕುಡಿಯಬಲ್ಲನು ; ಹಲ್ಲು ಬಂದೊಡನೆಯೇ ಅಗಿಯತಕ್ಕ ಆಹಾರವನ್ನು ತೆಗೆದುಕೊಳ್ಳಲು ಪ್ರಾರಂಭಿಸಬೇಕು ; ಎಂದು ಅಭಿಪ್ರಾಯಪಟ್ಟಿದ್ದರು. ವೈದ್ಯಶಾಸ್ತ್ರೀಯದೃಷ್ಟಿಯಿಂದ ಮಸಾಲೆಪದಾರ್ಥಗಳನ್ನು ಉಪಯೋಗಿಸಕೂಡದೆಂದೇ ಇವರ ಸೂಚನೆ. ವ್ಯಾವಹಾರಿಕ ಮತ್ತು ಆರ್ಥಿಕದೃಷ್ಟಿಯಿಂದ ಶಾಕಾಹಾರಕ್ಕೇ ಎಲ್ಲಕ್ಕಿಂತ ಕಡಿಮೆ ಖರ್ಚು ತಗಲುವುದೆಂದು ತೋರಿಸಿದರು. ಈ ವಿಚಾರಗಳೆಲ್ಲಾ ನನ್ನ ಮನಸ್ಸಿನಲ್ಲಿ ನಾಟಿದುವು. ಈ ಎಲ್ಲಾವಿಧದ ಶಾಕಾಹಾರಿಗಳೂ ಹೋಟಲಿನಲ್ಲಿ ನನಗೆ ಸಿಕ್ಕುತ್ತಿದ್ದರು. ವಿಲಾಯತಿಯಲ್ಲಿ ಈ ಸಂಬಂಧವಾದ ಒಂದು ಮಂಡಲಿಯಿದ್ದಿತು. ಅದು ತನ್ನದೇ ಒಂದು ಸಾಪ್ತಾಹಿಕ ಪತ್ರಿಕೆಯನ್ನು ನಡೆಸುತ್ತಿದ್ದಿತು. ನಾನು ಆ ಪತ್ರಿಕೆಯ ಚಂದಾದಾರನಾಗಿ ಆ ಮಂಡಲಿಯ ಸದಸ್ಯನಾದೆನು. ಸ್ವಲ್ಪ ದಿನದಲ್ಲಿಯೇ ನಾನು ಅದರ ಕಾರ್ಯನಿರ್ವಾಹಕ ಸಮಿತಿಯನ್ನೂ ಒಳಹೊಕ್ಕೆನು. ಇಲ್ಲಿ ನನಗೆ ಶಾಕಾಹಾರದ ಸ್ತಂಭರೂಪರಾಗಿದ್ದವರ ಪರಿಚಯವಾಯಿತು. ಆಹಾರದ ವಿಚಾರವಾದ ಶೋಧನೆಗಳನ್ನು ನಾನು ಸ್ವಂತವಾಗಿ ಪ್ರಾರಂಭಿಸಿದೆನು.

ಮನೆಯಿಂದ ತರಿಸಿದ ಮಿಠಾಯಿ ಮಸಾಲೆ ಮುಂತಾದುವುಗಳನ್ನು ತಿನ್ನುವುದನ್ನು ಬಿಟ್ಟುಬಿಟ್ಟೆನು. ಇವುಗಳ ವಿಚಾರವಾಗಿ ನನ್ನ ಮನಸ್ಸು ಬದಲಾಯಿಸಿದ್ದರಿಂದ ಇವುಗಳಮೇಲಿನ ಭ್ರಮೆಯೂ ಕಡಿಮೆಯಾಗಿ ರಿಚ್‌ಮಂಡಿನಲ್ಲಿ ನಿಸ್ಸಾರವಾಗಿ ಕಾಣುತ್ತಿದ್ದ ಪಲ್ಯವು ಈಗಲೂ ಕೂಡ ಮಸಾಲೆ ಇಲ್ಲದೆ ಮಾಡಿದ್ದರೂ ರುಚಿದೋರಹತ್ತಿತು. ಇದೇ ರೀತಿಯ ಅನೇಕ ಪ್ರಕಾರವಾದ ಅನುಭವಗಳು ರುಚಿಯ ನಿಜವಾದ ಸ್ಥಾನವು ನಾಲಗೆಯಲ್ಲ ಮನಸ್ಸು ಎಂದು ನನಗೆ ಕಲಿಸಿಕೊಟ್ಟುವು.

ಆರ್ಥಿಕದೃಷ್ಟಿಯಂತೂ ನನ್ನ ಮುಂದೆ ಸದಾ ಇರುತ್ತಲೇ ಇದ್ದಿತು. ಆಗಿನಕಾಲದಲ್ಲಿ ಕಾಫೀ ಚಹಾ ಮುಂತಾದುವುಗಳು ಹಾನಿಕಾರಕಗಳೆಂದೂ ಕೋಕೋ ಒಳ್ಳೆಯದೆಂದೂ ಅಭಿಪ್ರಾಯ ಪಡುವ ಪಂಗಡವೊಂದಿದ್ದಿತು. ಶರೀರವ್ಯಾಪಾರಕ್ಕೋಸ್ಕರ ಮಾತ್ರ ಆಹಾರವನ್ನು ಸೇವಿ

ಸಬೇಕೆಂದು ನಾನು ನಿಸ್ಸಂಶಯವಾಗಿ ತಿಳಿದುಕೊಂಡಿದ್ದುದರಿಂದ ಕಾಫಿ ಚಹಾಗಳನ್ನು ಬಿಟ್ಟು ಅವುಗಳ ಬದಲಾಗಿ ಕೋಕೋವನ್ನು ಉಪಯೋಗಿಸತೊಡಗಿದೆನು.

ನಾನು ಹೋಗುತ್ತಿದ್ದ ಹೋಟಲುಗಳಲ್ಲಿ ಎರಡು ವಿಭಾಗಗಳಿರುತ್ತಿದ್ದುವು. ಒಂದರಲ್ಲಿ ಯಾವ ಪದಾರ್ಥವು ಬೇಕೋ ಅದನ್ನು ಆರಿಸಿ ತೆಗೆದುಕೊಳ್ಳಬಹುದಾಗಿದ್ದಿತು. ಇದಕ್ಕೆ ಒಂದು ಷಿಲಿಂಗಿನಿಂದ ಎರಡು ಷಿಲಿಂಗಿನವರೆಗೆ ವೆಚ್ಚವಾಗುತ್ತಿದ್ದಿತು. ಈ ಭಾಗಕ್ಕೆ ಉತ್ತಮಸ್ಥಿತಿಯವರು ಹೋಗುತ್ತಿದ್ದರು. ಇನ್ನೊಂದು ಭಾಗದಲ್ಲಿ ಮೂರು ಪದಾರ್ಥಗಳನ್ನೂ ಒಂದು ಚೂರು ರೊಟ್ಟಿಯನ್ನೂ ೬ ಪೆನ್ನಿಗಳಿಗೆ (ಸುಮಾರು ೬ ಆಣೆ) ಕೊಡುತ್ತಿದ್ದರು. ನಾನು ಬಹಳ ಮಿತವ್ಯಯಮಾಡುತ್ತಿದ್ದ ಕಾಲದಲ್ಲಿ ಈ ಭಾಗಕ್ಕೇಹೋಗುತ್ತಿದ್ದೆನು.

ಮೇಲೆಹೇಳಿದ ಮುಖ್ಯ ಶೋಧನೆಯಲ್ಲದೆ ಇನ್ನೂ ಅನೇಕ ಸಣ್ಣಸಣ್ಣ ಶೋಧನೆಗಳನ್ನೂ ಮಾಡಿದೆನು. ಒಂದು ಸಮಯದಲ್ಲಿ ಇಷ್ಟಪದಾರ್ಥಗಳನ್ನು ಬಿಡುವುದು. ಒಂದುಸಲ ರೊಟ್ಟಿ ಮತ್ತು ಹಣ್ಣುಗಳು ಇವನ್ನು ಮಾತ್ರ ಸೇವಿಸುವುದು. ಒಂದುಸಲ ಬೆಣ್ಣೆ, ಹಾಲು ಮತ್ತು ಮೊಟ್ಟೆಗಳು ಇವುಗಳ ಆಧಾರದಮೇಲೆ ಮಾತ್ರ ಜೀವಿಸುವುದು, ಹೀಗೆ ಈ ಕಡೆಯ ಶೋಧನೆಯು ಉಲ್ಲೇಖಯೋಗ್ಯವಾಗಿದೆ. ಇದನ್ನು ೧೫ ದಿವಸ ಕೂಡ ನಡೆಸಲಿಲ್ಲ. ಪಿಷ್ಟವಿಲ್ಲದ ಪದಾರ್ಥಗಳನ್ನೇ ತಿನ್ನಬೇಕೆಂದು ಹೇಳುತ್ತಿದ್ದ ಸುಧಾರಕನು ಮೊಟ್ಟೆಯು ಬಹಳ ಉತ್ತಮವಾದ ಆಧಾರ ಪದಾರ್ಥವೆಂದು ಹೇಳುತ್ತಿದ್ದನಲ್ಲದೆ ಮೊಟ್ಟೆಯಲ್ಲಿ ಮಾಂಸವಿಲ್ಲವೆಂದು ಸಾಧಿಸುತ್ತಿದ್ದನು. ಮೊಟ್ಟೆಯನ್ನು ಸೇವಿಸುವುದರಿಂದ ಯಾವ ಜೀವಂತವಾದ ಪ್ರಾಣಿಗೂ ಹಿಂಸೆಮಾಡಿದಂತಾಗಲಿಲ್ಲವೆನ್ನುವುದು ಸ್ವತಸ್ಸಿದ್ಧವಾದ ಮಾತಾಯಿತು. ಈ ರೀತಿಯಾದ ಸಮರ್ಥನೆಗೆ ಮರುಳುಹೋಗಿ ನಾನು ನಮ್ಮ ತಾಯಿಗೆ ಕೊಟ್ಟಿದ್ದ ಮಾತಿಗೆ ವಿರೋಧವಾಗಿ ಮೊಟ್ಟೆಗಳನ್ನು ತಿಂದೆನು. ಆದರೆ ಈ ರೀತಿಯಾದ ಮರವಿಗೆ ನಾನು ಒಳಗಾದುದು ಒಂದು ಕ್ಷಣಮಾತ್ರ. ಪ್ರತಿಜ್ಞೆಗೆ ಹೊಸ ಅರ್ಥವನ್ನು ಮಾಡುವುದಕ್ಕೆ ನನಗೆ ಸ್ವಲ್ಪವೂ ಅಧಿಕಾರವಿರಲಿಲ್ಲ. ನನ್ನ ಕೈಯಲ್ಲಿ

ಪ್ರತಿಜ್ಞೆಮಾಡಿಸಿದಾಗ ನಮ್ಮ ತಾಯಿಯ ಮನಸ್ಸಿನಲ್ಲಿದ್ದುದು ನನಗೆ ಗೊತ್ತಿದ್ದಿತು. ಆಕೆಯು ಮಾಂಸವೆಂದುದರಲ್ಲಿ ಮೊಟ್ಟೆಯುಕೂಡ ಬಂದಿತೆಂದು ನನಗೆ ತಿಳಿದಿದ್ದಿತು. ಪ್ರತಿಜ್ಞೆಯ ನಿಜವಾದ ರಹಸ್ಯವು ನನ್ನ ಅರಿವಿಗೆ ಬಂದೊಡನೆಯೇ ನಾನು ಮೊಟ್ಟೆ ತಿನ್ನುವುದನ್ನೂ ಈ ಶೋಧನೆಯನ್ನೂ ಬಿಟ್ಟುಬಿಟ್ಟೆನು.

ಈ ಚರ್ಚೆಯೊಳಗಡಕವಾಗಿರುವ ಒಂದು ವಿಷಯವು ಸೂಕ್ಷ್ಮವಾಗಿಯೂ ವಿಚಾರಯೋಗ್ಯವಾಗಿಯೂ ಇದೆ. ವಿಲಾಯತಿಯಲ್ಲಿ ಮಾಂಸವೆನ್ನುವ ಮಾತಿಗೆ ಮೂರು ಅರ್ಥಗಳನ್ನು ಮಾಡುತ್ತಿದ್ದರು. ಒಂದರಪ್ರಕಾರ ಮಾಂಸವೆಂದರೆ ಪಶು ಪಕ್ಷಿಗಳ ಮಾಂಸ ಮಾತ್ರ. ಹೀಗೆ ವ್ಯಾಖ್ಯಾನಮಾಡುವವರು ಈ ಮಾಂಸವನ್ನು ತ್ಯಜಿಸಿದರೂ ಮೀನುಗಳನ್ನು ತಿನ್ನುತ್ತಿದ್ದರು. ಮೊಟ್ಟೆಯ ವಿಚಾರವಂತೂ ಹೇಳಬೇಕಾದುದೇ ಇಲ್ಲ. ಎರಡನೆಯದರ ಪ್ರಕಾರ ಮಾಂಸವೆಂದರೆ ಎಲ್ಲಾ ಸಜೀವ ಪ್ರಾಣಿಗಳ ಮಾಂಸ. ಇದರ ದೃಷ್ಟಿಯಿಂದ ಮೀನು ತ್ಯಾಜ್ಯ; ಮೊಟ್ಟೆಯು ಗ್ರಾಹ್ಯ. ಮೂರನೆಯ ಅರ್ಥದಪ್ರಕಾರ ಎಲ್ಲಾ ಪ್ರಾಣಿಗಳ ಮಾಂಸವೂ ಅವುಗಳಿಂದ ಉತ್ಪನ್ನವಾಗುವ ಸಕಲ ಪದಾರ್ಥಗಳೂ ಆದುದರಿಂದ ಮೊಟ್ಟೆ ಹಾಲು ಇವುಗಳೂ ತ್ಯಾಜ್ಯಗಳಾಗಿದ್ದುವು. ಮೊದಲನೆಯ ಅರ್ಥವನ್ನನುಸರಿಸಿದರೆ ನಾನು ಮೊಟ್ಟೆಯಲ್ಲದೆ ಮೀನನ್ನೂ ತಿನ್ನಬಹುದಾಗಿದ್ದಿತು. ಆದರೆ ನಾನು ನಮ್ಮ ತಾಯಿಯ ಮನಸ್ಸಿನಲ್ಲಿದ್ದ ಅರ್ಥವನ್ನೇ ಅನುಸರಿಸಬೇಕೆಂದು ನಿಶ್ಚಯಿಸಿದೆನು. ಆ ಪ್ರತಿಜ್ಞೆಯನ್ನು ನಡೆಸಬೇಕಾದರೆ ನಾನು ಮೊಟ್ಟೆಯನ್ನು ತೆಗೆದುಕೊಳ್ಳುವಹಾಗಿರಲಿಲ್ಲ. ಆದುದರಿಂದ ನಾನು ಅದನ್ನು ಸೇವಿಸುವುದನ್ನು ಬಿಟ್ಟುಬಿಟ್ಟೆನು. ಇದರಿಂದ ನನಗೆ ಕಷ್ಟವಾಯಿತು. ಏಕೆಂದರೆ ನಾನು ಬಹಳವಾಗಿ ವಿಚಾರಿಸಿದಮೇಲೆ ಶಾಕಾಹಾರದ ಭೋಜನಗೃಹಗಳಲ್ಲೆಲ್ಲಾ ಅನೇಕ ಪದಾರ್ಥಗಳಲ್ಲಿ ಮೊಟ್ಟೆಯು ಸೇರಿರುವುದೆಂದು ತಿಳಿಯಬಂದಿತು. ಆದುದರಿಂದ ಪದಾರ್ಥಗಳ ವಿಚಾರ ನನಗೆ ಚೆನ್ನಾಗಿ ಗೊತ್ತಿದ್ದಹೊರತು ಯಾವಯಾವಪದಾರ್ಥಕ್ಕೆ ಮೊಟ್ಟೆ ಹಾಕಿದೆಯೆಂದು ವಿಚಾರಿಸುವ ಪ್ರಸಂಗವು ಹಗಲೆಲ್ಲಾ ಒದಗುತ್ತಿದ್ದಿತು. ಏಕೆಂದರೆ ಅನೇಕ ವಿಧವಾದ ಕಡಬು ದೋಸೆಗಳ

ಲ್ಲೆಲ್ಲಾ ವೊಟ್ಟೆಯು ಸೇರಿಯೇ ಇರುತ್ತಿದ್ದಿತು. ಇದರಿಂದ ನನಗೆ ಒಂದು ವಿಧವಾದ ತೊಂದರೆಯೇ ಆದರೂ ನನ್ನ ಆಹಾರವು ಸುಲಭರೀತಿಯು ದಾಯಿತು. ಮತ್ತೊಂದು ಕಡೆ ಇದರಿಂದ ನನಗೆ ರುಚಿಯಾಗಿ ತೋರು ತ್ತಿದ್ದ ಕೆಲವು ತಿಂಡಿಗಳನ್ನು ಬಿಡಬೇಕಾಗಿ ಬಂದು ಸ್ವಲ್ಪ ಮುಜುಗರಕ್ಕೆ ಕಾರಣವಾಯಿತು. ಆದರೆ ಇದು ಕ್ಷಣಿಕವಾಗಿ ಮಾತ್ರ ಇದ್ದು ಕಡೆಗೆ ಪ್ರತಿಜ್ಞೆಯನ್ನು ಖಂಡಿತದಿಂದ ನಡೆಸಿದುದರಿಂದ ಇನ್ನೂ ಆರೋಗ್ಯಕರ ವಾದ, ಸೂಕ್ಷ್ಮವಾದ, ಚಿರಸ್ಥಾಯಿಯಾದ ಆಂತರಿಕ ರುಚಿಯೊಂದು ನನ್ನಲ್ಲಿ ಉತ್ಪನ್ನವಾಯಿತು.

ಆದರೆ ನಿಜವಾದ ಪರೀಕ್ಷೆಯು ಇನ್ನೂ ಬರಬೇಕಾಗಿದ್ದಿತು. ಈ ಪರೀಕ್ಷೆಯು ನನ್ನ ಎರಡನೆಯ ವ್ರತಕ್ಕೆ ಸಂಬಂಧಪಟ್ಟುದು. ಆದರೆ ರಾಮನ ರಕ್ಷಣೆಗೆ ಒಳಗಾದವರಿಗೆ ಕೆಡಕುಗೈಯು ಬಲ್ಲವರಾರು?

ಪ್ರತಿಜ್ಞೆಗಳ ಅರ್ಥದ ವಿಚಾರವಾಗಿ ಇಲ್ಲಿ ಕೆಲವು ಮಾತುಗಳನ್ನು ಹೇಳುವುದು ಅನುಚಿತವಾಗಿರಲಾರದು. ಭರವಸೆಯ ಒಪ್ಪಂದಗಳು ಪ್ರಪಂಚದ ಎಲ್ಲಾ ಭಾಗಗಳಲ್ಲೂ ಎಷ್ಟೋ ಜಗಳಗಳಿಗೆ ಕಾರಣಗಳಾ ಗಿವೆ. ಈ ಒಪ್ಪಂದಗಳನ್ನು ಎಷ್ಟೇ ಸ್ಪಷ್ಟವಾದ ಭಾಷೆಯಲ್ಲಿ ಬರೆಯಲಿ ಜನರು ಅವುಗಳನ್ನು ಹಾಗೂ ಹೀಗೂ ತಮ್ಮ ಅನುಕೂಲಕ್ಕೆ ಸರಿ ಯಾಗಿ ತಿರುಗಿಸಿಕೊಳ್ಳುತ್ತಾರೆ. ಇಂತಹ ಜನರು ಧನಿಕನಿಂದ ದರಿದ್ರನ ವರೆಗೆ, ಅರಸನಿಂದ ಆಳಿನವರೆಗೆ, ಸಮಾಜದಲ್ಲೆಲ್ಲಿಯೂ ಕಂಡುಬರು ತ್ತಾರೆ. ಸ್ವಾರ್ಥತೆಯು ಎಲ್ಲರನ್ನೂ ಕುರುಡರನ್ನಾಗಿ ಮಾಡುತ್ತದೆ. ಎರಡೂ ಕಡೆ ಅರ್ಥವಾಗುವ ಮಧ್ಯದಾರಿಯನ್ನು ಹುಡುಕಿ ಅರ್ಥವನ್ನು ಮಾಡಿ ತಮ್ಮನ್ನು ತಾವೇ ಮೋಸಮಾಡಿಕೊಂಡು ಲೋಕಕ್ಕೂ ದೇವ ರಿಗೂ ಮಂಕುಬೂದಿಯೆರಚಲೆಳಸುತ್ತಾರೆ. ಯಾರೆದುರಿಗೆ ನಾವು ಮಾತುಕೊಟ್ಟಿರುವೆವೋ ಅವರು ನಿರ್ವಂಚನೆಯಿಂದ ಮಾಡುವ ಅರ್ಥ ವನ್ನು ಒಪ್ಪುವುದೊಂದು ಉತ್ತಮಮಾರ್ಗ. ಇನ್ನೊಂದು ಇದೇರೀತಿ ಯಾದ ಉತ್ತಮವಾದ ಮಾರ್ಗವೇನೆಂದರೆ ಎರಡು ಅರ್ಥವಾಗುವ ಸಂದ ರ್ಭದಲ್ಲಿ ದುರ್ಬಲಪಕ್ಷದವರ ಅರ್ಥವನ್ನೇ ಅನುಸರಿಸುವುದು. ಈ ಉತ್ತಮಮಾರ್ಗಗಳನ್ನು ತಪ್ಪಿ ನಡೆಯುವುದು ಜಗಳಕ್ಕೂ ಅಧರ್ಮಕ್ಕೂ

ಕಾರಣವಾಗುತ್ತದೆ. ಈ ನಡತೆಗೆ ಅಸತ್ಯವೇ ತಳಹದಿ. ಸತ್ಯೋಪಾಸಕನೊಬ್ಬನಿಗೇ ಈ ಮಾರ್ಗವು ಸುಗಮವಾದುದು. ಇಂತಹ ಮನುಷ್ಯನು ಪಂಡಿತರ ಸಲಹೆಯನ್ನು ಕೇಳಬೇಕಾದುದೇ ಇಲ್ಲ. ಈ ಮಾರ್ಗವನ್ನನುಸರಿಸಿದರೆ ಮಾಂಸಾಹಾರದ ಸಂಬಂಧವಾಗಿ ನನ್ನ ತಾಯಿಯ ಅರ್ಥದ ಪ್ರಕಾರವೇ ನಾನು ನಡೆಯಬೇಕಾದ್ದು; ನನ್ನ ಹೆಚ್ಚಾದ ಅನುಭವದಿಂದಾಗಲಿ ನಾನು ವಿದ್ಯಾವಂತನೆಂಬ ಹೆಮ್ಮೆಯಿಂದಾಗಲಿ ನಾನು ಮಾಡಿಕೊಂಡ ಅರ್ಥದ ಪ್ರಕಾರವಲ್ಲ.

ಸೀಮೆಯಲ್ಲಿ ನನ್ನ ಶೋಧನೆಗಳು ಆರೋಗ್ಯದ ಮತ್ತು ಆರ್ಥಿಕ ದೃಷ್ಟಿಯಿಂದ ಮಾಡಲ್ಪಟ್ಟುವು. ದಕ್ಷಿಣ ಆಫ್ರಿಕಕ್ಕೆ ಹೋಗುವವರೆಗೂ ಇವು ಧಾರ್ಮಿಕರೂಪವನ್ನಿನ್ನೂ ಹೊಂದಿರಲಿಲ್ಲ. ಈ ದೃಷ್ಟಿಯಿಂದ ನಾನು ಅಲ್ಲಿ ಕಠಿಣವಾದ ಶೋಧನೆಗಳನ್ನು ನಡೆಸಿದೆನು. ಇವುಗಳನ್ನು ಮುಂದೆ ವಿವರಿಸುವೆನು. ಆದರೆ ಇವೆಲ್ಲವುಗಳ ಬೀಜವೂ ವಿಲಾಯತಿಯಲ್ಲೇ ಬಿತ್ತಲ್ಪಟ್ಟಿತೆಂದು ಹೇಳಬಹುದು.

ಹೊಸ ಧರ್ಮವನ್ನು ಸ್ವೀಕಾರಮಾಡಿದವನಿಗೆ ಆ ಧರ್ಮದಲ್ಲೇ ಜನ್ಮಗ್ರಹಣಮಾಡಿದವನಿಗಿಂತ ಹೆಚ್ಚಾದ ಉತ್ಸಾಹವಿರುತ್ತದೆ. ಶಾಕಾಹಾರವು ವಿಲಾಯತಿಯಲ್ಲಿ ಹೊಸ ಧರ್ಮವಾಗಿದ್ದಿತು. ನನ್ನ ವಿಷಯವೂ ಹಾಗೆಯೇ. ಏಕೆಂದರೆ ಬುದ್ಧಿಪೂರ್ವಕವಾಗಿ ಮಾಂಸಾಹಾರವೇ ಒಳ್ಳೆಯದೆಂದು ತಿಳಿದುಕೊಂಡು ನಾನು ಸೀಮೆಗೆ ಹೋದೆನು. ಶಾಕಾಹಾರವೇ ನೀತಿಯುತವಾದ್ದೆಂದು ನಾನು ಜ್ಞಾನಪೂರ್ವಕವಾಗಿ ತಿಳಿದುಕೊಂಡುದು ಆಮೇಲೆ. ಆದುದರಿಂದ ನಾನು ಹೊಸ ಧರ್ಮವನ್ನೇ ಪ್ರವೇಶಿಸಿದಹಾಗಾಯಿತು. ಅದಕ್ಕೆ ತಕ್ಕಹಾಗೆ ಉತ್ಸಾಹವಿದ್ದುದರಿಂದ ನಾನಿದ್ದ ಬೇಸ್ವಾಟರ್ ಮೊಹಲ್ಲೆಯಲ್ಲಿ ಶಾಕಾಹಾರಿಗಳ ಮಂಡಲಿಯೊಂದನ್ನು ಸ್ಥಾಪಿಸಬೇಕೆಂದು ನಿಶ್ಚಯಿಸಿ ನಾನು ಅಲ್ಲಿಯೇ ವಾಸಿಸುತ್ತಿದ್ದ ಸರ್ ಎಡ್ವಿನ್ ಆರ್ನಾಲ್ಡರನ್ನು ಉಪಾಧ್ಯಕ್ಷರಾಗಬೇಕೆಂದು ಕೇಳಿಕೊಂಡೆನು. ಅವರು ಒಪ್ಪಿದರು. 'ಶಾಕಾಹಾರಿ' (ವೆಜಟೇರಿಯನ್) ಎಂಬ ವೃತ್ತಪತ್ರದ ಸಂಪಾದಕರಾದ ಡಾ|| ಓಲ್ಡ್‌ಫೀಲ್ಡರು ಅಧ್ಯಕ್ಷರಾದರು; ನಾನೇ ಕಾರ್ಯದರ್ಶಿಯಾದೆನು. ಕೆಲವು ಕಾಲ

ಆ ಮಂಡಲಿಯು ಸರಿಯಾಗಿ ನಡೆದು ನಿಂತುಹೋಯಿತು. ಏಕೆಂದರೆ ನಾನು ನನ್ನ ಪದ್ಧತಿಯಪ್ರಕಾರ ಆ ಮೊಹಲ್ಲೆಯನ್ನು ಬಿಟ್ಟು ಬೇರೆ ಕಡೆಗೆ ಹೋದೆನು. ಆದರೆ ಈ ಅಲ್ಪವಾದ ಮತ್ತು ಸ್ವಲ್ಪ ದಿನದ ಅನುಭವದಿಂದ ನನಗೆ ಸಂಸ್ಥೆಗಳನ್ನು ಸ್ಥಾಪಿಸುವುದು, ಅವುಗಳನ್ನು ನಡೆಸುವುದು ಈ ವಿಚಾರವಾದ ಶಿಕ್ಷಣವು ದೊರಕಿತು.



## ೧೮
# ಲಜ್ಜಾಶೀಲತೆ—ನನ್ನ ಆಶ್ರಯ

ನಾನು ಶಾಕಾಹಾರ ಮಂಡಲಿಯ ಕಾರ್ಯನಿರ್ವಾಹಕ ಸಮಿತಿಗೆ ಚುನಾಯಿಸಲ್ಪಟ್ಟೆನು. ನಾನು ಪ್ರತಿಯೊಂದು ಸಭೆಗೂ ತಪ್ಪದೆ ಹೋದರೂ ಯಾವಾಗಲೂ ಬಾಯಿಕಟ್ಟಿದಂತೆ ಇರುತ್ತಿದ್ದೆನು. ಡಾ|| ಓಲ್ಡ್‌ಫೀಲ್ಡ್‌ರು ಒಂದುಸಲ ನನಗೆ "ನೀನು ನನ್ನ ಸಂಗಡ ಸರಿಯಾಗಿಯೇ ಮಾತನಾಡುತ್ತೀಯೆ. ಆದರೆ ಸಭೆಯಲ್ಲಿ ಬಾಯಿ ಬಿಡುವುದೇ ಇಲ್ಲವೇಕೆ? ನಿನ್ನನ್ನು ಗಂಡುಜೇನಿನೊಡನೆ ಹೋಲಿಸಿದರೆ ಸರಿ ಹೋಗುತ್ತದೆ." ಎಂದು ಹೇಳಿದರು. ನನಗೆ ಈ ವಿನೋದದ ರಹಸ್ಯವು ತಿಳಿಯಿತು. ಜೇನುಗಳು ಯಾವಾಗಲೂ ಕೆಲಸಮಾಡುತ್ತಲೇ ಇರುತ್ತವೆ. ಆದರೆ ಗಂಡುಜೇನುಗಳು ಖಾನಪಾನಗಳಲ್ಲದೆ ಬೇರೊಂದು ಬದುಕನ್ನೂ ಮಾಡುವುದಿಲ್ಲ. ಸಮಿತಿಯಲ್ಲಿ ಇತರರು ತಮ್ಮತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿರುವಾಗ ನಾನು ಬಾಯಿಮುಚ್ಚಿಕೊಂಡು ಕುಳಿತಿರುತ್ತಿದ್ದುದು ವಿಚಿತ್ರವೇ ಸರಿ. ನನಗೆ ಮಾತನಾಡಬೇಕೆಂಬ ಇಷ್ಟವು ಯಾವಾಗಲೂ ಬರಲಿಲ್ಲವೆಂದಲ್ಲ. ಹೇಗೆ ಮಾತನಾಡುವುದು ಎನ್ನುವುದು ನನಗೆ ತಿಳಿಯುತ್ತಿರಲಿಲ್ಲ. ಉಳಿದವರೆಲ್ಲರೂ ನನಗಿಂತ ಹೆಚ್ಚಾಗಿ ವಿಷಯಗಳನ್ನು ತಿಳಿದಿರುವವರಂತೆ ತೋರುತ್ತಿದ್ದರು. ಇದಲ್ಲದೆ ಯಾವಾಗಲಾದರೂ ಒಂದುಸಲ ಮಾತನಾಡಬೇಕೆಂದು ಮನಸ್ಸನು ಗಟ್ಟಿಮಾಡಿಕೊಳ್ಳುವಷ್ಟರಲ್ಲಿಯೇ ಹೊಸ ವಿಷಯದ ಚರ್ಚೆಯು ಪ್ರಾರಂಭವಾಗುತ್ತಿದ್ದಿತು. ಈ ರೀತಿಯಾಗಿ ಎಷ್ಟೋ ದಿನಗಳು ಕಳೆದು ಹೋದುವು.

ಈ ಮಧ್ಯೆ ಒಂದು ದೊಡ್ಡ ಪ್ರಶ್ನೆಯು ಚರ್ಚೆಗೆ ಬಂದಿತು. ಆ ದಿನ ತಪ್ಪಿಸಿಕೊಳ್ಳುವುದು ಸರಿಯಲ್ಲವೆಂದೂ ನನ್ನ ಅಭಿಪ್ರಾಯವನ್ನು ವ್ಯಕ್ತ

ಪಡಿಸದಿರುವುದು ಹೇಡಿತನವೆಂದೂ ನನಗೆ ತೋರಿತು. ಈ ವಿಷಯವು ಚರ್ಚೆಗೆ ಬಂದುದು ಹೀಗೆ:—'ಟೇಮ್ಸ್ ಐರನ್ ವರ್ಕ್ಸ್ ಎಂಬ ಕಬ್ಬಿಣದ ಕಾರ್ಖಾನೆಯ ಮಾಲಿಕರಾದ ಹಿಲ್ಸ್ ಎಂಬವರು ನಮ್ಮ ಮಂಡಲಿಯ ಅಧ್ಯಕ್ಷರಾಗಿದ್ದರು. ಅವರು ಪ್ಯೂರಿಟನ್ ಪಂಗಡಕ್ಕೆ ಸೇರಿದವರಾಗಿದ್ದರು. ಈತನ ಧನಸಹಾಯದಿಂದಲೇ ಮಂಡಲಿಯು ಜೀವಿಸಿತ್ತೆಂದು ಹೇಳಬಹುದು. ಸಮಿತಿಯ ಅನೇಕ ಸದಸ್ಯರೂ ಹೆಚ್ಚುಕಡಿಮೆ ಈತನ ಆಶ್ರಯದಲ್ಲೇ ಇದ್ದರು. ಶಾಕಾಹಾರದ ಸಂಬಂಧವಾಗಿ ಹೆಸರು ಪಡೆದ ಡಾ|| ಆಲಿನ್‌ಸನ್ನರೂ ಈ ಸಮಿತಿಯಲ್ಲಿದ್ದರು. ಆ ಸಮಯದಲ್ಲಿ ಪ್ರಜೋತ್ಪತ್ತಿಯನ್ನು ಕೃತ್ರಿಮೋಪಾಯಗಳಿಂದ ತಡೆಯುವ ವಿಚಾರವಾಗಿ ಚಳವಳವು ಪ್ರಾರಂಭವಾಗಿದ್ದಿತು. ಡಾ|| ಆಲಿನ್‌ಸನ್ನರು ಈ ಚಳವಳಿಗೆ ಸೇರಿ ಈ ವಿಧಾನವನ್ನು ಕೂಲಿ ಜನರಿಗೆ ಬೋಧಿಸುತ್ತಿದ್ದರು. ಹಿಲ್ಸರ ಅಭಿಪ್ರಾಯದಲ್ಲಿ ಈ ಉಪಾಯಗಳು ಮನುಷ್ಯರ ನೀತಿಯನ್ನೇ ಹಾಳುಮಾಡುವುವಾಗಿದ್ದುವು. ಶಾಕಾಹಾರ ಮಂಡಲಿಯ ಉದ್ದೇಶವು ಆಹಾರ ವಿಷಯಕವಾದ ಸುಧಾರಣೆಯಲ್ಲದೆ ನೀತಿವಿಚಾರಗಳ ತಿದ್ದುಪಾಟೂ ಒಂದೆಂದೂ ಡಾ|| ಆಲಿನ್‌ಸನ್ನರಂಥ ನೀತಿಮಾರ್ಗಕ್ಕೆ ವಿರೋಧವಾದ ಅಭಿಪ್ರಾಯವುಳ್ಳವರನ್ನು ಈ ಮಂಡಲಿಯ ಸದಸ್ಯರಾಗಿರಲು ಬಿಡಕೂಡದೆಂದೂ ಇವರ ಮತ. ಆದುದರಿಂದ ಡಾ|| ಆಲಿನ್‌ಸನ್ನರನ್ನು ಮಂಡಲಿಯಿಂದ ತೆಗೆದುಹಾಕಬೇಕೆಂದು ಒಂದು ಸೂಚನೆಯು ತರಲ್ಪಟ್ಟಿತು. ಈ ಚರ್ಚೆಯಲ್ಲಿ ನನಗೆ ಬಹಳ ಕುತೂಲಹವಿದ್ದಿತು. ಡಾ|| ಆಲಿನ್‌ಸನ್ನರ ಅಭಿಪ್ರಾಯಗಳು ನನಗೆ ಹಾನಿಕಾರಕಗಳಾಗಿ ಕಂಡುವು. ಮತ್ತು ಹಿಲ್ಸ್‌ರವರು ನೀತಿದೃಷ್ಟಿಯಿಂದ ಅವರ ಅಭಿಪ್ರಾಯಗಳನ್ನು ವಿರೋಧಿಸುವುದು ನ್ಯಾಯವೆಂದು ತೋರಿತು. ಇದಲ್ಲದೆ ಹಿಲ್ಸ್‌ರವರ ವಿಷಯದಲ್ಲಿಯೂ ಅವರ ಔದಾರ್ಯದಲ್ಲಿಯೂ ನನಗೆ ಬಹಳ ಆದರವಿದ್ದಿತು. ಆದರೆ ಶಾಕಾಹಾರವನ್ನು ಅಭಿವೃದ್ಧಿಪಡಿಸುವುದಕ್ಕೋಸ್ಕರ ಸ್ಥಾಪಿತವಾದ ಮಂಡಲಿಯಿಂದ ಕೇವಲ ಪ್ಯೂರಿಟನರ ನೀತಿಯ ಪ್ರಸಾರವು ಮಂಡಲಿಯ ಉದ್ದೇಶಗಳಲ್ಲಿ ಒಂದೆಂದು ಒಪ್ಪಿಕೊಳ್ಳದಿದ್ದುದಕ್ಕಾಗಿ ಬಹಿಷ್ಕಾರ

ಹಾಕುವುದು ನ್ಯಾಯಸಮ್ಮತವಲ್ಲವೆಂದು ನನಗೆ ತೋರಿತು. ಈ ವಿಚಾರವಾಗಿ ಹಿಲ್ಸರ ಅಭಿಪ್ರಾಯಗಳು ಅವರಿಗೆ ಮಾತ್ರ ಸಂಬಂಧಪಟ್ಟುವಾಗಿದ್ದವು. ಮಂಡಲಿಯ ಉದ್ದೇಶವು ಶಾಕಾಹಾರದ ಪ್ರಚಾರವೇ ಹೊರತು ಯಾವ ನೀತಿಯ ಪ್ರಚಾರವಾಗಿರಲಿಲ್ಲವಾದುದರಿಂದ ಹಿಲ್ಸರ ಅಭಿಪ್ರಾಯಗಳಿಗೂ ಮಂಡಲಿಗೂ ಏನೂ ಸಂಬಂಧವಿರುವಂತೆ ತೋರಲಿಲ್ಲ. ನೀತಿಯ ವಿಚಾರದಲ್ಲಿ ಏನೇ ಅಭಿಪ್ರಾಯವಿರಲಿ ಯಾವ ಶಾಕಾಹಾರಿಯಾಗಲಿ ಸಂಘದ ಸದಸ್ಯನಾಗಿರಬಹುದೆನ್ನುವುದೇ ನನ್ನ ಅಭಿಪ್ರಾಯವಾಗಿದ್ದಿತು.

ನನ್ನಂತೆಯೇ ಅಭಿಪ್ರಾಯವುಳ್ಳ ಇನ್ನೂ ಕೆಲವರು ಸಮಿತಿಯಲ್ಲಿದ್ದರು. ಆದರೆ ನನ್ನ ಮನಸ್ಸಿನಲ್ಲಿದ್ದುದನ್ನು ನಾನು ಹೇಳಲೇಬೇಕೆಂದು ನನಗೆ ತೋರಿತು. ಇದನ್ನು ವ್ಯಕ್ತಪಡಿಸುವುದು ಹೇಗೆ ಎನ್ನುವದೊಂದು ದೊಡ್ಡ ಪ್ರಶ್ನೆಯಾಯಿತು. ಮಾತನಾಡುವಷ್ಟು ನನಗೆ ಧೈರ್ಯವಿರಲಿಲ್ಲ. ಆದ್ದರಿಂದ ನನ್ನ ಮನಸ್ಸಿನಲ್ಲಿದ್ದುದನ್ನೆಲ್ಲಾ ಬರೆದಿಡಬೇಕೆಂದು ನಿಶ್ಚಯಿಸಿದೆನು. ಹೀಗೆ ಬರೆದುದನ್ನು ಕಿಸೆಯಲ್ಲಿಟ್ಟುಕೊಂಡು ಸಭೆಗೆ ಹೋದೆನು. ಆದರೆ ನನಗೆ ಜ್ಞಾಪಕವಿರುವಮಟ್ಟಿಗೆ ಅದನ್ನು ಓದುವುದಕ್ಕೆ ಕೂಡ ನನಗೆ ಧೈರ್ಯ ಬರಲಿಲ್ಲ. ಅಧ್ಯಕ್ಷರು ಅದನ್ನು ಇನ್ನಾರಕೈಯಲ್ಲೋ ಓದಿಸಿದರು. ಡಾ|| ಅಲಿನ್‌ಸನ್‌ರವರ ಪಕ್ಷಕ್ಕೆ ಜಯವಾಗಲಿಲ್ಲ. ಈ ರೀತಿಯಾದ ನನ್ನ ಮೊದಲನೆಯ ಹೋರಾಟದಲ್ಲಿಯೇ ನಾನು ಸೋಲುವ ಪಕ್ಷಕ್ಕೆ ಸೇರಿದವನಾದೆನು. ಆದರೆ ನಮ್ಮ ಪಕ್ಷವೇ ಸತ್ಯದ ಪಕ್ಷವೆಂದು ನನಗೆ ನಂಬಿಕೆಯಿದ್ದಿತ್ತು. ಇದರಿಂದ ನನಗೆ ಬಹಳ ಸಂತೋಷವಾಯಿತು. ಈ ಸಂಗತಿಯು ನಡೆದಮೇಲೆ ನಾನು ಸಮಿತಿಯನ್ನು ಬಿಟ್ಟುಬಿಟ್ಟೆನೆಂದು ಎಲ್ಲೋ ಸ್ವಲ್ಪ ನೆನಪಿದೆ.

ಈ ಮುಖಹೇಡಿತನವು ನಾನು ಸೀಮೆಯಲ್ಲಿರುವಷ್ಟು ದಿನವೂ ಇದ್ದಿತು. ಯಾರನ್ನಾದರೂ ಸುಮ್ಮನೆ ನೋಡಬೇಕೆಂದು ಹೋದಾಗ ಕೂಡ ನಾಲ್ಕಾರು ಜನರು ಎದುರಿಗಿದ್ದರೆ ನನ್ನ ಬಾಯಿಂದ ಮಾತೇ ಹೊರಡುತ್ತಿರಲಿಲ್ಲ.

ಒಂದು ಸಲ ನಾನೂ ಮುಜುಮುದಾರರೂ ವೆಂಟ್ನರ್ ಎಂಬ ಸ್ಥಳಕ್ಕೆ ಹೋದೆವು. ಅಲ್ಲಿ ಒಬ್ಬ ಶಾಕಾಹಾರಿಗಳ ಮನೆಯಲ್ಲಿ ಇಳಿದೆವು. 'ಎಥಿಕ್ಸ್ ಆಫ್ ಡಯೆಟ್' (ಆಹಾರ ನೀತಿ) ಎಂಬ ಪುಸ್ತಕವನ್ನು ಬರೆದಿದ್ದ ಹವರ್ಡ್ ಎಂಬವರೂ ಆ ಜಲಪಾನಚಿಕಿತ್ಸೆಯ ಊರಿನಲ್ಲಿಯೇ ಇದ್ದರು. ನಾವು ಅವರನ್ನು ಹೋಗಿ ನೋಡಿದೆವು. ಶಾಕಾಹಾರಪ್ರಚಾರಕ್ಕೋಸ್ಕರವಾಗಿ ಆ ಊರಿನಲ್ಲಿ ಒಂದು ಸಭೆಯು ನಡೆಯುವುದಿದ್ದಿತು. ಅಲ್ಲಿ ನಾವು ಮಾತನಾಡಬೇಕೆಂದು ಇವರು ಇಚ್ಛಿಸಿದರು. ನಾವಿಬ್ಬರೂ ಇದಕ್ಕೆ ಒಪ್ಪಿದೆವು. ಬರೆದುಕೊಂಡು ಬಂದ ವ್ಯಾಖ್ಯಾನವನ್ನು ಸಭೆಯಲ್ಲಿ ಓದುವುದೇನೂ ತಪ್ಪಲ್ಲವೆಂದು ನಾನು ವಿಚಾರಿಸಿ ತಿಳಿದುಕೊಂಡಿದ್ದೆನು. ಅನೇಕರು ಅಚ್ಚುಕಟ್ಟಾಗಿ ಸಂಕ್ಷೇಪವಾಗಿರುವುದಕ್ಕಾಗಿ ತಮ್ಮ ಭಾಷಣಗಳನ್ನು ಈ ರೀತಿಯಾಗಿ ಬರೆದುಕೊಂಡು ಓದುತ್ತಿದ್ದರೆಂದು ನನಗೆ ಗೊತ್ತಿದ್ದಿತು. ಯಾವ ಸನ್ನಾಹವೂ ಇಲ್ಲದೆ ಸಭೆಯಲ್ಲಿ ಎದ್ದುನಿಂತು ಮಾತನಾಡುವುದು ನನ್ನ ಕೈಲಾಗದ ಮಾತೆಂದು ನಾನು ಅರಿತಿದ್ದೆನು. ಆದುದರಿಂದ ನಾನು ನನ್ನ ಭಾಷಣವನ್ನು ಬರೆದುಕೊಂಡು ಹೋಗಿದ್ದೆನು. ಓದುವುದಕ್ಕೆಂದು ಎದ್ದು ನಿಂತುಕೊಂಡೆನು. ಆದರೆ ಮಾತೇ ಹೊರಡಲಿಲ್ಲ. ಕಣ್ಣು ಕತ್ತಲುಗಟ್ಟಿಕೊಂಡು ಬಂದಿತು. ಕೈಕಾಲುಗಳು ನಡುಗತೊಡಗಿದುವು. ನಾನು ಬರೆದುಕೊಂಡು ಬಂದಿದ್ದ ಭಾಷಣವು ಫೂಲ್ಸ್‌ಕ್ಯಾಪ್ ಕಾಗದದ ಒಂದು ಪುಟದಷ್ಟುಕೂಡ ಇರಲಿಲ್ಲ. ಮುಜುಮುದಾರರು ಇದನ್ನು ನನಗಾಗಿ ಓದಬೇಕಾಯಿತು. ಅವರ ಸ್ವಂತ ಭಾಷಣವಂತೂ ಬಹಳ ಚೆನ್ನಾಗಿದ್ದಿತು. ಕೇಳುತ್ತಿದ್ದವರು ಚಪ್ಪಾಳೆ ಹೊಡೆದು ತಮ್ಮ ಸಂತೋಷವನ್ನು ಪ್ರಕಟಿಸುತ್ತಿದ್ದರು. ನನಗೆ ಬಹಳ ನಾಚಿಕೆಯಾಯಿತು. ಮಾತನಾಡುವ ಯೋಗ್ಯತೆಯಿಲ್ಲವೆಂದು ನನಗೆ ಬಹಳ ದುಃಖವಾಯಿತು.

ನಾನು ವಿಲಾಯತಿಯಿಂದ ಹೊರಟುಬರುವಾಗ ಮಾಡಿದ ಭಾಷಣವೇ ನಾನು ನಾಲ್ಕಾರು ಜನರೆದುರಿಗೆ ಮಾತನಾಡಲು ಅಲ್ಲಿ ಮಾಡಿದ ಕಡೆಯ ಪ್ರಯತ್ನ. ಈ ಪ್ರಯತ್ನವು ಕೂಡ ಹಾಸ್ಯಾಸ್ಪದವಾಗಿಯೇ ಪರಿಣಮಿಸಿತು. ಸೀಮೆಯನ್ನು ಬಿಟ್ಟು ಬರುವುದಕ್ಕೆ

ಮೊದಲು ಶಾಕಾಹಾರಿಗಳಾದ ನನ್ನ ಸ್ನೇಹಿತರನ್ನೂ ಹಿಂದೆ ಹೇಳಿದ ಹಾಲ್ಬಾರ್ನ್ ಭೋಜನಗೃಹಕ್ಕೆ ಊಟಕ್ಕೆ ಕರೆದೆನು "ಶಾಕಾಹಾರದ ಭೋಜನ ಗೃಹಗಳಲ್ಲಿ ಶಾಕಾಹಾರವು ದೊರೆತೇ ದೊರೆಯುತ್ತದೆ. ಮಾಂಸಾಹಾರದ ಭೋಜನ ಗೃಹದಲ್ಲಿ ಕೂಡ ಶಾಕಾಹಾರದ ಊಟಕ್ಕೆ ಏರ್ಪಾಡು ಮಾಡುವುದಕ್ಕಾಗಕೂಡದೇಕೆ ?" ಎಂದು ನನ್ನಲ್ಲಿ ನಾನೇ ಎಂದುಕೊಂಡು ಆ ಭೋಜನಗೃಹದ ವ್ಯವಸ್ಥಾಪಕನಿಗೆ ಶುದ್ಧ ಶಾಕಾಹಾರದ ಭೋಜನವನ್ನು ಸಿದ್ಧಪಡಿಸಬೇಕೆಂದು ಹೇಳಿದೆನು. ಇದರ ವಿಚಾರವನ್ನು ಕೇಳಿ ಶಾಕಾಹಾರಿಗಳು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಇಂತಹ ಭೋಜನಗಳನ್ನು ಎಲ್ಲ ಕಡೆಯಲ್ಲಿಯೂ ಭೋಗದ ಸಲುವಾಗಿಯೇ ಏರ್ಪಾಡುಮಾಡುವುದು. ಆದರೆ ಪಾಶ್ಚಿಮಾತ್ಯರಲ್ಲಿ ಇದು ಒಂದು ದೊಡ್ಡ ಕಲೆಯಾಗಿ ಹೋಗಿದೆ. ಈ ಔತಣಗಳನ್ನು ಸಂಗೀತ ಮುಂತಾದವುಗಳೊಡನೆ ಬಹಳ ಸಂಭ್ರಮದಿಂದ ನಡೆಸಿ ಆ ಸಮಯದಲ್ಲಿ ಭಾಷಣಗಳನ್ನು ಮಾಡುತ್ತಾರೆ. ನಾನು ಏರ್ಪಾಡುಮಾಡಿದ್ದ ಸಣ್ಣ ಔತಣವೂ ಇಂತಹ ಆಡಂಬರವನ್ನೊಳಗೊಳ್ಳದೆ ಇರಲಿಲ್ಲ. ನಾನು ಮಾತನಾಡುವ ಸಮಯವೊದಗಿತು. ನಾನು ಎದ್ದು ನಿಂತುಕೊಂಡೆನು. ಬಹಳ ಯೋಚನೆಮಾಡಿ ಭಾಷಣಕ್ಕೆ ಸಿದ್ಧನಾಗಿಯೇ ಹೋಗಿದ್ದೆನು. ಐದಾರು ವಾಕ್ಯಗಳನ್ನು ಮಾತ್ರ ಹೇಳಬೇಕಾಗಿದ್ದಿತಾದರೂ ಮೊದಲನೆಯ ವಾಕ್ಯವೂ ಕೂಡ ನನ್ನ ಬಾಯಿಂದ ಹೊರಡಲಿಲ್ಲ. ಅಡಿಸನ್ ಎಂಬಾತನು ಪ್ರಜಾಪಕ್ಷ ಸಭೆ (ಹೌಸ್ ಆಫ್ ಕಾಮನ್ಸ್) ಯಲ್ಲಿ ಮೊದಲನೆಯ ಸಲ ಮಾತನಾಡುವಾಗ "ನನಗೆ ತೋರುವುದೇನೆಂದರೆ," "ನನಗೆ ತೋರುವುದೇನೆಂದರೆ," "ನನಗೆ ತೋರುವುದೇನೆಂದರೆ," ಎಂದು ಮೂರುಸಲ ಪ್ರಾರಂಭಮಾಡಿ ಮಾತು ಹೊರಡದೆ ಸುಮ್ಮನೆ ನಿಂತುಬಿಟ್ಟನು. ಆ ಇಂಗ್ಲಿಷ್ ಭಾಷೆಯಲ್ಲಿ "ಕನ್ಸೀವ್" ಎಂಬ ಪದಕ್ಕೆ "ತೋರು," "ಗರ್ಭಧಾರಣಮಾಡು" ಎಂಬ ಎರಡರ್ಥಗಳಿವೆ. ಅಲ್ಲಿದ್ದ ಕುಚೋದ್ಯಗಾರನೊಬ್ಬನು "ಈ ಮಹಾಶಯರು ಮೂರುಸಲ ಗರ್ಭಧಾರಣ ಮಾಡಿದರೂ ಏನನ್ನೂ ಹೆರಲಿಲ್ಲ." ಎಂದು ಹೇಳಿದರು. ನಾನು ಈ ಕತೆಯನ್ನೇ ಮೂಲವಾಗಿಟ್ಟುಕೊಂಡು ವಿನೋದಕರವಾದ ಭಾಷಣ

ವನ್ನು ಮಾಡಬೇಕೆಂದು ನಿಶ್ಚಯಿಸಿಕೊಂಡಿದ್ದೆನು. ಅಲ್ಲಿ ಹಾಗೆಯೇ ಪ್ರಾರಂಭಮಾಡಿದೆನು. ಮುಂದೆ ಮಾತೇ ಹೊರಡಲಿಲ್ಲ. ವಿನೋದ ಕರವಾದ ಭಾಷಣವನ್ನು ಮಾಡುವುದಕ್ಕೆ ಹೊರಟು ನಾನೇ ಹಾಸ್ಯಕ್ಕೆ ಗುರಿಯಾದೆನು. ''ಮಹಾಶಯರೆ, ತಾವು ನನ್ನ ನಿಮಂತ್ರಣವನ್ನು ಸ್ವೀಕರಿಸಿ ಇಲ್ಲಿ ಬಂದುದನ್ನು ಉಪಕಾರವೆಂದೆಣಿಸುತ್ತೇನೆ.'' ಎಂದು ಥಟ್ಟನೆ ಹೇಳಿ ಕುಳಿತುಬಿಟ್ಟೆನು.

ನಾನು ದಕ್ಷಿಣ ಆಫ್ರಿಕಕ್ಕೆ ಹೋದಮೇಲೆಯೇ ಈ ಮುಖಹೇಡಿ ತನವು ದೂರವಾಯಿತೆಂದು ಹೇಳಬೇಕು. ಪೂರ್ತಿ ಬಿಟ್ಟುಹೋಯಿತೆಂದು ಹೇಳುವಹಾಗಿಲ್ಲ. ಯಾವ ಸನ್ನಾಹವೂ ಇಲ್ಲದೆ ಮಾತನಾಡಲು ಸಾಧ್ಯ ವಿರುತ್ತಿರಲಿಲ್ಲ. ಹೊಸ ಸಮಾಜದೆದುರಿಗೆ ಸಂಕೋಚವಾಗುತ್ತಿದ್ದಿತು. ಸಾಧ್ಯವಿರುತ್ತಿದ್ದಷ್ಟುಗೂ ಭಾಷಣ ಮಾಡುವುದನ್ನು ತಪ್ಪಿಸಿಕೊಳ್ಳು ತ್ತಿದ್ದೆನು. ಇಂದು ಕೂಡ ಸ್ನೇಹಿತರ ಸಭೆಯಲ್ಲಿರುವಾಗ ಸುಮ್ಮನೆ ಮಾತುಕತೆಯಾಡಿ ಕಾಲ ಕಳೆಯಲು ನನಗೆ ಸಾಧ್ಯವೆಂದಾಗಲಿ ನನಗೆ ಆ ರೀತಿಯ ಇಚ್ಛೆಯಿದೆಯೆಂದಾಗಲಿ ಹೇಳಲಾರೆನು.

ಈ ನನ್ನ ಹುಟ್ಟುಗುಣವಾದ ನಾಚಿಕೆಯು ನನ್ನನ್ನು ಆಗಾಗ ಹಾಸ್ಯಕ್ಕೆ ಗುರಿಮಾಡುತ್ತಿದ್ದಿತೇ ಹೊರತು ಇದರಿಂದ ನನಗೆ ಇನ್ನಾವ ಹಾನಿಯೂ ಆಗಲಿಲ್ಲವೆಂದು ಹೇಳಬೇಕು. ಇನ್ನೂ ಇದರಿಂದ ನನಗೆ ಲಾಭವಾಗಿದೆಯೆಂಬುದು ಸ್ಪಷ್ಟವಾಗಿ ಕಾಣುತ್ತದೆ. ಯಾವ ಸನ್ನಾ ಹವೂ ಇಲ್ಲದೆ ಮಾತನಾಡಲು ಬರದೆ ಇದ್ದುದು ನನಗೆ ಮೊದಲು ದುಃಖಕ್ಕೆ ಕಾರಣವಾಗಿದ್ದಿತು. ಈಗ ನನಗೆ ಅದರಿಂದ ಸಂತೋಷವೇ. ಅದರಿಂದ ನನಗೆ ಆದ ಎಲ್ಲಕ್ಕಿಂತ ದೊಡ್ಡ ಲಾಭವೇನೆಂದರೆ ಅದು ನನ್ನನ್ನು ಮಿತ ಭಾಷಿಯನ್ನಾಗಿ ಮಾಡಿತು. ನನ್ನ ಮನಸ್ಸಿನಲ್ಲಿ ಹುಟ್ಟುವ ಭಾವಗಳ ನ್ನೆಲ್ಲಾ ನನ್ನ ಅಂಕೆಯಲ್ಲಿಟ್ಟುಕೊಳ್ಳುವುದು ನನಗೆ ಸ್ವಾಭಾವಿಕವಾಗಿ ಅಭ್ಯಾಸವಾಗಿಹೋಗಿದೆ. ನಾನು ಸರಿಯಾಗಿ ವಿಚಾರಮಾಡದೆ ತೂಕ ಮಾಡದೆ ಒಂದು ಮಾತನ್ನೂ ಆಡಿಲ್ಲ, ಬರೆದೂ ಇಲ್ಲ ಎಂದು ಹೇಳ ಬಲ್ಲೆನು. ನನ್ನ ಭಾಷಣಗಳಲ್ಲಿ ಅಥವಾ ಬರವಣಿಗೆಯಲ್ಲಿರುವ ಯಾವ ವಾಕ್ಯದ ಸಲುವಾಗಿಯಾಗಲಿ ನನಗೆ ಎಳ್ಳಷ್ಟು ನಾಚಿಕೆಯಾಗಲಿ ಪಶ್ಚಾ

ತ್ಸ್ಯಾಪವಾಗಲಿ ಆಯಿತೆಂದು ನೆನಪಿಲ್ಲ. ಇದರಿಂದ ಅನೇಕ ಪ್ರಕಾರವಾದ ಅನಿಷ್ಟಗಳು ದೂರವಾದುವಲ್ಲದೆ ವೃಥಾ ಕಾಲಹರಣವೂ ತಪ್ಪಿತು. ಸತ್ಯೋಪಾಸಕನ ಶಿಕ್ಷಣದಲ್ಲಿ ಮೌನವನ್ನು ಕಲಿಯುವುದೂ ಒಂದು ಭಾಗವೆಂದು ನಾನು ಅನುಭವದಿಂದ ತಿಳಿದಿದ್ದೇನೆ. ಅತಿಶಯೋಕ್ತಿ, ಸತ್ಯವನ್ನು ಮುಚ್ಚಿಡುವುದು ಅಥವಾ ಮಾರ್ಪಡಿಸುವುದು ಇವುಗಳನ್ನೆಲ್ಲಾ ತಿಳಿದಾಗಲಿ ತಿಳಿಯದಾಗಲಿ ಮಾಡುವುದು ಮನುಷ್ಯನ ಸ್ವಭಾವ. ಈ ಸಂಕಟಗಳಿಂದ ತಪ್ಪಿಸಿಕೊಳ್ಳಬೇಕಾದರೆ ಮೌನವು ಆವಶ್ಯಕ. ಅಲ್ಪ ಭಾಷಿಯು ವಿಚಾರಮಾಡದೆ ಮಾತನಾಡುವ ಸಂಭವವು ಅತಿ ವಿರಳ. ಅವನು ಪ್ರತಿಯೊಂದು ಮಾತನ್ನೂ ತೂಕಮಾಡಿ ಮಾತನಾಡುವನು. ಮಾತನಾಡಬೇಕೆಂದು ಆತುರವುಳ್ಳ ಅನೇಕಮಂದಿಯನ್ನು ನಾವು ನೋಡುತ್ತೇವೆ. ಪ್ರತಿಯೊಂದು ಸಭೆಯಲ್ಲೂ "ನಾನು ಸ್ವಲ್ಪ ಮಾತನಾಡಬೇಕಾಗಿದೆ" ಎಂಬ ಚೀಟಿಗಳು ಸಭೆಯ ಅಧ್ಯಕ್ಷರಿಗೂ ಕಳುಹಿಸಿಕೊಡಲ್ಪಡುತ್ತವೆ. ಅಧ್ಯಕ್ಷರು ಮಾತನಾಡುವುದಕ್ಕೆ ಅಪ್ಪಣೆ ಕೊಟ್ಟರೆ ಭಾಷಣ ಮಾಡುವವನಿಗೆ ಸಮಯವು ಸಾಲದೆ ಇನ್ನಷ್ಟು ಅವಕಾಶವನ್ನು ಕೇಳಿ ಮಾತನಾಡುತ್ತಾ ಕಡೆಗೆ ಅಪ್ಪಣೆಯಿಲ್ಲದೆಯೇ ಮಾತನಾಡುತ್ತಾ ಹೋಗುತ್ತಾನೆ. ಈ ಮಾತಿನಿಂದೆಲ್ಲಾ ಪ್ರಪಂಚಕ್ಕೆ ಉಪಕಾರವಾಗುವುದೆಂದು ಹೇಳುವಂತಿಲ್ಲ. ಆದರೆ ಅಷ್ಟು ಕಾಲವು ವ್ಯರ್ಥವಾಗುವುದೇನೋ ಸ್ಪಷ್ಟ. ಈ ಕಾರಣದಿಂದ ನನ್ನ ಈ ಲಜ್ಜಾಶೀಲತೆಯು ನನ್ನನ್ನು ಗುರಾಣಿಯಂತೆ ಸಂರಕ್ಷಿಸಿದೆ, ಇದು ನನ್ನ ಆತ್ಮವಿಕಾಸಕ್ಕೆ ಇಂಬುಗೊಟ್ಟಿದೆ, ಸತ್ಯದ ಉಪಾಸನೆಯಲ್ಲಿ ನೆರವಿತ್ತಿದೆ.

---

# ೧೯
# ಅಸತ್ಯವೆಂಬ ವಿಷ

ನಾಲ್ವತ್ತು ವರ್ಷದ ಹಿಂದೆ ವಿಲಾಯತಿಯಲ್ಲಿ ಈಗಿಗಿಂತ ಕಮ್ಮಿ ಜನ ಭಾರತೀಯ ವಿದ್ಯಾರ್ಥಿಗಳಿದ್ದರು. ಅವರಲ್ಲಿ ಮದುವೆಯಾಗಿದ್ದರೂ ಮದುವೆಯಾಗಿಲ್ಲವೆಂದು ಹೇಳಿಕೊಳ್ಳುವ ಪದ್ಧತಿಯು ಹೋಗಿದ್ದಿತು. ಆ ದೇಶದಲ್ಲಿ ಸ್ಕೂಲಿನಲ್ಲಾಗಲಿ ಕಾಲೇಜಿನಲ್ಲಾಗಲಿ ಓದುವ ಹುಡುಗರೆಲ್ಲಾ ಅವಿವಾಹಿತರಾಗಿಯೇ ಇರುತ್ತಾರೆ. ಏಕೆಂದರೆ ಅವರ ಎಣಿಕೆಯಲ್ಲಿ ವಿವಾಹಿತನಿಗೆ ವಿದ್ಯಾರ್ಥಿ ಜೀವನವು ಸಾಧ್ಯವಲ್ಲ. ನಮ್ಮಲ್ಲಿಯೂ ಹಿಂದಿನ ಕಾಲದಲ್ಲಿ ವಿದ್ಯಾರ್ಥಿಯನ್ನು ಬ್ರಹ್ಮಚಾರಿಯೆಂದೇ ಕರೆಯುತ್ತಿದ್ದರು. ಈ ಕಾಲದಲ್ಲಿಯಾದರೋ ಬಾಲ್ಯವಿವಾಹದ ಪದ್ಧತಿಯು ಬಂದು ಹೋಗಿಬಿಟ್ಟಿವೆ. ಸೀಮೆಯಲ್ಲಿ ಈ ಪದ್ಧತಿಯ ಅರಿವೇ ಇಲ್ಲವೆಂದು ಹೇಳಬಹುದು. ಈ ಕಾರಣದಿಂದ ಅಲ್ಲಿದ್ದ ಹಿಂದೂಸ್ಥಾನದ ಯುವಕರು ತಮಗೆ ಮದುವೆಯಾಗಿರುವುದನ್ನು ಒಪ್ಪಿಕೊಳ್ಳುವುದಕ್ಕೆ ನಾಚಿಕೆಪಡುತ್ತಿದ್ದರು. ವಿವಾಹದ ವಿಚಾರವನ್ನು ಮರೆಮಾಚುವುದಕ್ಕೆ ಇನ್ನೊಂದು ಕಾರಣವಿದ್ದಿತು—ಈ ಗುಟ್ಟು ಗೊತ್ತಾದರೆ ತಾವು ಇರುತ್ತಿದ್ದ ಕುಟುಂಬಕ್ಕೆ ಸೇರಿದ ಯುವತಿಯರ ಜೊತೆಗೆ ತಿರುಗಾಡುವುದಕ್ಕೂ ಆಟವಾಡುವುದಕ್ಕೂ ಅವಕಾಶ ಸಿಕ್ಕುತ್ತಿರಲಿಲ್ಲ. ಈ ರೀತಿಯಾದ ವಿನೋದವು ಹೆಚ್ಚು ಕಡಿಮೆ ನಿರ್ದೋಷವಾಗಿಯೇ ಇರುತ್ತಿದ್ದಿತು. ತಂದೆತಾಯಿಗಳು ಈ ತೆರನಾದ ಸ್ನೇಹವನ್ನು ಪ್ರೋತ್ಸಾಹಿಸುತ್ತ ಕೂಡ ಇದ್ದರು. ಅಲ್ಲಿ ಪ್ರತಿಯೊಬ್ಬ ಯುವಕನೂ ತನ್ನ ಸಹಧರ್ಮಿಣಿಯನ್ನು ತಾನೇ ಆರಿಸಿಕೊಳ್ಳಬೇಕಾದುದರಿಂದ ಈ ರೀತಿಯಾದ ಯುವಕ ಯುವತಿಯರ ಸಹವಾಸವು ಆ ದೇಶದಲ್ಲಿ ಆವಶ್ಯಕವಿದ್ದರೂ ಇರಬಹುದು. ಅಲ್ಲಿ ಕೇವಲ ಸ್ವಾಭಾವಿಕವಾಗಿರುವ ಇಂತಹ ಸಂಬಂಧವನ್ನು ಹಿಂದೂ

ಸ್ಥಾನದ ಯುವಕಗಣವು ಸೀಮೆಗೆ ಹೋಗಿ ಬೆಳೆಸಿದರೆ ಅದರ ಪರಿಣಾಮವು ಸಾಮಾನ್ಯವಾಗಿ ದುಷ್ಟವಾಗಿಯೇ ಇರುತ್ತದೆ. ಹೀಗೆ ಆಗಿರುವುದು ಎಷ್ಟೋಸಲ ಅನುಭವಕ್ಕೆ ಬಂದಿದೆ. ಈ ಮೋಹಪಾಶಕ್ಕೆ ನಮ್ಮ ಯುವಕರು ಸಿಕ್ಕಿಬಿದ್ದು ಅಲ್ಲಿಯ ಜನರಿಗೆ ಎಷ್ಟೇ ನಿರ್ದೋಷವಾಗಿದ್ದರೂ ನಮ್ಮವರಿಗೆ ತ್ಯಾಜ್ಯವಾದ ಸಂಬಂಧದ ಸಲುವಾಗಿ ಅಸತ್ಯಮಯ ಜೀವನ ಪಥವನ್ನು ಆರಿಸಿದ್ದರು. ಈ ಗಾಳಿಯು ನನಗೂ ಬೀಸಿತು. ನನಗೆ ಮದುವೆಯಾಗಿ ಒಬ್ಬ ಮಗನಿದ್ದರೂ ನಾನು ಅವಿವಾಹಿತನೆಂದು ಹೇಳಿಕೊಳ್ಳುವುದಕ್ಕೆ ಹಿಂದೆಗೆಯಲಿಲ್ಲ. ಆದರೆ ಹೀಗೆ ಮರೆಮಾಚಿದುದರಿಂದ ನಾನು ಹೆಚ್ಚು ಸುಖಿಯೇನೂ ಆಗಲಿಲ್ಲ. ನನ್ನ ಮುಖಹೇಡಿತನವೂ ಮಿತಭಾಷೆಯೂ ನನ್ನನ್ನು ರಕ್ಷಿಸಿದುವು. ನಾನು ಸರಿಯಾಗಿ ಮಾತುಕತೆಯಾಡದಿದ್ದರೆ ನನ್ನ ಸಂಗಡ ಮಾತನಾಡುವುದಕ್ಕಾಗಲಿ ತಿರುಗಾಡುವುದಕ್ಕಾಗಲಿ ಯಾವ ಹುಡುಗಿಯು ತಾನೆ ಇಷ್ಟಪಟ್ಟಾಳು?

ನಾನು ಹೇಗೆ ಮುಖಹೇಡಿಯಾಗಿದ್ದೆನೋ ಹಾಗೆಯೇ ಹೇಡಿಯೂ ಆಗಿದ್ದೆನು. ನಾನು ವಾಸಮಾಡುತ್ತಿದ್ದಂತಹ ಕುಟುಂಬಗಳಲ್ಲಿ ಯಜಮಾನಿಯ ಮಗಳು ಅತಿಥಿಗಳನ್ನು ತಿರುಗಾಡುವುನಕ್ಕೆ ಜೊತೆಗೆ ಕರೆದುಕೊಂಡು ಹೋಗುವುದು ವಾಡಿಕೆಯಾಗಿದ್ದಿತು. ನಾನಿದ್ದ ಮನೆಯ ಯಜಮಾನಿಯ ಮಗಳು ನನ್ನನ್ನು ಒಂದುದಿನ ವೆಂಟ್ನರಿನ ಸುತ್ತುಮುತ್ತಲು ಇರುವ ಸುಂದರವಾದ ಗುಡ್ಡಗಳಿಗೆ ಕರೆದುಕೊಂಡು ಹೋದಳು. ನನ್ನ ನಡಿಗೆಯು ಶಾಮುಸವಲ್ಲದಿದ್ದರೂ ಆಕೆಯು ನನ್ನನ್ನು ಎಳೆದುಕೊಂಡು ದಾರಿಯುದ್ದಕ್ಕೂ ಮಾತನಾಡುತ್ತಾ ಇನ್ನೂ ವೇಗವಾಗಿ ನಡೆದಳು. ಆಕೆಯ ಮಾತಿಗೆ ಉತ್ತರವಾಗಿ ನನ್ನ ಬಾಯಿಂದ ಕೆಲವುಸಲ 'ಹೂಂ,' ಕೆಲವುಸಲ 'ಉಹೂಂ' ಅಥವಾ ಬಹಳ ಹೆಚ್ಚೆಂದರೆ 'ಎಷ್ಟು ಸುಂದರವಾಗಿದೆ!' ಎಂಬ ಮಾತುಗಳು ಅರ್ಧಸ್ವರದಲ್ಲಿ ಹೊರಡುತ್ತಿದ್ದುವು. ಆಕೆಯು ಹಕ್ಕಿಯಂತೆ ಗಾಳಿಯೊಂದಿಗೆ ಹಾರಿಹೋಗುತ್ತಿದ್ದಳು. ನಾನಾದರೋ ಎಂದು ಮನೆಗೆ ಹೋಗಿ ಸೇರುವೆನೋ ಎಂದು ವಿಸ್ಮಯಪಡುತ್ತಿದ್ದೆನು. ಹೀಗೆಯೇ ನಾವು ಒಂದು ಗುಡ್ಡದ ಮೇಲಕ್ಕೆ ಬಂದೆವು. ಇದರಿಂದ ಇಳಿಯುವುದು ಹೇಗೆ? ಎತ್ತರವಾದ ಹಿಮ್ಮಡಿ

ಯುಳ್ಳ ಜೋಡನ್ನು ಹಾಕಿಕೊಂಡಿದ್ದರೂ ಈ ೨೫ ವರ್ಷದ ಚಟುವಟಿಕೆಯ ಯುವತಿಯು ಅಂಬಿನ ವೇಗದಿಂದ ಹಾರಿಬಿಟ್ಟಳು. ನಾನಾದರೋ ನಾಚಿಕೆಪಟ್ಟುಕೊಂಡು ಇನ್ನೂ ಕೆಳಗಡೆ ಇಳಿಯುವುದಕ್ಕೆ ಒದ್ದಾಡುತ್ತಿದ್ದೆನು. ಆಕೆಯು ನನಗೆ ನಗುಮೊಗದಿಂದ ಧೈರ್ಯ ಹೇಳುತ್ತಾ ಮೇಲಕ್ಕೆ ಬಂದು ಕೈಹಿಡಿದುಕೊಂಡು ನನ್ನನ್ನು ಕೆಳಕ್ಕೆ ಇಳಿಸುವೆನೆಂದು ಹೇಳುತ್ತಿದ್ದಳು. ನಾನು ಇಂತಹ ಹೇಡಿ ಹೇಗಾದೆನು? ಒಮ್ಮೊಮ್ಮೆ ದೇಕಿಕೊಂಡು ಅತ್ಯಂತ ಪ್ರಯಾಸದಿಂದ ಹಾಗೂ ಹೀಗೂ ಕೆಳಗಡೆಗೆ ಬಂದೆನು. ಆಕೆಯು ಗಟ್ಟಿಯಾಗಿ ನಗುತ್ತಾ ಶಹಬಾಸ್ ಎಂದು ಹೇಳಿ ನನ್ನ ಲಜ್ಜೆಯನ್ನು ಇಮ್ಮಡಿ ಮಾಡಿದಳು. ಹಾಗೆ ಹಾಸ್ಯಮಾಡಲು ಆಕೆಗೆ ಅಧಿಕಾರವಿದ್ದಿತು.

ಆದರೆ ನಾನು ಎಲ್ಲಾ ಕಡೆಯಲ್ಲಿಯೂ ಕಳಂಕವಿಲ್ಲದೆ ತಪ್ಪಿಸಿಕೊಳ್ಳುವುದು ಹೇಗೆ ಸಾಧ್ಯ? ಅಸತ್ಯದ ವಿಷದಿಂದ ನನ್ನನ್ನು ರಕ್ಷಿಸಬೇಕೆಂಬುದು ದೇವರ ಇಚ್ಛೆಯಾಗಿದ್ದಿತು. ವೆಂಟ್ನರಿನಹಾಗೆಯೇ ಸಮುದ್ರ ತೀರದಲ್ಲಿ ಬ್ರೈಟನ್ ಎಂಬ ಒಳ್ಳೆಯ ವಾಯುಗುಣವುಳ್ಳ ಸ್ಥಳವಿದೆ. ನಾನು ಅಲ್ಲಿಗೆ ಒಂದು ಸಲ ಹೋದೆನು. ಇದು ನಾನು ವೆಂಟ್ನರಿಗೆ ಹೋಗುವುದಕ್ಕೆ ಮುಂಚೆ ಅಲ್ಲಿ ಒಂದು ಹೋಟಲಿನಲ್ಲಿ ಸಾಧಾರಣ ಧನಿಕಳಾದ ಒಬ್ಬ ವೃದ್ಧ ವಿಧವೆಯನ್ನು ಕಂಡೆನು. ಇದೇ ನಾನು ಸೀಮೆಗೆ ಹೋದಮೇಲಿನ ಮೊದಲನೆಯ ವರ್ಷ. ಅಲ್ಲಿ ಸಿಕ್ಕುವ ತಿಂಡಿ ಪದಾರ್ಥಗಳ ಪಟ್ಟಿಯು ಫ್ರೆಂಚ್ ಭಾಷೆಯಲ್ಲಿ ಬರೆದಿದ್ದಿತು. ನನಗೆ ಇದು ಅರ್ಥವಾಗುತ್ತಿರಲಿಲ್ಲ. ಆ ವೃದ್ಧ ಮಹಿಳೆಯು ಕುಳಿತುಕೊಂಡಿದ್ದ ಮೇಜಿನ ಮುಂದೆಯೇ ನಾನೂ ಕುಳಿತುಕೊಂಡೆನು. ನಾನು ಹೊಸಬನೆನ್ನುವುದನ್ನೂ ನನಗೆ ಸ್ವಲ್ಪ ಗಾಬರಿಯಾಗಿದೆಯೆನ್ನುವುದನ್ನೂ ಕಂಡು ಆಕೆಯು ಒಡನೆಯೇ ನನ್ನ ಸಹಾಯಕ್ಕೆ ಬಂದು "ನೀವು ಹೊಸಬರಾಗಿ ಕಾಣುತ್ತೀರಿ. ನಿಮಗೆ ಸ್ವಲ್ಪ ಗಾಬರಿಯಾಗಿರುವಂತೆ ತೋರುತ್ತದೆ. ನೀವು ಇನ್ನೂ ಯಾವ ತಿಂಡಿಯನ್ನು ಏಕೆ ತರಿಸಿಲ್ಲ?" ಎಂದು ಕೇಳಿದಳು. ಈ ಸದ್ಗೃಹಿಣಿಯು ನನ್ನನ್ನು ಹೀಗೆ ಮಾತನಾಡಿಸಿದಾಗ ನಾನು ಆ ಪಟ್ಟಿಯನ್ನು ಓದಿ ತಿಳಿದುಕೊಳ್ಳಲು ಪ್ರಯತ್ನಪಡುತ್ತಲೂ ಸೇವಕನಿಂದ

ತಿಂಡಿಗಳನ್ನು ಏನೇನು ಹಾಕಿ ಮಾಡಿದೆಯೆಂಬುದನ್ನು ವಿಚಾರಿಸುತ್ತಲೂ ಇದ್ದೆನು. ನಾನು ಆಕೆಯು ಹೀಗೆ ಮಾತನಾಡಿಸಿದುದು ಉಪಕಾರವಾಯಿತೆಂದು ಹೇಳಿ ನನ್ನ ಕಷ್ಟವನ್ನು ಆಕೆಗೆ ತಿಳಿಸಿ "ನನಗೆ ಫ್ರೆಂಚ್ ಭಾಷೆಯು ಗೊತ್ತಿಲ್ಲದುದರಿಂದ ತಿಂಡಿಗಳಲ್ಲಿ ಮಾಂಸವಿಲ್ಲದಿರುವುದಾವುದೆಂಬುದನ್ನು ಕಂಡುಹಿಡಿಯಲು ನನಗೆ ದಾರಿ ತೋರುವುದಿಲ್ಲ." ಎಂದು ಹೇಳಿದೆನು.

ಆಕೆಯು "ಈ ಪಟ್ಟಿಯಲ್ಲಿರುವುದನ್ನು ನಿಮಗೆ ತಿಳಿಸಿ ನೀವು ಯಾವುದನ್ನು ತಿನ್ನಬಹುದೆಂದು ಹೇಳುತ್ತೇನೆ." ಎಂದು ಹೇಳಿದಳು. ನಾನು ಕೃತಜ್ಞತೆಯಿಂದ ಆಕೆಯ ಸಹಾಯವನ್ನು ಸ್ವೀಕರಿಸಿದೆನು. ಇಲ್ಲಿಂದ ನಮ್ಮಿಬ್ಬರಿಗೆ ಹೊಸ ಪರಿಚಯವಾಗಿ ಮೈತ್ರಿಯಾಗಿ ಬೆಳೆದು ನಾನು ಸೀಮೆಯಲ್ಲಿರುವವರೆಗೂ ಸೀಮೆಯನ್ನು ಬಿಟ್ಟಮೇಲೆ ಬಹಳ ದಿನದವರೆಗೂ ಇದ್ದಿತು. ಆಕೆಯು ತನ್ನ ಲಂಡನ್ ವಿಳಾಸವನ್ನು ನನಗೆ ತಿಳಿಸಿ ಪ್ರತಿ ಭಾನುವಾರವೂ ತಮ್ಮ ಮನೆಗೆ ಊಟಕ್ಕೆ ಬರಬೇಕೆಂದು ಕರೆದಳು. ಬೇರೆ ಪ್ರಸಂಗಗಳಲ್ಲಿಯೂ ಆಕೆಯು ನನ್ನನ್ನು ಊಟಕ್ಕೆ ಕರೆದು ನಾನು ನನ್ನ ಲಜ್ಜಾಪ್ರಕೃತಿಯನ್ನು ಕಳೆದುಕೊಳ್ಳುವುದಕ್ಕೋಸ್ಕರ ಯುವತಿಯರಿಗೆ ನನ್ನನ್ನು ಪರಿಚಯ ಮಾಡಿಕೊಟ್ಟು ಅವರೊಡನೆ ಮಾತುಕತೆಯಾಡುವಹಾಗೆ ಮಾಡುತ್ತಿದ್ದಳು. ಆಕೆಯು ತನ್ನೊಡನೆಯೇ ವಾಸಿಸುತ್ತಿದ್ದ ಯುವತಿಯೊಬ್ಬಳು ನನ್ನೊಡನೆ ಇತರರಿಗಿಂತಲೂ ಹೆಚ್ಚಾಗಿ ಈ ಮಾತುಕತೆಗಳಿಗೆ ಸೇರುವಂತೆ ಯೋಜಿಸುತ್ತಿದ್ದಳು. ಅನೇಕವೇಳೆ ನಮ್ಮಿಬ್ಬರನ್ನೇ ಒಟ್ಟಿಗೆ ಬಿಟ್ಟುಹೋಗುತ್ತಿದ್ದಳು.

ಇದೆಲ್ಲಾ ನನಗೆ ಮೊದಲು ಕಷ್ಟವಾಗಿ ತೋರಿತು. ನನಗೆ ಮಾತನಾಡುವುದಕ್ಕೆ ಹೇಗೆ ಮೊದಲು ಮಾಡುವುದೆನ್ನುವುದು ತಿಳಿಯುತ್ತಿರಲಿಲ್ಲ, ವಿನೋದವಾಗಿ ಮಾತನಾಡುವುದಕ್ಕೂ ಬರುತ್ತಿರಲಿಲ್ಲ. ಆದರೆ ಆ ಯುವತಿಯು ಇದನ್ನೆಲ್ಲಾ ಕಲಿಸಿಕೊಡತೊಡಗಿದಳು. ನಾನೂ ಅಷ್ಟು ಇಷ್ಟು ಕುಶಲನಾದೆನು. ಬರಬರುತ್ತಾ ಪ್ರತಿ ಭಾನುವಾರವನ್ನೂ ಎದುರುನೋಡಲು ಮೊದಲುಮಾಡಿದೆನು. ಮತ್ತು ಆ ಯುವತಿಯೊಡನೆ ಮಾತನಾಡುವುದರಲ್ಲಿ ಇಷ್ಟವುಂಟಾಗುತ್ತಾ ಬಂದಿತು.

ಆ ವೃದ್ಧಳ ಒಲವೆಯೂ ದಿನೇದಿನೇ ವಿಶಾಲವಾಗಿ ಹರಡುತ್ತಾ ಬಂದಿತು. ನಾವಿಬ್ಬರು ಸೇರುವುದರಲ್ಲಿ ಆಕೆಗೆ ಬಹಳ ಕುತೂಹಲ ವಿದ್ದಿತು. ನಮ್ಮಿಬ್ಬರ ವಿಚಾರವಾಗಿ ಆಕೆಯು ಮನಸ್ಸಿನಲ್ಲಿ ಏನೋ ಯೋಚನೆಯನ್ನಿಟ್ಟುಕೊಂಡಿದ್ದರೂ ಇದ್ದಿರಬಹುದು.

ನಾನು ಸಂಕಟಕ್ಕೆ ಸಿಕ್ಕಿದೆನು. "ನಾನು ಈ ಸದ್ಗೃಹಿಣಿಗೆ ನನಗೆ ಮದುವೆಯಾಗಿದೆಯೆನ್ನುವುದನ್ನು ಮುಂಚೆಯೇ ತಿಳಿಸಿದ್ದರೆ ಎಷ್ಟು ಚೆನ್ನಾಗಿದ್ದಿತು! ಆಗ ನಮ್ಮಿಬ್ಬರ ಮದುವೆಯ ವಿಚಾರವಾಗಿ ಆಕೆಯು ಯೋಚನೆಯನ್ನೇ ಮಾಡುತ್ತಿರಲಿಲ್ಲ. ಆದರೆ ಎಷ್ಟು ತಡವಾದರೂ ತಪ್ಪನ್ನು ತಿದ್ದಿಕೊಳ್ಳಬಹುದು. ನಾನು ಸತ್ಯವನ್ನು ಹೇಳಿದರೆ ಇನ್ನೂ ಅಧಿಕವಾದ ಸಂಕಟದಿಂದ ಬಿಡುಗಡೆ ಹೊಂದಬಹುದು." ಎಂದು ಯೋಚಿಸಿ ಹೆಚ್ಚುಕಡಿಮೆ ಈ ಅಭಿಪ್ರಾಯವನ್ನು ಕೊಡುವ ಕಾಗದವನ್ನು ಆಕೆಗೆ ಬರೆದೆನು :

"ನಾವಿಬ್ಬರೂ ಬ್ರೈಟನಿನಲ್ಲಿ ಕಲೆತಂದಿನಿಂದ ನೀವು ನನ್ನಮೇಲೆ ಅಂತಃಕರಣವಿಟ್ಟಿದ್ದೀರಿ. ತಾಯಿಯು ಮಕ್ಕಳನ್ನು ನೋಡಿಕೊಳ್ಳುವಂತೆ ನೀವು ನನ್ನನ್ನು ಕಂಡಿದ್ದೀರಿ. ನಾನು ಮದುವೆ ಮಾಡಿಕೊಳ್ಳಬೇಕೆಂದು ನೀವು ಯೋಚಿಸಿ ಇದಕ್ಕೋಸ್ಕರ ನನಗೆ ಯುವತಿಯರ ಪರಿಚಯವನ್ನು ಮಾಡಿಕೊಡುತ್ತಾ ಇದ್ದೀರಿ. ಈ ರೀತಿಯಾಗಿ ಸಂಬಂಧವು ಬೆಳೆದುಕೊಂಡು ಹೋಗುವುದಕ್ಕಿಂತ ಮುಂಚೆ ನಾನು ನಿಮ್ಮ ಪ್ರೇಮಕ್ಕೆ ಪಾತ್ರನಾಗುವಷ್ಟು ಯೋಗ್ಯತೆಯು ನನಗಿಲ್ಲವೆಂದು ಹೇಳಿಕೊಳ್ಳಬೇಕು. ನಾನು ನಿಮ್ಮ ಮನೆಗೆ ಬರುವುದಕ್ಕೆ ಪ್ರಾರಂಭ ಮಾಡಿದಾಗಲೇ ನನಗೆ ಮದುವೆಯಾಗಿದ್ದಿತೆಂದು ನಿಮಗೆ ತಿಳಿಸಬೇಕಾಗಿದ್ದಿತು. ಹಿಂದೂಸ್ಥಾನದ ಯುವಕರು ಇಲ್ಲಿಗೆ ಬಂದಾಗ ತಮಗೆ ಮದುವೆಯಾಗಿದ್ದರೂ ಆ ವಿಚಾರವನ್ನು ಮುಚ್ಚಿಟ್ಟುಕೊಳ್ಳುತ್ತಾರೆಂದು ನನಗೆ ಗೊತ್ತಿದ್ದಿತು. ನಾನೂ ಅದೇ ಕ್ರಮವನ್ನು ಅನುಸರಿಸಿದೆನು. ಆದರೆ ಹಾಗೆ ಮಾಡಬಾರದಾಗಿತ್ತೆಂದು ನನಗೆ ಈಗ ಕಾಣುತ್ತದೆ. ನಾನಿನ್ನೂ ಹುಡುಗನಾಗಿದ್ದಾಗಲೇ ನನಗೆ ಮದುವೆಯಾಯಿತೆಂದೂ ನನಗೊಬ್ಬ ಮಗನು

ಕೂಡ ಇರುವನೆಂದೂ ನಿಮಗೆ ತಿಳಿಸಬೇಕಾಗಿದ್ದಿತು. ಇದನ್ನೆಲ್ಲಾ ಇಷ್ಟು ದಿನ ನಿಮ್ಮಿಂದ ಮುಚ್ಚಿಟ್ಟುಕೊಂಡುದಕ್ಕೆ ನನಗೆ ಬಹಳ ದುಃಖವಾಗುತ್ತದೆ. ಆದರೆ ದೇವರು ನನಗೆ ಈಗ ಸತ್ಯವಾದ ಮಾತನ್ನು ಹೇಳುವಷ್ಟು ಧೈರ್ಯ ಕೊಟ್ಟಿರುವನೆಂದು ಆನಂದವಾಗುತ್ತದೆ. ನೀವು ನನ್ನನ್ನು ಕ್ಷಮಿಸುವಿರಾ? ನೀವು ನನಗೆ ಪರಿಚಯ ಮಾಡಿಕೊಟ್ಟ ಸಹೋದರಿಯೊಡನೆ ನಾನು ಯಾವ ವಿಧವಾದ ಅನುಚಿತವಾದ ಸಲಿಗೆಯಿಂದಲೂ ವರ್ತಿಸಿಲ್ಲವೆಂದು ಪ್ರಮಾಣವಾಗಿ ಹೇಳುತ್ತೇನೆ. ನನ್ನ ಮಿತಿಯು ನನಗೆ ಗೊತ್ತಿದ್ದಿತು. ಆದರೆ ನೀವು ನನಗೆ ಮದುವೆಯಾಗಿರುವುದೆಂದು ತಿಳಿಯದಿದ್ದುದರಿಂದ ನಾನು ಈಕೆಯನ್ನು ಮದುವೆ ಮಾಡಿಕೊಳ್ಳಬೇಕೆಂದು ಸ್ವಾಭಾವಿಕವಾಗಿ ಇಚ್ಛಿಸಿದಿರಿ. ಈ ರೀತಿಯಾದ ಸಂಬಂಧವು ಇನ್ನು ಬೆಳೆಯದಿರುವುದಕ್ಕಾಗಿ ನಾನು ಸತ್ಯವನ್ನು ತಿಳಿಸಬೇಕು.

ಈ ಪತ್ರವು ನಿಮಗೆ ತಲುಪಿದಮೇಲೆ ನಾನು ನಿಮ್ಮ ಆತಿಥ್ಯಕ್ಕೆ ಪಾತ್ರನಲ್ಲವೆಂದು ನೀವು ಭಾವಿಸಿದರೆ ನಾನು ಅದನ್ನು ಅನ್ಯಥಾ ಎಣಿಸುವುದಿಲ್ಲ. ನನ್ನ ಮೇಲೆ ಪ್ರೇಮವನ್ನೂ ವಾತ್ಸಲ್ಯವನ್ನೂ ಇಟ್ಟು ನೀವು ನನ್ನನ್ನು ಚಿರಋಣಿಯನ್ನಾಗಿ ಮಾಡಿದ್ದೀರಿ. ಇದಾದಮೇಲೆ ನೀವು ನನ್ನನ್ನು ತ್ಯಜಿಸದೇ ಇದ್ದು ಈಗಲೂ ನಾನು ನಿಮ್ಮಲ್ಲಿಗೆ ಬರಲು ಯೋಗ್ಯನೆಂದು ಎಣಿಸಿದರೆ ಅದರಿಂದ ನಾನು ಸುಖಿಯಾಗುವೆನಲ್ಲದೆ ಅದಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸಲು ಪ್ರಯತ್ನಪಡುತ್ತೇನೆ ಮತ್ತು ಅದನ್ನು ತಾವು ನನ್ನಮೇಲಿಟ್ಟಿರುವ ಪ್ರೇಮದ ಒಂದು ಹೊಸ ಚಿಹ್ನೆಯೆಂದು ತಿಳಿಯುತ್ತೇನೆ.''

ನಾನು ಇಂತಹ ಕಾಗದವನ್ನು ಒಂದು ಕ್ಷಣದಲ್ಲಿಯೇ ಬರೆಯುವುದಕ್ಕಾಯಿತೆಂದು ಪಾಠಕರು ಎಣಿಸದಿರಲಿ. ಅದನ್ನು ಅನೇಕಸಲ ತಿದ್ದಿತಿದ್ದಿ ಬರೆದಿರಬೇಕು. ಆದರೆ ಈ ಪತ್ರವು ನನ್ನ ಮೇಲಿದ್ದ ಒಂದು ಬಹಳ ದೊಡ್ಡ ಭಾರವನ್ನು ತೊಲಗಿಸಿತು. ಹೆಚ್ಚುಕಡಿಮೆ ಮರುಟಪಾಲಿನಲ್ಲಿಯೇ ಆಕೆಯಿಂದ ಉತ್ತರವು ಬಂದಿತು. ಆಕೆಯು ಅದರಲ್ಲಿ ಹೀಗೆ ಬರೆದಿದ್ದಳು :—

"ನೀವು ಮುಚ್ಚುಮರೆಯಿಲ್ಲದೆ ಬರೆದ ಪತ್ರವು ತಲಪಿ ಅದರಿಂದ ನಮ್ಮಿಬ್ಬರಿಗೂ ಬಹಳ ಸಂತೋಷವಾಯಿತಲ್ಲದೆ ನಗುವೂ ಬಂದಿತು. ನೀವು ಮಾಡಿರುವೆವೆಂದು ಹೇಳಿರುವ ಅಸತ್ಯಾಚರಣೆಯು ಕ್ಷಮಾಪಣೆಗೆ ಯೋಗ್ಯವಾದುದೇ ಸರಿ. ಆದರೂ ನಿಜವಾದ ಸ್ಥಿತಿಯನ್ನು ನಮಗೆ ತಿಳಿಸಿದುದು ಒಳ್ಳೆಯದೇ ಆಯಿತು. ನಮ್ಮ ಮನೆಗೆ ನೀವು ಮೊದಲಿನ ಹಾಗೆಯೇ ಬರಬಹುದು. ಮುಂದಿನ ಭಾನುವಾರ ನಿಮ್ಮನ್ನು ಎದುರು ನೋಡುತ್ತಿರುವೆವಲ್ಲದೆ ನಿಮ್ಮ ಬಾಲ್ಯ ವಿವಾಹದ ಕತೆಯನ್ನು ಕೇಳಿ ನಕ್ಕು ಆನಂದಪಡುವುದನ್ನು ನಿರೀಕ್ಷಿಸುತ್ತಿರುತ್ತೇವೆ. ನಿಮ್ಮ ನಮ್ಮ ಮೈತ್ರಿಗೆ ಈ ಘಟನೆಯಿಂದ ಎಳ್ಳಷ್ಟು ಕುಂದುಂಟಾಗುವುದಿಲ್ಲವೆಂದು ನಾನು ನಿಮಗೆ ಹೇಳಬೇಕೆ?"

ಈ ಪ್ರಕಾರವಾಗಿ ನನ್ನಲ್ಲಿದ್ದ ಅಸತ್ಯವೆಂಬ ವಿಷವನ್ನು ನಿರ್ಮೂಲ ಮಾಡಿಬಿಟ್ಟೆನು. ಇದರ ನಂತರ ನನ್ನ ಮದುವೆ ಮುಂತಾದವುಗಳ ವಿಚಾರವಾಗಿ ಅಗತ್ಯವಿದ್ದಾಗ ಸಂಕೋಚವಿಲ್ಲದೆ ಮಾತನಾಡಲು ಎಂದೂ ಹಿಂತೆಗೆಯುತ್ತಿದ್ದಿಲ್ಲ.



## ೨೦

# ಧರ್ಮಗಳ ಪರಿಚಯ

ನಾನು ವಿಲಾಯತಿಗೆ ಹೋದಮೇಲಿನ ಎರಡನೆಯ ವರ್ಷದ ಕಡೆಯಲ್ಲಿ ನನಗೆ ಇಬ್ಬರು ಥಿಯಾಸಫಿಸ್ಟ್ ಪಂಗಡಕ್ಕೆ ಸೇರಿದ ಅಣ್ಣಾತಮ್ಮಂದಿರ ಪರಿಚಯವಾಯಿತು. ಅವರಿಬ್ಬರಿಗೂ ಮದುವೆಯಾಗಿರಲಿಲ್ಲ. ಅವರು ನನ್ನೊಡನೆ ಭಗವದ್ಗೀತೆಯ ವಿಚಾರವಾಗಿ ಮಾತನಾಡಿದರು. ಅವರು ಸರ್ ಎಡ್ವಿನ್ ಆರ್ನಾಲ್ಡರ ಭಾಷಾಂತರವನ್ನು ಓದುತ್ತಿದ್ದರು. ಮೂಲವನ್ನು ಜೊತೆಗೆ ಓದಬೇಕೆಂದು ನನ್ನನ್ನು ಕರೆದರು. ಆದರೆ ನಾನು ಭಗವದ್ಗೀತೆಯನ್ನು ಸಂಸ್ಕೃತದಲ್ಲಿಯಾಗಲಿ ಗುಜರಾತಿಯಲ್ಲಿಯಾಗಲಿ ಓದದೆ ಇದ್ದುದರಿಂದ ನನಗೆ ನಾಚಿಕೆಯಾಯಿತು. ಆದುದರಿಂದ ನಾನು ಅವರಿಗೆ ''ನಾನು ಭಗವದ್ಗೀತೆಯನ್ನು ಯಾವಾಗಲೂ ಓದಿಲ್ಲ. ಆದರೆ ನಾನು ಅದನ್ನು ನಿಮ್ಮೊಡನೆ ಓದಲು ಸಿದ್ಧನಾಗಿದ್ದೇನೆ. ನನಗೆ ಸಂಸ್ಕೃತದ ಜ್ಞಾನವು ಕೇವಲ ಕಡಿಮೆ. ಆದರೂ ಭಾಷಾಂತರವು ಮೂಲದ ಅರ್ಥವನ್ನು ಸ್ಪಷ್ಟಗೊಳಿಸದಿದ್ದೆಡೆಯನ್ನು ತೋರಿಸುವಷ್ಟು ನನಗೆ ಮೂಲವು ಅರ್ಥವಾಗುವುದೆಂದು ಆಸಿಸುತ್ತೇನೆ.'' ಎಂದು ತಿಳಿಸಬೇಕಾಯಿತು. ಅವರೊಡನೆ ನಾನು ಭಗವದ್ಗೀತೆಯನ್ನು ಓದತೊಡಗಿದೆನು. ಎರಡನೆಯ ಅಧ್ಯಾಯದ

ಧ್ಯಾಯತೋ ವಿಷಯಾನ್ ಪುಂಸಃ ।
ಸಂಗಸ್ತೇಷೂಪಜಾಯತೆ ।
ಸಂಗಾತ್ ಸಂಜಾಯತೇ ಕಾಮಃ
ಕಾಮಾತ್ ಕ್ರೋಧೋಭಿಜಾಯತೇ ||
ಕ್ರೋಧಾದ್ಭವತಿ ಸಂಮೋಹಃ
ಸಂಮೋಹಾತ್ ಸ್ಮೃತಿವಿಭ್ರಮಃ ।

ಸ್ಮೃತಿಭ್ರಂಶಾದ್ಬುದ್ಧಿನಾಶೋ
ಬುದ್ಧಿನಾಶಾತ್ ಪ್ರಣಶ್ಯತಿ ||

[ಮನುಷ್ಯನು ವಿಷಯದ ವಿಚಾರವಾಗಿ ಚಿಂತನೆಮಾಡುತ್ತಿದ್ದರೆ ಅವನಿಗೆ ಮೊದಲು ವಿಷಯದ ಸಂಗವು ಉತ್ಪನ್ನವಾಗುತ್ತದೆ. ಸಂಗದಿಂದ ಆ ವಿಷಯದ ಕಾಮವು—ಆ ವಿಷಯವು ಪ್ರಾಪ್ತವಾಗಬೇಕೆಂಬ ವಾಸನೆಯು—ಉಂಟಾಗುತ್ತದೆ ; ಮತ್ತು ಇದರಿಂದ (ಇದಕ್ಕೆ ವಿಘ್ನವುಂಟಾದಲ್ಲಿ) ಕ್ರೋಧವುಂಟಾಗುತ್ತದೆ. ಕ್ರೋಧದಿಂದ ಸಂಮೋಹ (ಅಥವಾ ಅವಿವೇಕ) ವೂ ಸಂಮೋಹದಿಂದ ಸ್ಮೃತಿವಿಭ್ರಮವೂ ಸ್ಮೃತಿವಿಭ್ರಮದಿಂದ ಬುದ್ಧಿನಾಶವೂ ಉಂಟಾಗುತ್ತವೆ· ಮತ್ತು ಬುದ್ಧಿನಾಶವಾದ ಮೇಲೆ ಕಡೆಗೆ ಮನುಷ್ಯನೂ ನಾಶಹೊಂದುತ್ತಾನೆ. (ಧರ್ಮ, ಅರ್ಥ, ಕಾಮ, ಮೋಕ್ಷ, ಇವುಗಳಲ್ಲಿ ಯಾವ ಪುರುಷಾರ್ಥಕ್ಕೂ ಅವನು ಯೋಗ್ಯನಾಗಿರುವುದಿಲ್ಲ.)]

ಎಂಬ ಶ್ಲೋಕಗಳು ನನ್ನ ಮನಸ್ಸನ್ನು ತಟ್ಟಿದುವು. ಅವು ನನ್ನ ಕಿವಿಯಲ್ಲಿ ಇನ್ನೂ ಧ್ವನಿಸುತ್ತಿವೆ. ಆ ಸಮಯದಲ್ಲಿ ಭಗವದ್ಗೀತೆಯೊಂದು ಅಮೂಲ್ಯ ಗ್ರಂಥವೆಂದು ನನಗೆ ತೋರಿತು. ಬರಬರುತ್ತಾ ನನಗೆ ಇದರಲ್ಲಿನ ಮಾನ್ಯತೆಯು ಹೆಚ್ಚುತ್ತಾ ಬಂದಿದೆ. ಇಂದು ನಾನು ಅದನ್ನು ಸತ್ಯದ ಅರಿವನ್ನು ಸಂಪಾದಿಸುವುದಕ್ಕೆ ಸರ್ವೋತ್ತಮವಾದ ಗ್ರಂಥವೆಂದು ಎಣಿಸುತ್ತೇನೆ. ನಿರಾಶೆಯ ಸಮಯದಲ್ಲಿ ಈ ಗ್ರಂಥವು ನನಗೆ ಅಮೂಲ್ಯವಾದ ಸಹಾಯವನ್ನು ಮಾಡಿದೆ. ನಾನು ಇದರ ಇಂಗ್ಲಿಷ್ ಭಾಷಾಂತರಗಳಲ್ಲಿ ಹೆಚ್ಚು ಕಡಿಮೆ ಎಲ್ಲವನ್ನೂ ಓದಿದೆನು. ಅವುಗಳಲ್ಲಿ ಆರ್‌ನಾಲ್ಡರ ಭಾಷಾಂತರವು ನನಗೆ ಶ್ರೇಷ್ಠತಮವೆಂದು ತೋರುತ್ತದೆ. ಅದರಲ್ಲಿ ಮೂಲಗ್ರಂಥಗ ಭಾವಗಳಿಗೆ ಸ್ವಲ್ಪವೂ ಕುಂದುಂಟಾಗಿಲ್ಲ. ಆದರೂ ಆ ಅನುವಾದವು ಅನುವಾದದಂತೆ ತೋರುವುದಿಲ್ಲ. ಈ ಸ್ನೇಹಿತರ ಜೊತೆಗೆ ನಾನು ಭಗವದ್ಗೀತೆಯನ್ನು ಓದಿದರೂ ಅದನ್ನು ಆಗ ಸರಿಯಾಗಿ ಅಧ್ಯಯನಮಾಡಿದೆನೆಂದು ಹೇಳುವಹಾಗಿಲ್ಲ. ಇದಾದ ಕೆಲವು ವರ್ಷಗಳಮೇಲೆಯೇ ನಾನು ಇದನ್ನು ಪ್ರತಿನಿತ್ಯವೂ ಓದುವುದಕ್ಕೆ ಪ್ರಾರಂಭ ಮಾಡಿದುದು.

ಈ ಸಹೋದರರು ಆರ್‌ನಾಲ್ಡರ ಬುದ್ಧಚರಿತೆ (ಲೈಟ್ ಆಫ್ ಏಷ್ಯಾ) ಯನ್ನೂ ಓದುವಂತೆ ನನಗೆ ಹೇಳಿದರು. ನಾನು ಈ ಪುಸ್ತಕವನ್ನು ಭಗವದ್ಗೀತೆಗಿಂತ ಹೆಚ್ಚಾದ ಉತ್ಸಾಹದಿಂದ ಓದಿದೆನು. ಪುಸ್ತಕವನ್ನು ಕೈಗೆ ತೆಗೆದುಕೊಂಡಮೇಲೆ ಅದನ್ನು ಬಿಡುವುದಕ್ಕೇ ಮನಸ್ಸು ಬರಲಿಲ್ಲ. ಈ ಸಹೋದರರೇ ಒಂದುಸಲ ನನ್ನನ್ನು ಬ್ಲಾವೆಟ್‌ಸ್ಕೀ ಲಾಡ್ಜಿಗೆ ಕರೆದುಕೊಂಡು ಹೋಗಿ ಅಲ್ಲಿ ಮ್ಯಾಡಮ್ ಬ್ಲಾವೆಟ್‌ಸ್ಕೀ ಮತ್ತು ಮಿಸೆಸ್ ಆನಿಬೆಸೆಂಟ್ ಇವರುಗಳ ಭೆಟ್ಟಿಯನ್ನು ಮಾಡಿಸಿದರು. ಆಗ ತಾನೆ ಮಿಸೆಸ್ ಬೆಸೆಂಟರು ಥಿಯಸಾಫಿಕಲ್ ಸೊಸೈಟಿ (ಬ್ರಹ್ಮವಿದ್ಯಾ ಸಮಾಜ) ಗೆ ಸೇರಿದ್ದರು. ಇವರು ತಮ್ಮ ಮತವನ್ನು ಬದಲಾಯಿಸಿದುದರ ಸಂಬಂಧವಾಗಿ ವೃತ್ತಪತ್ರಿಕೆಗಳಲ್ಲಿ ನಡೆಯುತ್ತಿದ್ದ ಚರ್ಚೆಯನ್ನು ನಾನು ಬಹಳ ಕುತೂಹಲದಿಂದ ಓದುತ್ತಿದ್ದೆನು. ಈ ಸಹೋದರರು ನನ್ನನ್ನು ಈ ಸಂಸ್ಥೆಗೆ ಸೇರೆಂದು ಹೇಳಿದರು. ನಾನು ವಿನಯದಿಂದ "ನನ್ನ ಸ್ವಂತ ಧರ್ಮದ ಜ್ಞಾನವೇ ಅಲ್ಪವಾಗಿರುವಾಗ ಬೇರೆಯ ಸಂಪ್ರದಾಯಕ್ಕೆ ಸೇರುವುದಕ್ಕೆ ನನಗಿಷ್ಟವಿಲ್ಲ." ಎಂದು ಹೇಳಿದೆನು. ಈ ಸಹೋದರರ ಸಲಹೆಯ ಮೇರೆ ನಾನು ಮ್ಯಾಡಮ್ ಬ್ಲಾವೆಟ್‌ಸ್ಕಿಯ 'ಕೀ ಟು ಥಿಯಾಸಫಿ' (ಬ್ರಹ್ಮವಿದ್ಯೆಯ ಮರ್ಮ) ಎಂಬ ಪುಸ್ತಕವನ್ನು ಓದಿದುದು ನನಗೆ ಸ್ವಲ್ಪ ನೆನಪಿದೆ. ಈ ಪುಸ್ತಕವನ್ನು ಓದಿದುದರಿಂದ ಹಿಂದೂಮತಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಓದಬೇಕೆಂಬ ಇಚ್ಛೆಯು ನನ್ನಲ್ಲಿ ಉಂಟಾಯಿತಲ್ಲದೆ ಪಾದ್ರಿಗಳ ಮಾತಿನಿಂದ ನನ್ನ ಮನಸ್ಸಿನಲ್ಲಿ ಹುಟ್ಟಿದ್ದ ಹಿಂದೂಧರ್ಮವು ಮೂಢಭಕ್ತಿಯಿಂದ ತುಂಬಿದುದು ಎಂಬ ತಪ್ಪು ಅಭಿಪ್ರಾಯವು ದೂರವಾಯಿತು.

ಇದೇ ಸಮಯದಲ್ಲಿಯೇ ಒಂದು ಶಾಕಾಹಾರದ ಭೋಜನಗೃಹದಲ್ಲಿ ಮ್ಯಾಂಚೆಸ್ಟರಿನ ಒಬ್ಬ ಈಸಾಯೀ ಸಜ್ಜನರ ಭೆಟ್ಟಿಯಾಯಿತು. ಇವರು ನನ್ನೊಡನೆ ಈಸಾಯಿಧರ್ಮದ ವಿಚಾರವಾಗಿ ಮಾತುಕತೆಯಾಡಲು ಆರಂಭಿಸಿದರು. ರಾಜಕೋಟೆಯಲ್ಲಿನ ನನ್ನ ಅನುಭವಗಳನ್ನು ಇವರಿಗೆ ತಿಳಿಸಿದೆನು. ಇದನ್ನು ಕೇಳಿ ಅವರಿಗೆ ಬಹಳ ಸಂಕಟವಾಯಿತು. ಅವರು "ನಾನು ಶಾಕಾಹಾರಿ; ಮದ್ಯಪಾನವನ್ನು ಮಾಡುವುದಿಲ್ಲ.

ಅನೇಕ ಈಸಾಯಿಗಳು ಮಾಂಸವನ್ನೂ ಮದ್ಯವನ್ನೂ ಸೇವಿಸುತ್ತಾರೆ ನ್ನುವುದೇನೋ ನಿಜ. ಆದರೆ ಈ ಎರಡರಲ್ಲಿ ಯಾವ ಪದಾರ್ಥವನ್ನಾಗಲೀ ತೆಗೆದುಕೊಳ್ಳಲೇಬೇಕೆಂದು ನಮ್ಮ ಧರ್ಮವು ಕಟ್ಟುಮಾಡಿಲ್ಲ. ತಾವು ಬೈಬಲನ್ನು ಓದಿರಿ. ಇದು ನನ್ನ ವಿನಂತಿ.'' ಎಂದು ಹೇಳಿದರು. ನಾನು ಅವರ ಮಾತಿಗೆ ಒಪ್ಪಿದೆನು. ಬೈಬಲನ್ನು ಅವರು ನನಗೆ ತೆಗೆದು ಕೊಟ್ಟರು. ಅವರೇ ಸ್ವತಃ ಬೈಬಲನ್ನು ಮಾರುತ್ತಿದ್ದರೆಂದೂ ನಾನು ಅವರಿಂದ ನಕಾಶೆ, ಅನುಕ್ರಮಣಿಕೆ ಮುಂತಾದ ವಿಷಯಗಳಿರುವ ಒಂದು ಬೈಬಲನ್ನು ಕೊಂಡುಕೊಂಡೆನೆಂದೂ ಎಲ್ಲೋ ಸ್ವಲ್ಪ ನೆನಪಿದೆ. ನಾನು ಅದನ್ನು ಓದುವುದಕ್ಕೆ ಪ್ರಾರಂಭಿಸಿದೆನು. ಆದರೆ ನನಗೆ ಅದರ ಪೂರ್ವಭಾಗವನ್ನು ಕಡೆಯುವರೆಗೆ ಓದುವುದು ಸಾಧ್ಯವಾಗಲಿಲ್ಲ. 'ಜೆನೆಸಿಸ್' (ಸೃಷ್ಟಿಕ್ರಮ) ಎಂಬ ಅಧ್ಯಾಯವನ್ನು ಓದಿದಮೇಲೆ ಮುಂದಿನ ಭಾಗವನ್ನು ಓದುವುದಕ್ಕೆ ಯತ್ನಮಾಡಿದರೆ ನನಗೆ ತಪ್ಪದೆ ನಿದ್ದೆ ಬರುತ್ತಿದ್ದಿತು. ನಾನು ಓದಿದ್ದೇನೆಂದು ಹೇಳಿಕೊಳ್ಳುವುದಕ್ಕೋಸ್ಕರ ಸ್ವಲ್ಪವೂ ಉತ್ಸಾಹವಿಲ್ಲದೆ ಅರ್ಥವನ್ನು ತಿಳಿದುಕೊಳ್ಳದೆ ಬಹು ಶ್ರಮದಿಂದ ಇನ್ನೂ ಕೆಲವು ಅಧ್ಯಾಯಗಳನ್ನು ಓದಿದೆನು. 'ನಂಬರ್' ಎಂಬ ಅಧ್ಯಾಯವನ್ನು ಓದುವಾಗ ನನಗೆ ಬಹಳ ಬೇಜಾರಾಯಿತು.

ಆದರೆ ಉತ್ತರಭಾಗವು ಬೇರೆ ರೀತಿಯಾಗಿ ತೋರಿತು. ಅದರಲ್ಲಿಯೂ 'ದಿ ಸರ್‌ಮನ್ ಆನ್ ದಿ ಮೌಂಟ್' ಎನ್ನುವುದು (ಯೇಸುಕ್ರಿಸ್ತನು ಗುಡ್ಡಗಮೇಲೆ ಮಾಡಿದ ಉಪದೇಶ) ನನ್ನ ಮನಸ್ಸನ್ನು ತಟ್ಟಿತು. ನಾನು ಅದನ್ನು ಭಗವದ್ಗೀತೆಯೊಡನೆ ಹೋಲಿಸಿ ನೋಡಿದೆನು. ''ನಾನು ನಿಮಗೆ ಹೇಳುವುದೇನೆಂದರೆ : ಕೇಡುಮಾಡುವವರಿಗೆ ಅಡ್ಡಬರಬೇಡಿ. ಯಾರಾದರೂ ನಿಮ್ಮ ಬಲದ ಕೆನ್ನೆಯಮೇಲೆ ಪೆಟ್ಟುಹಾಕಿದರೆ ಇನ್ನೊಂದು ಕೆನ್ನೆಯನ್ನೂ ಅವರಿಗೆ ತೋರಿಸಿರಿ. ನಿಮ್ಮ ಅಂಗಿಯನ್ನು ಯಾರಾದರೂ ಕಿತ್ತುಕೊಂಡರೆ ನಿಮ್ಮ ವಲ್ಲಿಯನ್ನು ಅವರಿಗೆ ಕೊಡಿ.'' ಎನ್ನುವುದನ್ನು ಓದಿ ನನಗೆ ಬಹಳ ಆನಂದವಾಯಿತು. ಶ್ಯಾಮಲಭಟ್ಟರ 'ಹರಸಿದ ಒಳಿತೆಳಸಿ' ಎಂಬ ಚೌಪದಿಯು ನೆನಪಿಗೆ ಬಂದಿತು. ನನ್ನ ಎಳೆಮನ ಭಗವದ್ಗೀತೆಯನ್ನೂ 'ಲೈಟ್ ಆಫ್ ಏಷ್ಯಾ'ವನ್ನೂ ಮತ್ತು ಯೇಸುವಿ

ವಚನಗಳನ್ನೂ ಒಂದೇ ತತ್ವವನ್ನಾಗಿ ಮಾಡಲು ಪ್ರಯತ್ನಪಟ್ಟಿತು. ತ್ಯಾಗವೇ ಸರ್ವೋತ್ತಮವಾದ ಧರ್ಮವೆನ್ನುವುದು ನನ್ನ ಮನಸ್ಸಿಗೆ ಬಹಳವಾಗಿ ರುಚಿಸಿತು.

ಇದನ್ನು ಓದಿದಮೇಲೆ ನನಗೆ ಇತರ ಧರ್ಮಾಚಾರ್ಯರ ಜೀವನ ಚರಿತೆಗಳನ್ನು ಓದಬೇಕೆಂಬ ತೀವ್ರವಾದ ಇಚ್ಛೆಯುಂಟಾಯಿತು. ಕಾರ್ಲೈಲನ 'ಹೀರೋಸ್ ಅಂಡ್ ಹೀರೋವರ್‌ಷಿಪ್' (ಮಹಾಪುರುಷರು ಮತ್ತು ಅವರ ಪೂಜೆ) ಎಂಬ ಪುಸ್ತಕವನ್ನು ಓದಬೇಕೆಂದು ಒಬ್ಬ ಮಿತ್ರರು ಹೇಳಿದರು. ಅದರಲ್ಲಿ ಅವತಾರಪುರುಷರ ಸಂಬಂಧವಾಗಿ ಇದ್ದುದೆಲ್ಲವನ್ನೂ ಓದಿದೆನು. ಇದರಿಂದ ನನಗೆ ಇವರುಗಳ ಮಹತ್ವ, ಶೌರ್ಯ, ಮತ್ತು ತಪಶ್ಚರ್ಯೆ, ಇವುಗಳ ವಿಚಾರವಾಗಿ ಸ್ವಲ್ಪ ಜ್ಞಾನ ವುಂಟಾಯಿತು.

ಇಷ್ಟರಮಟ್ಟಿನ ಪರಿಚಯವನ್ನು ಹೊಂದಿದಮೇಲೆ ಆ ಸಮಯದಲ್ಲಿ ಇನ್ನೂ ಹೆಚ್ಚಾಗಿ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಏಕೆಂದರೆ ಪರೀಕ್ಷೆಯ ಪುಸ್ತಕಗಳನ್ನು ಓದುವುದರಲ್ಲಿ ಮಿಕ್ಕ ಪುಸ್ತಕಗಳನ್ನು ಓದುವುದಕ್ಕೆ ಹೊತ್ತೇ ಇರುತ್ತಿರಲಿಲ್ಲವೆನ್ನಬಹುದು. ಆದರೆ ಇತರ ಧಾರ್ಮಿಕ ಪುಸ್ತಕಗಳನ್ನು ಓದಬೇಕು ಮತ್ತು ಪ್ರಧಾನ ಧರ್ಮಗಳ ಪರಿಚಯುವನ್ನು ಹೊಂದಬೇಕು ಎಂಬ ಇಚ್ಛೆಯನ್ನು ನನ್ನ ಮನಸ್ಸಿನಲ್ಲಿ ಗುರುತಿಟ್ಟುಕೊಂಡೆನು.

ಇದರ ಮಧ್ಯೆ ನಾಸ್ತಿಕತೆಯ ಪರಿಚಯುವನ್ನೂ ಅಷ್ಟು ಇಷ್ಟು ಸಂಪಾದಿಸದೆ ಇರಲು ಹೇಗೆ ಸಾಧ್ಯ? ಬ್ರಾಡ್‌ಲಾರವರ ಹೆಸರೂ ಅವರ 'ನಾಸ್ತಿಕತೆ'ಯೂ ಪ್ರತಿಯೊಬ್ಬ ಭಾರತೀಯನಿಗೂ ತಿಳಿದ ವಿಷಯುವಾಗಿದ್ದಿತು. ನಾನು ಈ ವಿಚಾರಕ್ಕೆ ಸಂಬಂಧಪಟ್ಟ ಒಂದು ಪುಸ್ತಕವನ್ನು ಓದಿದೆನು. ಅದರ ಹೆಸರು ಈಗ ನನಗೆ ನೆನಪಿಲ್ಲ. ಇದರಿಂದ ನನ್ನ ಮನಸ್ಸಿನಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಏಕೆಂದರೆ ನಾನು ಆಗಲೇ ನಾಸ್ತಿಕತೆಯ ಮರುಭೂಮಿಯನ್ನು ದಾಟಿಬಿಟ್ಟಿದ್ದೆನು. ಮಿಸೆಸ್ ಬೆಸೆಂಟರು ಆ ಸಮಯದಲ್ಲಿ ಬಹು ಪ್ರಾಮುಖ್ಯತೆಯನ್ನು ಪಡೆದಿದ್ದರು. ಅವರು ನಾಸ್ತಿಕಮತವನ್ನು ಬಿಟ್ಟು ಆಸ್ತಿಕರಾದುದರಿಂದ

ನಾಸ್ತಿಕ ವಾದದಲ್ಲಿ ನನಗಿದ್ದ ಔದಾಸೀನ್ಯವು ಬಲಗೊಂಡಿತು. ಆಕೆಯು ಈ ವಿಷಯವಾಗಿ ಬರೆದಿದ್ದ "ನಾನು ಏಕೆ ಥಿಯಾಸಫಿಸ್ಟ್ ಆದೆನು" ಎಂಬ ಪುಸ್ತಕವನ್ನು ಓದಿದ್ದೆನು.

ಇದೇ ಸಮಯದಲ್ಲಿ ಬ್ರಾಡ್‌ಲಾರವರ ಮರಣವು ಸಂಭವಿಸಿತು. ವೋಕಿಂಗ್ ಸ್ಮಶಾನದಲ್ಲಿ ಆತನನ್ನು ಸಮಾಧಿ ಮಾಡಿದರು. ನಾನು ಆಗ ಅಲ್ಲಿಗೆ ಹೋಗಿದ್ದೆನು. ಲಂಡನಿನಲ್ಲಿದ್ದ ಪ್ರತಿಯೊಬ್ಬ ಭಾರತೀಯನೂ ಅಲ್ಲಿಗೆ ಬಂದಿದ್ದನೆಂದೇ ನನ್ನ ನಂಬಿಕೆ. ಈತನಲ್ಲಿ ತಮಗಿದ್ದ ಆದರವನ್ನು ತೋರಿಸುವುದಕ್ಕೋಸ್ಕರ ಕೆಲವು ಪಾದ್ರಿಗಳೂ ಬಂದಿದ್ದರು. ಹಿಂತಿರುಗಿ ಬರುವಾಗ ನಾವೆಲ್ಲರೂ ನಿಲ್ದಾಣದಲ್ಲಿ ರೈಲುಗಾಡಿಯನ್ನು ಎದುರುನೋಡುತ್ತಾ ನಿಂತಿದ್ದೆವು. ಈ ಗುಂಪಿನಲ್ಲಿದ್ದ ನಾಸ್ತಿಕರ ಮುಂದಾಳೊಬ್ಬನು ಒಬ್ಬ ಪಾದ್ರಿಯೊಡನೆ ವಾದಿಸುವುದಕ್ಕೆ ಮೊದಲು ಮಾಡಿದನು :—

"ಸ್ವಾಮಿ, ದೇವರು ಇದ್ದಾನೆಂದು ನೀವು ಹೇಳುತ್ತೀರಲ್ಲವೆ?"

"ಹೌದು." ಎಂದು ಆ ಸಜ್ಜನನು ಮೆದುನುಡಿಯಲ್ಲಿ ಉತ್ತರ ಕೊಟ್ಟನು.

ಆ ನಾಸ್ತಿಕನು ಆತ್ಮವಿಶ್ವಾಸದ ಮುಗುಳುನಗೆಯಿಂದ 'ಭೂಮಿಯ ಸುತ್ತಳತೆಯು ೨೮,೦೦೦ ಮೈಲಿ. ಇದನ್ನು ನೀವು ಒಪ್ಪುವಿರಿತಾನೆ?' ಎಂದು ಕೇಳಿದನು.

'ಅವಶ್ಯಕವಾಗಿ.'

'ಹಾಗಾದರೆ ನಿಮ್ಮ ದೇವರ ಅಳತೆಯೇನು? ಅವನೆಲ್ಲಿದ್ದಾನೆ? ಹೇಳಿರಿ.'

'ನಾವು ಗ್ರಹಿಸುವುದೇ ಆದರೆ ಆತನು ನಮ್ಮಿಬ್ಬರ ಹೃದಯದಲ್ಲಿಯೂ ವಾಸಿಸುತ್ತಿರುತ್ತಾನೆ.'

‘ ಈಗಲೀಗ ! ನನ್ನನ್ನು ಎಳೆಮಗುವೆಂದು ತಿಳಿಯಬೇಡಿರಿ.’ ಎಂದು ಹೇಳಿ ಆ ವೀರಯೋಧನು ವಿಜಯದ ಉತ್ಸಾಹದಿಂದ ಮಿನುಗುವ ದೃಷ್ಟಿಯನ್ನು ನಮ್ಮೆಡೆಗೆ ಬೀರಿದನು.

ಪಾದ್ರಿಯು ಸಮ್ರತಾಪೂರ್ವಕವಾದ ಮೌನವನ್ನು ತಾಳಿದನು. ಈ ಸಂವಾದದಿಂದ ನಾಸ್ತಿಕವಾದದಲ್ಲಿ ನನಗಿದ್ದ ಅನಾದರವು ಇನ್ನೂ ಹೆಚ್ಚಿತು.



## ೨೧

# ನಿರ್ಬಲ್ ಕೇ ಬಲ್ ರಾಮ್

## (ನಿರ್ಬಲರಿಗೆ ರಾಮನೇ ಆಶ್ರಯ)

ನಾನು ಹಿಂದೂಧರ್ಮದ ಮತ್ತು ಈ ಪ್ರಪಂಚದ ಇತರ ಧರ್ಮಗಳ ಜ್ಞಾನವನ್ನು ಸ್ವಲ್ಪಮಟ್ಟಿಗೆ ಸಂಪಾದಿಸಿದ್ದರೂ ಇಷ್ಟೇ ನನ್ನನ್ನು ಆಪತ್ತುಗಳಿಂದ ಪಾರುಮಾಡಲು ಸಾಲದೆಂದು ನನಗೆ ತಿಳಿದಿರಬೇಕಾಗಿದ್ದಿತು. ಮನುಷ್ಯನಿಗೆ ಸಂಕಟವು ಪ್ರಾಪ್ತವಾದಾಗ ಅವನನ್ನು ರಕ್ಷಿಸುವುದೇನು ಎನ್ನುವುದರ ಸುಳಿವೇ ಅವನಿಗೆ ಗೊತ್ತಿರುವುದಿಲ್ಲ ; ಅದರ ವಿಷಯವಾದ ಜ್ಞಾನವಂತು ಮೊದಲೇ ಇರುವುದಿಲ್ಲ. ನಾಸ್ತಿಕನು ಹೀಗೆ ರಕ್ಷಿತನಾದರೆ ಏನೋ ಆಕಸ್ಮಾತ್ ಪಾರಾದೆನೆಂದು ಹೇಳುತ್ತಾನೆ. ಇಂತಹ ಪ್ರಸಂಗವೇ ಒದಗಿದರೆ ಆಸ್ತಿಕನು ದೇವರು ತನ್ನನ್ನು ರಕ್ಷಿಸಿದನೆಂದು ಹೇಳುವನು. ಹೀಗೆ ಪರಿಣಾಮವಾದುದು ತನ್ನ ಧರ್ಮದ ಅಧ್ಯಯನ ಮತ್ತು ಆತ್ಮಸಂಯಮದ ಫಲವಾಗಿ ಈಶ್ವರನು ತನ್ನ ಹೃದಯದಲ್ಲಿ ಪ್ರಕಟಿತನಾಗಿರುವುದರಿಂದಲೇ ಎಂದು ತೀರ್ಮಾನಿಸುತ್ತಾನೆ. ಹೀಗೆ ನಿರ್ಣಯಿಸುವುದಕ್ಕೆ ಅವನಿಗೆ ಅಧಿಕಾರವಿಲ್ಲವೆನ್ನಲಾಗುವುದಿಲ್ಲ. ಆದರೆ ಪಾರಾಗುವ ಸಮಯದಲ್ಲಿ ತನ್ನನ್ನು ರಕ್ಷಿಸುವುದು ತನ್ನ ಸಂಯಮವೋ ಅಥವಾ ಇನ್ನಾವುದೋ ಅವನಿಗೆ ಗೊತ್ತಿರುವುದಿಲ್ಲ. ಯಾವನು ತನ್ನ ಸಂಯಮಬಲದ ವಿಚಾರವಾಗಿ ಅಭಿಮಾನಿಯಾಗಿರುತ್ತಾನೋ ಅವನ ಸಂಯಮವು ಮಣ್ಣಿನೊಡನೆ ಕಲೆತುಹೋಗುತ್ತದೆ. ಈ ಅನುಭವವು ಹೀಗೆ ಅಭಿಮಾನಪಟ್ಟುಕೊಂಡ ಯಾರಿಗಿಲ್ಲ? ಹೀಗೆ ಆಪತ್ತೊದಗಿದ ಸಮಯದಲ್ಲಿ ಧರ್ಮಜ್ಞಾನವು (ಈ ಸಂಬಂಧವಾದ ಅನುಭವವಲ್ಲ) ತೀರ ಟೊಳ್ಳಾಗಿ ಕಾಣುತ್ತದೆ.

ಕೇವಲ ಧರ್ಮಜ್ಞಾನವು ನಿರರ್ಥಕವಾದುದೆಂಬ ಅನುಭವವು ನನಗೆ ಮೊದಲು ವಿಲಾಯತಿಯಲ್ಲಿ ಪ್ರಾಪ್ತವಾಯಿತು. ಇದಕ್ಕೆ ಮುಂಚೆ ಇಂತಹ ಸಂಕಟಗಳಿಂದ ನಾನು ಹೇಗೆ ರಕ್ಷಿತನಾದೆನೋ ಅದು ನನಗೆ ತಿಳಿಯದು. ಏಕೆಂದರೆ ಆಗ ನಾನು ಬಹಳ ಚಿಕ್ಕವನಾಗಿದ್ದೆನು. ಈಗಲಾದರೋ ನನಗೆ ಇಪ್ಪತ್ತುವರ್ಷವಾಗಿದ್ದಿತಲ್ಲದೆ ಗೃಹಸ್ಥಾಶ್ರಮದ ಅನುಭವವನ್ನು ಕೂಡ ನಾನು ತಕ್ಕಮಟ್ಟಿಗೆ ಹೊಂದಿದ್ದೆನು.

ನನಗೆ ನೆನಪಿರುವಮಟ್ಟಿಗೆ ನನ್ನ ವಿಲಾಯತಿಯ ವಾಸದ ಕಡೆಯ ವರ್ಷದಲ್ಲಿ ಎಂದರೆ ೧೮೯೦ನೆಯ ಇಸವಿಯಲ್ಲಿ ಪೋರ್ಟ್ಸ್‌ಮುತಿನಲ್ಲಿ ಶಾಕಾಹಾರಿಗಳ ಕೂಟವೊಂದು ಸೇರಿತು. ಅದಕ್ಕೆ ನನ್ನನ್ನೂ ನನ್ನ ಭಾರತೀಯ ಮಿತ್ರರೊಬ್ಬರನ್ನೂ ಕರೆದಿದ್ದರು. ನಾವಿಬ್ಬರೂ ಅಲ್ಲಿಗೆ ಹೋದೆವು. ಪೋರ್ಟ್ಸ್‌ಮುತ್ ಎಂಬುದು ಅನೇಕಜನ ನಾವಿಕರಿರುವ ದೊಡ್ಡ ರೇವುಪಟ್ಟಣ. ಅಲ್ಲಿ ನೀತಿಭ್ರಷ್ಟರಾದ ಹೆಂಗಸರ ಮನೆಗಳನೇಕವಾಗಿವೆ. ಈ ಹೆಂಗಸರು ವೇಶ್ಯೆಯರೂ ಅಲ್ಲ, ಗರತಿಯರೂ ಅಲ್ಲ. ಇಂತಹ ಒಂದು ಮನೆಯಲ್ಲಿಯೇ ನಮ್ಮನ್ನು ಇಳಿಸಿದ್ದರು. ಸ್ವಾಗತ ಮಂಡಲಿಯವರಿಗೆ ಈ ಮನೆಯು ಇಂತಹದೆಂದು ತಿಳಿದಿರಲಿಲ್ಲವೆಂದು ಹೇಳಬೇಕಾದುದೇ ಇಲ್ಲ. ಎರಡುದಿನವಿದ್ದು ಹೋಗುವ ನಮ್ಮಂತಹ ಪ್ರಯಾಣಿಕರಿಗೆ ಪೋರ್ಟ್ಸ್‌ಮುತ್ತಿನಂತಹ ಪಟ್ಟಣದಲ್ಲಿ ಇಳಿದುಕೊಳ್ಳುವುದಕ್ಕೆ ಯಾವ ಮನೆಯು ತಕ್ಕುದು ಯಾವುದು ತಕ್ಕುದಲ್ಲ ಎಂದು ನಿರ್ಧರಿಸಬೇಕೆಂದರೆ ಕಷ್ಟವಾಗುತ್ತಿದ್ದಿತು.

ರಾತ್ರಿಯಾಯಿತು. ನಾವು ಸಭೆಯನ್ನು ಮುಗಿಸಿಕೊಂಡು ಮನೆಗೆ ಬಂದೆವು. ಊಟವಾದಮೇಲೆ ಇಸ್ಪೀಟಾಡುವುದಕ್ಕೆ ಕುಳಿತೆವು. ಮನೆಯ ಯಜಮಾನಿಯೂ ಆಟಕ್ಕೆ ಬಂದು ಸೇರಿದಳು. ವಿಲಾಯತಿಯಲ್ಲಿ ಕುಲೀನರ ಮನೆಗಳಲ್ಲಿಯೂ ಹೆಂಗಸರು ಗಂಡಸರ ಜೊತೆಗೆ ಸೇರಿ ಹೀಗೆ ಆಟವಾಡುವ ವಾಡಿಕೆಯುಂಟು. ಆಟವಾಡುತ್ತಾ ಇರುವಾಗ ನಿರ್ದೋಷವಾದ ವಿನೋದವನ್ನು ಮಾಡುವುದೂ ಉಂಟು. ಆದರೆ ಇಲ್ಲಿ ಮನೆಯ ಯಜಮಾನಿಗೂ ನನ್ನ ಮಿತ್ರನಿಗೂ ಮಧ್ಯೆ ಅಶ್ಲೀಲವಾದ

ವಿನೋದವು ಪ್ರಾರಂಭವಾಯಿತು. ನನ್ನ ಮಿತ್ರನು ಇದರಲ್ಲಿ ಕೇವಲ ಕುಶಲನಾಗಿದ್ದನೆಂಬುದು ನನಗೆ ಗೊತ್ತಿರಲಿಲ್ಲ. ನನಗೂ ಈ ವಿನೋದವು ರುಚಿದೋರಹತ್ತಿ ನಾನೂ ಇವರ ಜೊತೆಗೆ ಸೇರಿದೆನು. ಇಸ್ಪೀಟಾಟವನ್ನು ಮೂಲೆಗೊತ್ತಿ ಸರಸದ ಮಾತನ್ನುಬಿಟ್ಟು ಇನ್ನೇನು ದುಶ್ಚೇಷ್ಟೆಗೆ ಪ್ರಾರಂಭಮಾಡಬೇಕು—ಅಷ್ಟು ಹೊತ್ತಿಗೆ ಪರಮಾತ್ಮನು ನನ್ನ ಮಿತ್ರನ ಹೃದಯವನ್ನು ಹೊಕ್ಕು 'ಈ ಪೈಶಾಚ ಬುದ್ಧಿಯು ನಿನಗೆ ಎಲ್ಲಿಂದ ಬಂದಿತು? ನೀನು ಇಲ್ಲಿಂದ ಓಡು!' ಎಂದು ಆತನ ಬಾಯಲ್ಲಿ ನುಡಿಸಿದನು.

ನನಗೆ ನಾಚಿಕೆಯಾಯಿತು. ನಾನು ಎಚ್ಚತ್ತೆನು. ನನ್ನ ಹೃದಯದಲ್ಲಿಯೇ ಈ ಮಿತ್ರನನ್ನು ಆತನ ಉಪಕಾರಕ್ಕಾಗಿ ವಂದಿಸಿದೆನು. ನಮ್ಮ ತಾಯಿಯ ಎದುರಿಗೆ ಮಾಡಿದ್ದ ಪ್ರತಿಜ್ಞೆಯು ನೆನಪಿಗೆ ಬಂದು ನಾನು ಅಲ್ಲಿಂದ ಓಡಿದೆನು. ನಡುಗುತ್ತಾ ನನ್ನ ಕೊಠಡಿಗೆ ಹೋಗಿ ಸೇರಿದೆನು. ಎದೆಯು ಧಡ್‌ಧಡ್ ಎಂದು ಹೊಡೆಯುತ್ತಿದ್ದಿತು. ನನ್ನ ಸ್ಥಿತಿಯು ಬೇಟೆಗಾರನ ಕೈಯಿಂದ ತಪ್ಪಿಸಿಕೊಂಡ ಜಿಂಕೆಯ ಸ್ಥಿತಿಯಂತಿದ್ದಿತು.

ನಾನು ಪರಸ್ತ್ರೀಯನ್ನು ನೋಡಿ ವಿಕಾರವಶನಾದುದು ಇದೇ ಮೊದಲನೆಯ ಪ್ರಸಂಗವೆಂದು ನನಗೆ ನೆನಪಿದೆ. ಆ ರಾತ್ರಿ ನನಗೆ ನಿದ್ದೆ ಬರಲಿಲ್ಲ. ಅನೇಕ ಪ್ರಕಾರವಾದ ಯೋಚನೆಗಳು ನನ್ನ ಮನಸ್ಸನ್ನು ಆಕ್ರಮಿಸಿದುವು—ಮನೆಯನ್ನು ಬಿಟ್ಟು ಓಡಿ ಹೋಗಲೆ? ನಾನು ಎಲ್ಲಿದ್ದೇನೆ? ನನ್ನ ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳದಿದ್ದರೆ ನನ್ನ ಗತಿಯೇನು? ಕಡೆಗೆ ಇನ್ನುಮೇಲಿಂದ ಬಹಳ ಎಚ್ಚರಿಕೆಯಿಂದ ನಡೆಯಬೇಕೆಂದು ಸಂಕಲ್ಪಿಸಿದೆನು. ಮತ್ತು ಈ ಮನೆಯನ್ನು ಬಿಡುವುದಷ್ಟೇ ಅಲ್ಲದೆ ಪೋರ್ಟ್ಸ್‌ಮತ್ ಪಟ್ಟಣವನ್ನೇ ಬಿಟ್ಟುಬಿಡಬೇಕೆಂದು ನಿಶ್ಚಯಿಸಿದೆನು. ಸಮ್ಮೇಳನವು ಎರಡು ದಿವಸಕ್ಕಿಂತ ಹೆಚ್ಚಾಗಿ ನಡೆಯುವುದಾಗಿರಲಿಲ್ಲ. ನಾನು ಮರುಸಂಜೆಯೇ ಆ ಊರನ್ನು ಬಿಟ್ಟೆನೆಂದೂ ಆ ಸ್ನೇಹಿತನು ಇನ್ನೂ ಕೆಲವು ದಿವಸಗಳು ಅಲ್ಲಿಯೇ ಇದ್ದನೆಂದೂ ಜ್ಞಾಪಕವಿದೆ.

ಧರ್ಮವೆಂದರೇನು? ದೇವರೆಂದರೇನು? ಆತನು ಯಾವ ಪ್ರಕಾರವಾಗಿ ನಮ್ಮಲ್ಲಿ ಕೆಲಸ ಮಾಡುತ್ತಾನೆ?—ಇದಾವುದೂ ನನಗೆ ಆಗ ತಿಳಿದಿರಲಿಲ್ಲ. ದೇವರು ನನ್ನನ್ನು ರಕ್ಷಿಸಿದನೆಂದು ನಾನು ಆಗ ಅಸ್ಪಷ್ಟವಾಗಿ ಮಾತ್ರ ತಿಳಿದುಕೊಂಡೆನು. ಎಲ್ಲಾ ಆಪತ್ತುಗಳಿಂದಲೂ ಈಶ್ವರನು ನನ್ನನ್ನು ಕಾಪಾಡಿದ್ದಾನೆ. "ದೇವರು ನನ್ನನ್ನು ರಕ್ಷಿಸಿದನು." ಎಂಬ ವಾಕ್ಯದಲ್ಲಿ ನನಗೆ ಮೊದಲಿಗಿಂತ ಆಳವಾದ ಅರ್ಥವು ಕಾಣಬರುತ್ತದೆಯೆನ್ನುವುದೇನೋ ನಿಜ. ಆದರೆ ಇದರ ಸಂಪೂರ್ಣವಾದ ಅರ್ಥವನ್ನು ನಾನು ಇನ್ನೂ ಅರಿತಿಲ್ಲವೆಂದೇ ನನ್ನ ತೋರಿಕೆ. ಹೆಚ್ಚು ಅನುಭವದಿಂದಲೇ ನನಗೆ ಈ ವಿಷಯದಲ್ಲಿ ಇನ್ನೂ ಸಂಪೂರ್ಣವಾದ ಅರಿವು ಸಾಧ್ಯ. ಆದರೆ ನನ್ನ ಎಲ್ಲಾ ಸಂಕಟಗಳಲ್ಲಿಯೂ—ಆಧ್ಯಾತ್ಮಿಕ ಪ್ರಸಂಗಗಳಲ್ಲಿಯಾಗಲಿ ವಕೀಲಿಯಲ್ಲಾಗಲಿ ಸಂಸ್ಥೆಗಳನ್ನು ನಡೆಸುವುದರಲ್ಲಿಯಾಗಲಿ ರಾಜಕೀಯ ಪ್ರಸಂಗಗಳಲ್ಲಿಯಾಗಲಿ—ದೇವರು ನನ್ನನ್ನು ಪಾರುಮಾಡಿದನೆಂದು ಹೇಳಬಲ್ಲೆನು. ಆಸೆಯೆಲ್ಲಾ ಕೈಬಿಟ್ಟು ಹೋಗಿ 'ನೆರವೊದಗದೆ ಸೊಗಗುಂದಿ' ಕುಳಿತಿರುವಾಗ ಹೇಗೋ ಎಲ್ಲಿಂದಲೋ ಸಹಾಯವು ಬಾದೊದಗುತ್ತದೆಯೆನ್ನುವುದು ನನ್ನ ಅನುಭವ. ಸ್ತುತಿ, ಉಪಾಸನೆ, ಪ್ರಾರ್ಥನೆ, ಇವೆಲ್ಲವೂ ಕೇವಲ ಮೌಢ್ಯದಿಂದ ಹುಟ್ಟಿದ ಊಹೆಗಳಲ್ಲ. ನಮ್ಮ ಅನ್ನಪಾನಗಳು, ನಾವು ಕುಳಿತುಕೊಳ್ಳುವುದು, ತಿರುಗಾಡುವುದು ಇವೆಲ್ಲಕ್ಕಿಂತ ಹೆಚ್ಚು ನಿಜವಾದ ಕರ್ಮಗಳಿವು. ಇವು (ಸ್ತುತಿ ಇತ್ಯಾದಿ) ಮಾತ್ರ ಸತ್ಯ ಉಳಿದುದೆಲ್ಲಾ ಮಿಥ್ಯವೆಂದು ಹೇಳಿದರೆ ಕೂಡ ಅತಿಶಯೋಕ್ತಿಯಾಗಲಾರದು.

ಇಂತಹ ಉಪಾಸನೆಯೂ ಇಂತಹ ಪ್ರಾರ್ಥನೆಯೂ ಕೇವಲ ಮಾತಿನ ವೈಭವವಲ್ಲ. ಇವುಗಳ ಮೂಲವಿರುವುದು ಕಂಠದಲ್ಲಿ ಅಲ್ಲ; ಹೃದಯದಲ್ಲಿ. ಆದುದರಿಂದ ನಾವು ಹೃದಯವನ್ನು ನಿರ್ಮಲವಾಗಿ ಇಟ್ಟುಕೊಂಡಿರುವ 'ಒಲವೊಂದುಳಿದನಿತುತೊಲಗಿಹ' ವಿಮಲ ಹೃದಯವನ್ನು ಪಡೆವಷ್ಟು ಚಿತ್ತಶುದ್ಧಿಯನ್ನು ಸಾಧಿಸಿದರೆ, ಹೃದಯ ತಂತ್ರಿಗಳನ್ನೆಲ್ಲಾ ಸುಸಂಘಟಿತಗಳನ್ನಾಗಿ ಇಟ್ಟುಕೊಂಡಿದ್ದರೆ, ಆಗ ಹೃದಯ

ದಿಂದ ಹೊರಡುವ ಧ್ವನಿಯು ಗಗನಗಾಮಿನಿಯಾಗುವುದು. ಪ್ರಾರ್ಥನೆಗೆ ನಾಲಿಗೆಯ ಆವಶ್ಯಕತೆಯೇ ಇಲ್ಲ. ಅದು ಸ್ವಭಾವತಃ ಇಂದ್ರಿಯ ವ್ಯಾಪಾರಕ್ಕೆ ಒಳಪಟ್ಟುದಲ್ಲ. ಹೃದಯವನ್ನು ಕಶ್ಮಲದಿಂದ ಶುದ್ಧಿ ಮಾಡಬೇಕಾದರೆ ಉಪಾಸನೆಯು ರಾಮಬಾಣದಂತಹ ಔಷಧಿಯಾಗಿದೆ. ಈ ವಿಷಯದಲ್ಲಿ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಆದರೆ ಇದರೊಡನೆ ಸಂಪೂರ್ಣವಾದ ನಮ್ರತೆಯಿರಬೇಕು.



## ೨೨

# ನಾರಾಯಣ ಹೇಮಚಂದ್ರ

ಸುಮಾರು ಇದೇ ಸಮಯದಲ್ಲಿ ನಾರಾಯಣ ಹೇಮಚಂದ್ರನು ಸೀಮೆಗೆ ಬಂದನು. ನಾನು ಆತನೊಬ್ಬ ಗ್ರಂಥಕರ್ತನೆಂದು ಕೇಳಿದ್ದೆನು. ನಾವಿಬ್ಬರೂ ನ್ಯಾಷನಲ್ ಇಂಡಿಯನ್ ಅಸೋಸಿಯೇಷನಿಗೆ ಸೇರಿದ ಮಿಸ್ ಮ್ಯಾನಿಂಗರ ಮನೆಯಲ್ಲಿ ಮೊದಲುಸಲ ಒಬ್ಬರನ್ನೊಬ್ಬರು ನೋಡಿದೆವು. ನಾನು ನಾಲ್ಕು ಜನರೊಂದಿಗೆ ಸೇರಲಾರದ ಮುಖಹೇಡಿಯೆಂದು ಮಿಸ್ ಮ್ಯಾನಿಂಗರಿಗೆ ಗೊತ್ತಿದ್ದಿತು. ನಾನು ಆಕೆಯ ಮನೆಗೆ ಹೋದಾಗ ಯಾರಾದರೂ ಮಾತನಾಡಿಸಿದ ಹೊರತು ಮಾತನಾಡದೆ ಯಾವಾಗಲೂ ಬಾಯಿಕಟ್ಟಿಕೊಂಡು ಕುಳಿತಿರುತ್ತಿದ್ದೆನು. ಆಕೆಯು ನನಗೆ ನಾರಾಯಣ ಹೇಮಚಂದ್ರನ ಪರಿಚಯವನ್ನು ಮಾಡಿಕೊಟ್ಟರು. ಆತನಿಗೆ ಇಂಗ್ಲಿಷ್ ಬರುತ್ತಿರಲಿಲ್ಲ. ಆತನ ಉಡುಪು ವಿಚಿತ್ರವಾಗಿದ್ದಿತು—ಅಡ್ಡಾದಿಡ್ಡಿಯಾದ ಒಂದು ಷರಾಯಿ, ಸುಕ್ಕಾಗಿರುವ ಮಾಸಿದ ಪಾರಸೀ ಮಾದ್ರಿಯ ಒಂದು ಕಂದುಬಣ್ಣದ ಅಂಗಿ, ನೆಕ್‌ಟೈ ಇಲ್ಲ, ಕಾಲರ್ ಇಲ್ಲ, ಮತ್ತು ಕುಚ್ಚಿರುವ ಒಂದು ತುಪ್ಪಟದ ಟೋಪಿ. ಆತನು ಉದ್ದವಾದ ಗಡ್ಡವನ್ನು ಬಿಟ್ಟಿದ್ದನು.

ಆತನ ಆಕೃತಿಯು ಸಣ್ಣದು, ಎತ್ತರ ಕಡಿಮೆ. ಆತನ ಗುಂಡು ಮುಖದ ತುಂಬ ಮೈಲಿಯ ಮಚ್ಚೆ. ಅದರ ಮಧ್ಯೆ ಇದ್ದ ಮೂಗು ಚೂಪಾಗಿಯೂ ಇರಲಿಲ್ಲ, ಮೊಂಡಾಗಿಯೂ ಇರಲಿಲ್ಲ. ಆತನು ಹಗಲೆಲ್ಲ ಕೈಯಿಂದ ಗಡ್ಡವನ್ನು ನೀವುತ್ತಿದ್ದನು.

ಅಂದವಾದ ಉಡುಪನ್ನು ತೊಟ್ಟುಕೊಂಡಿರುವವರ ಮಧ್ಯೆ ಹೀಗೆ ವಿಲಕ್ಷಣವಾಗಿಯೂ ವಿಚಿತ್ರವಾದ ಉಡುಪನ್ನು ಹಾಕಿಕೊಂಡೂ ಇರುವ ವ್ಯಕ್ತಿಯಮೇಲೆ ಎಲ್ಲರ ದೃಷ್ಟಿಯೂ ಬೀಳದಿರುವುದಕ್ಕಾದೀತೆ?

ನಾನು ಆತನಿಗೆ "ನಿಮ್ಮ ವಿಚಾರ ಬಹಳವಾಗಿ ಕೇಳಿದ್ದೇನೆ. ನಿಮ್ಮ ಬರವಣಿಗೆಗಳಲ್ಲಿ ಕೆಲವನ್ನು ಓದಿಯೂ ಇದ್ದೇನೆ. ನೀವು ದಯೆಯಿಟ್ಟು ನಾನಿರುವೆಡೆಗೆ ಬಂದರೆ ನನಗೆ ಬಹಳ ಸಂತೋಷ." ಎಂದೆನು.

ನಾರಾಯಣ ಹೇಮಚಂದ್ರನ ಧ್ವನಿಯು ಸ್ವಲ್ಪ ಒಡಕು. ನಸುನಗುತ್ತಾ ಆತನು "ಆಗಲಿ. ನೀವಿರುವುದೆಲ್ಲಿ?" ಎಂದು ಕೇಳಿದನು.

"ಸ್ಟೋರ್ ಸ್ಟ್ರೀಟಿನಲ್ಲಿ."

ಹಾಗಾದರೆ ನಾವು ಹತ್ತಿರದಲ್ಲಿಯೇ ಇದ್ದೇವೆ. ನನಗೆ ಇಂಗ್ಲಿಷ್ ಕಲಿಯಬೇಕೆಂಬ ಅಭಿಲಾಷೆಯಿದೆ. ನೀವು ನನಗೆ ಹೇಳಿಕೊಡುತ್ತೀರಾ?"

"ನನ್ನ ಕೈಲಾದಷ್ಟನ್ನು ನಿಮಗೆ ಸಂತೋಷದಿಂದ ಹೇಳಿಕೊಡುತ್ತೇನೆ. ನನಗೆ ಸಾಧ್ಯವಾದಷ್ಟು ಪ್ರಯತ್ನಮಾಡುತ್ತೇನೆ. ಬೇಕಾದರೆ ನಾನು ನಿಮ್ಮ ಮನೆಗೆ ಬರುತ್ತೇನೆ."

"ಬೇಡಬೇಡಿ, ನಾನೇ ನಿಮ್ಮ ಮನೆಗೆ ಬರುತ್ತೇನೆ. ನನ್ನ ಜೊತೆಗೆ ಭಾಷಾಂತರದ ಅಭ್ಯಾಸದ ಪುಸ್ತಕವನ್ನು ತರುತ್ತೇನೆ."

ನಾವು ಒಬ್ಬರನ್ನೊಬ್ಬರು ನೋಡುವುದಕ್ಕೆ ಗೊತ್ತುಮಾಡಿಕೊಂಡೆವು. ಜಾಗ್ರತೆಯಾಗಿಯೇ ನಮ್ಮ ಗೆಳೆತನವು ಬೆಳೆಯಿತು.

ನಾರಾಯಣ ಹೇಮಚಂದ್ರನಿಗೆ ವ್ಯಾಕರಣದ ಗಂಧವೇ ಇರಲಿಲ್ಲ. ಅವನಿಗೆ 'ಕುದುರೆ' ಎನ್ನುವುದು ಕ್ರಿಯಾಪದ, 'ಓಡು' ಎನ್ನುವುದು ನಾಮಪದ. ಇಂತಹ ತಮಾಷೆಯ ವಿಷಯಗಳು ನನಗೆ ಇನ್ನೂ ಎಷ್ಟೋ ನೆನಪಿನಲ್ಲಿವೆ. ಆದರೆ ಆತನು ತನ್ನ ಅಜ್ಞಾನಕ್ಕೆ ಹೆದರುವ ಮನುಷ್ಯನಾಗಿರಲಿಲ್ಲ. ನನಗೆ ಬರುತ್ತಿದ್ದ ಅಲ್ಪಸ್ವಲ್ಪ ವ್ಯಾಕರಣವು ಅವನಿಗೆ ಏನೂ ತೋರುತ್ತಿರಲಿಲ್ಲ. ತನಗೆ ವ್ಯಾಕರಣಜ್ಞಾನವಿಲ್ಲವೆನ್ನುವುದು ನಾಚಿಕೆಯ ವಿಷಯವೆಂದು ಅವನು ಎಂದಿಗೂ ತಿಳಿದುಕೊಂಡಿರಲಿಲ್ಲ.

ಕೇವಲ ಸರಳಭಾವದಿಂದ ಅವನು "ನಾನು ನಿನ್ನ ಹಾಗೆ ಯಾವಾಗಲೂ ಶಾಲೆಗೆ ಹೋದವನಲ್ಲ. ನನ್ನ ಮನೋವಿಚಾರಗಳನ್ನು ತಿಳಿಸುವುದಕ್ಕೆ ನನಗೆ ವ್ಯಾಕರಣದ ಅವಶ್ಯಕತೆಯೇನೂ ತೋರಿಬಂದಿಲ್ಲ. ಒಳ್ಳೆಯದು, ನಿನಗೆ ಬಂಗಾಳಿ ಬರುತ್ತದೆಯೋ? ನನಗೆ ಬರುತ್ತದೆ. ನಾನು ಬಂಗಾಳದಲ್ಲಿ ಸಂಚಾರಮಾಡಿದ್ದೇನೆ. ಗುಜರಾತರಿಗೆ ಮಹರ್ಷಿ ದೇವೇಂದ್ರ

ನಾಥ ಠಾಕೂರರ ಬರವಣಿಗೆಗಳು ತಿಳಿಯುವ ಹಾಗೆ ಮಾಡಿರುವವನು ನಾನೇ. ಇನ್ನೂ ಅನೇಕ ಭಾಷೆಗಳ ಅಮೂಲ್ಯ ಗ್ರಂಥಗಳನ್ನು ಗುಜರಾತಿ ಭಾಷೆಗೆ ಅನುವಾದಿಸಬೇಕೆಂಬ ಅಭಿಲಾಷೆಯು ನನಗಿದೆ. ಕೇವಲ ಶಬ್ದಾರ್ಥಪ್ರಕಾರವಾಗಿ ನಾನು ಎಂದೂ ಭಾಷಾಂತರ ಮಾಡುವುದಿಲ್ಲವೆಂಬುದು ನಿನಗೆ ಗೊತ್ತಿದೆ. ಒಳಗಿನ ಹುರುಳನ್ನು ತಿಳಿಸಿದರೆ ನನಗೆ ಸಾಕು. ಹೆಚ್ಚಾದ ತಿಳುವಳಿಕೆಯುಳ್ಳ ಇತರರು ಇಂತಹ ಕೆಲಸವನ್ನು ಮುಂದೆ ಇನ್ನೂ ಚೆನ್ನಾಗಿ ಮಾಡಬಹುದಿದ್ದೀತು. ಆದರೆ ವ್ಯಾಕರಣದ ಸಹಾಯವಿಲ್ಲದೆ ನಾನು ಮಾಡಿರುವ ಕೆಲಸವಷ್ಟೇ ನನಗೆ ಸಾಕು. ನನಗೆ ಮರಾಠಿ, ಹಿಂದಿ, ಬಂಗಾಳಿ ಬರುತ್ತವೆ. ಈಗ ಇಂಗ್ಲಿಷ್ ಕಲಿಯಲು ಮೊದಲುಮಾಡಿದ್ದೇನೆ. ನನಗೆ ಬೇಕಾದುದು ಶಬ್ದಸಂಪತ್ತಿ. ನನ್ನ ಆಕಾಂಕ್ಷೆಯು ಇಷ್ಟಕ್ಕೇ ಮುಗಿಯಿತೆಂದು ತಿಳಿದುಕೊಂಡಿದ್ದೀಯೇನು? ಎಂದಿಗೂ ಇಲ್ಲ. ನಾನು ಫ್ರಾನ್ಸಿಗೆ ಹೋಗಿ ಫ್ರೆಂಚ್ ಭಾಷೆಯನ್ನು ಕಲಿತುಕೊಳ್ಳಬೇಕೆಂದಿದ್ದೇನೆ. ಆ ಭಾಷೆಯಲ್ಲಿ ಅಗಾಧವಾದ ಸಾಹಿತ್ಯವಿದೆಯೆಂದು ಕೇಳಿದ್ದೇನೆ. ಸಾಧ್ಯವಾದರೆ ಜರ್ಮನಿಗೂ ಹೋಗಿ ಅಲ್ಲಿ ಜರ್ಮನ್ ಭಾಷೆಯನ್ನು ಕಲಿತುಕೊಳ್ಳುತ್ತೇನೆ.'' ಎಂದು ಹೀಗೆಯೇ ಎಡೆಬಿಡದೆ ಮಾತನಾಡುತ್ತಿದ್ದನು. ಭಾಷೆಗಳನ್ನು ಕಲಿತುಕೊಳ್ಳಬೇಕೆಂದೂ ವಿದೇಶಗಳಲ್ಲಿ ತಿರುಗಬೇಕೆಂದೂ ಅವನಿಗೆ ಮೇರೆಯಿಲ್ಲದ ಮಹತ್ವಾಕಾಂಕ್ಷೆಯಿದ್ದಿತು.

''ಹಾಗಾದರೆ ನೀನು ಅಮೆರಿಕಾಗೂ ಹೋಗುತ್ತೀ?''

''ಹೋಗದೆ ಉಂಟೆ? ನವೀನ ಪ್ರಪಂಚವನ್ನು ನೋಡದೆ ಹಿಂದೂಸ್ಥಾನಕ್ಕೆ ಹಿಂದಿರುಗುವುದು ತಾನೆ ಹೇಗೆ?''

''ಆದರೆ ಇದಕ್ಕೆಲ್ಲಾ ದುಡ್ಡಿಗೇನು ಮಾಡುತ್ತೀ?''

''ನನಗೆ ದುಡ್ಡೇತಕ್ಕೆ ಬೇಕು? ನಾನು ನಿನ್ನ ಹಾಗೆ ಸೊಗಸುಗಾರನಲ್ಲ. ಎಷ್ಟು ಕಡಿಮೆ ಬೇಕೋ ಅಷ್ಟು ಆಹಾರ, ಬಟ್ಟೆ, ಇವು ಸಾಕು. ಅದಕ್ಕೆ ನನ್ನ ಪುಸ್ತಕಗಳಿಂದ ಬರುವ ಅಲ್ಪಸ್ವಲ್ಪ, ನನ್ನ ಸ್ನೇಹಿತರು ಕೊಡುವುದು, ಇಷ್ಟು ಸಾಕು. ನಾನು ಯಾವಾಗಲೂ ಮೂರನೆಯ ತರಗತಿಯಲ್ಲಿಯೇ ಪ್ರಯಾಣಮಾಡುತ್ತೇನೆ. ಅಮೆರಿಕಾಗೆ

ಹೋಗುವಾಗ ಕೂಡ ಡೆಕ್ಕಿನ ಮೇಲೆಯೇ (ಜಹಜಿನಲ್ಲಿ ಎಲ್ಲಕ್ಕಿಂತ ಕಡೆಯ ದರ್ಜೆ) ಹೋಗುತ್ತೇನೆ.

ನಾರಾಯಣ ಹೇಮಚಂದ್ರನಂತಹ ಸರಳತೆಯು ಇನ್ನಾರಲ್ಲಿಯೂ ಕಾಣಬರುತ್ತಿರಲಿಲ್ಲ. ಅವನ ನಿಷ್ಕಾಪಟ್ಯವೂ ಹಾಗೆಯೇ ಇದ್ದಿತು. ಬರವಣಿಗೆಯಲ್ಲಿ ತನಗಿದ್ದ ಶಕ್ತಿಯ ವಿಚಾರವಾಗಿ ಸ್ವಲ್ಪ ಹೆಮ್ಮೆಪಡುತ್ತಿದ್ದನೆನ್ನುವುದೇನೋ ನಿಜ. ಇದು ಹೊರತು ಅವನಲ್ಲಿ ಗರ್ವದ ಗುರುತು ಕೂಡ ಇರಲಿಲ್ಲ.

ನಾವು ನಿತ್ಯವೂ ಸೇರುತ್ತಿದ್ದೆವು. ನಮ್ಮ ಕಲ್ಪನೆಗಳಲ್ಲಿಯೂ ನಮ್ಮ ಕಾರ್ಯಗಳಲ್ಲಿಯೂ ನಾವಿಬ್ಬರೂ ಎಷ್ಟೋ ಬಗೆಯಲ್ಲಿ ಒಂದೇ ರೀತಿಯವರಾಗಿದ್ದೆವು. ನಾವಿಬ್ಬರೂ ಶಾಕಾಹಾರಿಗಳಾಗಿದ್ದೆವು. ಜೊತೆಗೇ ಅನೇಕಸಾರಿ ತಿಂಡಿಯನ್ನು ತಿನ್ನುತ್ತಿದ್ದೆವು. ಇದು ನಾನು ಸ್ವಂತವಾಗಿ ಅಡಿಗೆಯನ್ನು ಮಾಡಿಕೊಂಡು ವಾರಕ್ಕೆ ಹದಿನೇಳು ಷಿಲಿಂಗಿನ ಮೇಲೆ ಜೀವನ ನಡೆಸುತ್ತಿದ್ದ ಕಾಲದಲ್ಲಿ. ಕೆಲವು ಸಮಯದಲ್ಲಿ ನಾನು ಅವನ ಕೊಠಡಿಗೆ ಹೋಗುತ್ತಿದ್ದೆನು. ಕೆಲವು ಸಲ ಅವನು ನನ್ನ ಕೊಠಡಿಗೆ ಬರುತ್ತಿದ್ದನು ನಾನು ಆಂಗ್ಲೇಯರ ರೀತಿಯಲ್ಲಿ ಅಡಿಗೆ ಮಾಡುತ್ತಿದ್ದೆನು. ನಮ್ಮ ದೇಶದ ರೀತಿಯಲ್ಲಿ ಅಡಿಗೆಮಾಡಿದ ಹೊರತು ಅವನಿಗೆ ತೃಪ್ತಿಯಾಗುತ್ತಿರಲಿಲ್ಲ. ಬೇಳೆಯಿಲ್ಲದೆ ಅವನಿಗೆ ಇರುವುದಕ್ಕೇ ಆಗುತ್ತಿರಲಿಲ್ಲ. ನಾನು ಯಾವಾಗಲಾದರೂ ಗಾಜಿನ ಗಡ್ಡೆ ಮುಂತಾದುದರ ಹುಳಿಯನ್ನು ಮಾಡುತ್ತಿದ್ದೆನು. ಆಗ ಅವನು "ಅಯ್ಯೋ ನಿನ್ನ ರುಚಿಯೇ!" ಎನ್ನುತ್ತಿದ್ದನು. ಅವನು ಒಂದು ಸಲ ಎಲ್ಲಿಂದಲೋ ಹೆಸರುಬೇಳೆಯನ್ನು ಸಂಪಾದಿಸಿ ಅಡಿಗೆಮಾಡಿ ನನ್ನ ಬಳಿಗೆ ತೆಗೆದುಕೊಂಡು ಬಂದನು. ನನಗೆ ಅದನ್ನು ಊಟಮಾಡಿ ಸಂತೋಷವಾಯಿತು. ಇದು ಮೊದಲುಗೊಂಡು ಅದಲುಬದಲಿಗೆ ಪ್ರಾರಂಭವಾಯಿತು: ನಾನು ಮಾಡಿದ ರುಚಿಯಾದ ಪದಾರ್ಥವನ್ನು ಅವನಿಗೆ ತೆಗೆದುಕೊಂಡುಹೋಗಿ ಕೊಡುತ್ತಿದ್ದೆನು. ತಾನು ಮಾಡಿದುದನ್ನು ಅವನು ನನಗೆ ತಂದುಕೊಡುತ್ತಿದ್ದನು.

ಈ ಸಮಯದಲ್ಲಿ ಕಾರ್ಡಿನಲ್ ವ್ಯಾನಿಂಗರ ಹೆಸರು ಎಲ್ಲರ ಬಾಯಲ್ಲಿಯೂ ಇದ್ದಿತು. ಜಾನ್ ಬರ್ನ್ಸ್ ಮತ್ತು ಕಾರ್ಡಿನಲ್ ವ್ಯಾನಿಂಗ್ ಇವರುಗಳ ಪ್ರಯತ್ನದಿಂದ ಬಂದರಿನ ಕೂಲಿಗಾರರ ಮುಷ್ಕರವು ಜಾಗ್ರತೆಯಾಗಿ ಕೊನೆಗಂಡಿದ್ದಿತು. ನಾನು ನಾರಾಯಣ ಹೇಮಚಂದ್ರನಿಗೆ ಡಿಸ್ರೇಲಿಯವರು (ಇವರು ವಿಲಾಯತಿಯಲ್ಲಿ ಪ್ರಧಾನ ಮಂತ್ರಿಯಾಗಿದ್ದರು) ಕಾರ್ಡಿನಲ್ ವ್ಯಾನಿಂಗರ ಸರಳತೆಯನ್ನು ಹೊಗಳಿದುದನ್ನು ತಿಳಿಸಿದೆನು. ಅದಕ್ಕೆ ಅವನು "ಹಾಗಾದರೆ ನಾನು ಆ ಮಹಾತ್ಮರನ್ನು ನೋಡಬೇಕು." ಎಂದನು.

"ಅವರು ದೊಡ್ಡ ಮನುಷ್ಯರು. ಅವರನ್ನು ನೀನು ನೋಡುವುದು ತಾನೆ ಹೇಗೆ?"

"ಅದೇಕೆ? ನನಗೆಲ್ಲಾ ಗೊತ್ತು. ನನ್ನ ಹೆಸರಿನಲ್ಲಿ ನಿನ್ನ ಕೈಯಲ್ಲಿ ಅವರಿಗೆ ಕಾಗದವನ್ನು ಬರೆಯಿಸಬೇಕು. ನಾನು ಗ್ರಂಥಕರ್ತನೆಂದೂ ಅವರು ಜನರ ನೆಮ್ಮದಿಗಾಗಿ ಮಾಡಿರುವ ಕೆಲಸಕ್ಕಾಗಿ ಅವರಲ್ಲಿ ನನಗಿರುವ ಗೌರವವನ್ನು ಮುಖತಃ ಸೂಚಿಸಲು ಆಸಿಸುತ್ತೇನೆಂದೂ ಅವರಿಗೆ ತಿಳಿಸು. ನನಗೆ ಇಂಗ್ಲಿಷ್ ತಿಳಿಯದಿರುವುದರಿಂದ ನಾನು ನಿನ್ನನ್ನು ದ್ವಿಭಾಷಿಯಾಗಿ ಕರೆದುಕೊಂಡು ಹೋಗಬೇಕಾಗಿರುವುದೆಂದೂ ಬರೆ."

ನಾನು ಅವರಿಗೆ ಈ ರೀತಿಯಾಗಿ ಒಂದು ಕಾಗದವನ್ನು ಬರೆದೆನು. ಎರಡು ಮೂರು ದಿವಸಗಳಲ್ಲಿಯೇ ನಾವು ಅವರನ್ನು ಇಂತಹ ಕಾಲದಲ್ಲಿ ನೋಡಬೇಕೆಂದು ಅವರಿಂದ ಪತ್ರ ಬಂದಿತು. ನಾವಿಬ್ಬರೂ ಅವರನ್ನು ನೋಡುವುದಕ್ಕೆ ಹೊರಟೆವು. ನಾನು ಇತರರನ್ನು ನೋಡುವುದಕ್ಕೆ ಹೋಗುವಾಗ ಹಾಕಿಕೊಳ್ಳುವ ಪೋಷಾಕನ್ನು ಹಾಕಿಕೊಂಡಿದ್ದೆನು. ನಾರಾಯಣ ಹೇಮಚಂದ್ರನಾದರೋ ಯಥಾಪ್ರಕಾರ ಇದ್ದನು— ಅದೇ ಅಂಗಿ, ಅದೇ ಷರಾಯಿ. ನಾನು ಇದಕ್ಕಾಗಿ ಅವನನ್ನು ಹಾಸ್ಯ ಮಾಡಲು ಹೊರಟೆನು. ಆದರೆ ಅವನು ನನ್ನನ್ನೇ ಹಾಸ್ಯಕ್ಕೆ ಗುರಿ ಮಾಡಿ

"ನೀವು ನಾಗರಿಕರೆಲ್ಲ ಹೇಡಿಗಳು. ಮಹಾತ್ಮರು ಮನುಷ್ಯರ ಉಡುಪನ್ನು ನೋಡಿ ಅವರ ಯೋಗ್ಯತೆಯನ್ನು ಅಳೆಯುವುದಿಲ್ಲ. ಅವರ ದೃಷ್ಟಿಯು ಮನುಷ್ಯರ ಹೃದಯದಮೇಲೆ ಇರುತ್ತದೆ." ಎಂದನು.

ನಾವು ಕುಳಿತುಕೊಂಡೊಡನೆಯೇ ತೆಳುವಾಗಿಯೂ ಉದ್ದವಾಗಿಯೂ ಇರುವ ಒಬ್ಬ ಮುದುಕರು ಬಂದು ನಮಗೆ ಹಸ್ತಲಾಘವವನ್ನು ಕೊಟ್ಟರು. ನಾರಾಯಣ ಹೇಮಚಂದ್ರನು ಅವರನ್ನು ಈ ರೀತಿಯಾಗಿ ಸಂಬೋಧಿಸಿದನು :—

"ನನಗೆ ನಿಮ್ಮ ಕಾಲವನ್ನು ಕಳೆಯಬೇಕೆಂಬ ಇಷ್ಟವಿಲ್ಲ. ನಿಮ್ಮ ವಿಚಾರವಾಗಿ ನಾನು ಬಹಳವಾಗಿ ಕೇಳಿದ್ದೇನೆ. ನಿಮ್ಮನ್ನು ಬಂದು ನೋಡಿ ನೀವು ಮುಷ್ಕರ ಹಿಡಿದ ಕೂಲಿಗಾರರ ಪರವಾಗಿ ಮಾಡಿದ ಒಳ್ಳೆಯ ಕೆಲಸದಿಂದ ನಮ್ಮೆಲ್ಲರಿಗೂ ಉಂಟಾದ ಸಂತೋಷವನ್ನು ನಿಮಗೆ ತಿಳಿಸಬೇಕೆಂದು ತೋರಿತು. ಲೋಕದಲ್ಲಿ ಮಹಾತ್ಮರನ್ನು ಹೋಗಿ ನೋಡುವುದು ನನ್ನ ಪದ್ಧತಿ. ಆದುದರಿಂದಲೇ ನಾನು ನಿಮಗೆ ಈ ತೊಂದರೆಯನ್ನು ಕೊಟ್ಟಿರುವುದು."

ಇದು ಆತನು ಗುಜರಾತಿಯಲ್ಲಿ ಹೇಳಿದುದಕ್ಕೆ ನಾನು ಮಾಡಿದ ಭಾಷಾಂತರವೆಂದು ಹೇಳಬೇಕಾದುದಿಲ್ಲ.

"ನೀವು ಬಂದಿರುವುದು ನನಗೆ ಸಂತೋಷ ಲಂಡನಿನಲ್ಲಿರುವುದು ನಿಮಗೆ ಸರಿಹೋಗುವುದೆಂದೂ ಇಲ್ಲಿನ ಜನರ ಪರಿಚಯವನ್ನು ನೀವು ಮಾಡಿಕೊಳ್ಳುತ್ತೀರೆಂದೂ ಆಶಿಸುತ್ತೇನೆ. ದೇವರು ನಿಮಗೆ ಶುಭವನ್ನುಂಟುಮಾಡಲಿ." ಎಂದು ಹೇಳಿ ಕಾರ್ಡಿನಲರು ಎದ್ದು ನಿಂತು ನಮ್ಮನ್ನು ಬೀಳ್ಕೊಟ್ಟರು.

ಒಂದು ಸಲ ನಾರಾಯಣ ಹೇಮಚಂದ್ರನು ಕೇವಲ ಒಂದು ಪಂಚೆಯನ್ನುಟ್ಟುಕೊಂಡು ಒಂದು ಷರಟನ್ನು ಹಾಕಿಕೊಂಡು ನಾನಿದ್ದ ಬಳಿಗೆ ಬಂದನು. ಮನೆಯ ಯಜಮಾನಿಯು ಬಾಗಿಲನ್ನು ತೆಗೆದು ಹೆದರಿಕೆಯಿಂದ ನನ್ನ ಬಳಿಗೆ ಓಡಿಬಂದು (ಈಕೆಯು ಹೊಸಬಳಾಗಿದ್ದುದರಿಂದ ಈಕೆಗೆ ನಾರಾಯಣ ಹೇಮಚಂದ್ರನ ಗುರುತಿರಲಿಲ್ಲ) "ಯಾರೋ ಒಬ್ಬ ಹುಚ್ಚನು ನಿಮ್ಮನ್ನು ನೋಡಲು ಬಂದಿದ್ದಾನೆ." ಎಂದಳು.

ನಾನು ಬಾಗಿಲಬಳಿಗೆ ಹೋಗಲು ನಾರಾಯಣ ಹೇಮಚಂದ್ರನನ್ನು ಕಂಡು ಆಶ್ಚರ್ಯಪಟ್ಟೆನು. ಅವನ ಉಡುಪನ್ನು ನೋಡಿ ನನಗೆ ಏನೂ ತೋಚದೆ ಹೋಯಿತು. ಅವನ ಮುಖದ ಮೇಲಾದರೋ ಅಲ್ಲಿ ಸಾಮಾನ್ಯವಾಗಿ ಕಾಣಬರುತ್ತಿದ್ದ ಮುಗುಳುನಗೆಯು ಹೊರತು ಇನ್ನೇನೂ ಇರಲಿಲ್ಲ.

"ಬೀದಿಯಲ್ಲಿ ಹುಡುಗರು ನಿನ್ನ ಸುತ್ತಲೂ ಮುತ್ತಿಕೊಂಡು ತಂಟೆ ಮಾಡಲಿಲ್ಲವೆ ?"

"ಅವರೇನೋ ನನ್ನ ಹಿಂದೆ ಓಡಿದರು. ಆದರೆ ನಾನು ಅವರನ್ನು ಗಣಿಸಲಿಲ್ಲವಾದುದರಿಂದ ಅವರು ಸುಮ್ಮನಾದರು."

ಕೆಲವು ತಿಂಗಳು ಲಂಡನಿನಲ್ಲಿದ್ದ ಮೇಲೆ ನಾರಾಯಣ ಹೇಮಚಂದ್ರನು ಪ್ಯಾರಿಸಿಗೆ ಹೋದನು. ಅಲ್ಲಿ ಫ್ರೆಂಚನ್ನು ಕಲಿತುಕೊಳ್ಳುವುದಕ್ಕೂ ಫ್ರೆಂಚ್ ಪುಸ್ತಕಗಳನ್ನು ಭಾಷಾಂತರ ಮಾಡುವುದಕ್ಕೂ ಮೊದಲು ಮಾಡಿದನು. ಅವನ ಅನುವಾದವನ್ನು ತಿದ್ದುವಷ್ಟುಮಟ್ಟಿಗೆ ಫ್ರೆಂಚ್ ಭಾಷೆಯು ನನಗೆ ಬರುತ್ತಿದ್ದುದರಿಂದ ಅದನ್ನು ನನಗೆ ಓದುವುದಕ್ಕೆ ಕೊಟ್ಟನು. ಅದು ಭಾಷಾಂತರವಾಗಿರಲಿಲ್ಲ, ಸಾರಾಂಶವಾಗಿದ್ದಿತು.

ಕಡೆಗೆ ಅಮೆರಿಕಾಗೆ ಹೋಗಬೇಕೆಂಬ ತನ್ನ ನಿಶ್ಚಯವನ್ನು ಅವನು ಪೂರಯಿಸಿಕೊಂಡನು. ಕೆಳಗಿನ ದರ್ಜೆಯ ಟಿಕೆಟನ್ನು ಪಡೆಯಲು ಅವನಿಗೆ ಬಹು ಪ್ರಯಾಸವಾಯಿತು. ಸಂಯುಕ್ತ ಸಂಸ್ಥಾನದಲ್ಲಿರುವಾಗ ಅವನು ಒಂದು ಪಂಚೆ ಮತ್ತು ಒಂದು ಷರಟನ್ನು ಹಾಕಿಕೊಂಡು ಹೊರಗೆ ಹೊರಟುದರಿಂದ 'ಅಸಭ್ಯವಾದ ಉಡುಪನ್ನು ಹಾಕಿಕೊಂಡಿದ್ದುದಕ್ಕಾಗಿ' ಅವನಮೇಲೆ ಕಟ್ಟಳೆ ನಡೆಸಿದರು. ಆಮೇಲೆ ಅವನನ್ನು ಬಿಟ್ಟುಬಿಟ್ಟರೆಂದು ನನಗೆ ನೆನಪಿದೆ.



# ೨೩

# ಮಹಾವಸ್ತುಪ್ರದರ್ಶನ

೧೮೯೦ನೆಯ ಇಸವಿಯಲ್ಲಿ ಪ್ಯಾರಿಸಿನಲ್ಲಿ ಒಂದು ಭಾರಿ ವಸ್ತು ಪ್ರದರ್ಶನವು ನಡೆಯಿತು. ಇದನ್ನು ಸಿದ್ಧಪಡಿಸುವುದಕ್ಕಾಗಿ ಮಾಡಿದ ಅಗಾಧವಾದ ಏರ್ಪಾಡುಗಳ ವಿಚಾರವಾಗಿ ನಾನು ಓದಿದೆನು. ನನಗೆ ಪ್ಯಾರಿಸನ್ನು ನೋಡಬೇಕೆಂಬ ಪ್ರಬಲವಾದ ಇಚ್ಛೆಯೂ ಇದ್ದಿತು. ಆದುದರಿಂದ ಇವೆರಡನ್ನೂ ಒಟ್ಟಿಗೆ ಸೇರಿಸಿ ಅಲ್ಲಿಗೆ ಈಸಮಯದಲ್ಲಿ ಹೋಗುವುದು ಒಳ್ಳೆಯದೆಂದು ಯೋಚಿಸಿದೆನು. ಈ ಪ್ರದರ್ಶನಕ್ಕೆ ಜನರನ್ನು ಎಳೆಯುತ್ತಿದ್ದ ಒಂದು ಮುಖ್ಯವಾದ ವಸ್ತುವೇನೆಂದರೆ ಸುಮಾರು ಒಂದು ಸಾವಿರ ಅಡಿ ಎತ್ತರವಾಗಿ ಕಬ್ಬಿಣದಲ್ಲಿಯೇ ಕಟ್ಟಿದ್ದ ಈಫೆಲ್ ಗೋಪುರವೆಂಬುದು. ಜನರ ಮನಸ್ಸನ್ನು ಆಕರ್ಷಿಸುವ ಇನ್ನೂ ಅನೇಕ ವಿಷಯಗಳಿದ್ದುದೇನೋ ನಿಜ. ಆದರೆ ಇದೇ ಎಲ್ಲಕ್ಕಿಂತ ಮುಖ್ಯವಾದುದು. ಏಕೆಂದರೆ ಬಿದ್ದುಹೋಗುವ ಅಪಾಯವಿಲ್ಲದೆ ಇಷ್ಟು ಎತ್ತರಕ್ಕೆ ಕಟ್ಟಡವನ್ನು ಕಟ್ಟುವುದು ಸಾಧ್ಯವಲ್ಲವೆಂದು ಆಗಿನವರೆಗೂ ಜನರು ತಿಳಿದುಕೊಂಡಿದ್ದರು.

ಪ್ಯಾರಿಸಿನಲ್ಲಿದ್ದ ಒಂದು ಶಾಕಾಹಾರದ ಭೋಜನಶಾಲೆಯ ವಿಷಯವಾಗಿ ನಾನು ಕೇಳಿದ್ದೆನು. ಅಲ್ಲಿ ಒಂದು ಕೊಠಡಿಯನ್ನು ಗೊತ್ತು ಮಾಡಿ ಏಳು ದಿನಗಳಿದ್ದೆನು. ನಾನು ಎಲ್ಲವನ್ನೂ ಕಡಮೆ ಖರ್ಚಿನಲ್ಲಿಯೇ ಮುಗಿಸಿದೆನು—ಪ್ಯಾರಿಸಿಗೆ ಪ್ರಯಾಣವನ್ನೂ ಅಷ್ಟೆ, ಅಲ್ಲಿನ ನೋಟಪಾಟವನ್ನೂ ಅಷ್ಟೆ. ಈ ನೋಟಕ್ಕೆ ಪ್ಯಾರಿಸಿನ ಒಂದು ನಕ್ಷೆಯನ್ನೂ ವಸ್ತುಪ್ರದರ್ಶನದ ಕೈಪಿಡಿಯನ್ನೂ ಸಹಾಯವಾಗಿಟ್ಟುಕೊಂಡು ಬಹುತರವಾಗಿ ಕಾಲುನಡೆಯಲ್ಲಿಯೇ ಹೋಗುತ್ತಿದ್ದೆನು. ದೊಡ್ಡ

ಬೀದಿಗಳಿಗೂ ಮುಖ್ಯವಾಗಿ ನೋಡತಕ್ಕ ಸ್ಥಳಗಳಿಗೂ ದಾರಿ ತೋರಿಸುವುದಕ್ಕೆ ಬೇಕಾದಷ್ಟು ಮಂದಿ ಇರುತ್ತಿದ್ದರು.

ವಸ್ತುಪ್ರದರ್ಶನದ ಮಹಾಪರಿಮಾಣ ಮತ್ತು ಅಲ್ಲಿನ ವಸ್ತುವೈವಿಧ್ಯ, ಇವುಗಳನ್ನು ಬಿಟ್ಟು ಅದರ ವಿಚಾರವಾಗಿ ನನಗೆ ಇನ್ನೇನೂ ನೆನಪಿಲ್ಲ. ನಾನು ಈಫೆಲ್ ಗೋಪುರವನ್ನು ಎರಡು ಮೂರುಸಲ ಹತ್ತಿದುದರಿಂದ ಅದರ ಜ್ಞಾಪಕವು ಚೆನ್ನಾಗಿ ಮೊದಲನೆಯ ಅಂತಸ್ತಿನಲ್ಲಿ ಒಂದು ವಿಶ್ರಾಂತಿಗೃಹವಿದ್ದಿತು. ಬಹು ಎತ್ತರವಾದ ಸ್ಥಳದಲ್ಲಿ ಫಲಾಹಾರವನ್ನು ತಿಂದೆನೆಂದು ಕೊಚ್ಚಿಕೊಂಡು ತೃಪ್ತಿಪಡುವುದಕ್ಕೋಸ್ಕರ ನಾನು ಅಲ್ಲಿ ಏಳು ಶಿಲಿಂಗುಗಳನ್ನು ಚೆಲ್ಲಿದೆನು.

ಪ್ಯಾರಿಸಿನ ಪ್ರಾಚೀನವಾದ ಕ್ರೈಸ್ತ ದೇವಾಲಯ (ಚರ್ಚ್)ಗಳು ಇನ್ನೂ ನನ್ನ ನೆನಪಿನಲ್ಲಿವೆ. ಅವುಗಳ ವೈಭವವೂ ಅವುಗಳಲ್ಲಿ ನೆಲೆಸಿರುವ ಶಾಂತಿಯೂ ಎಂದಿಗೂ ಮರೆಯದಂತಿವೆ. 'ನಾಟ್ರ ಡೇಮ್' ಚರ್ಚಿನ ವಿಸ್ಮಯಕರವಾದ ಶಿಲ್ಪಚಾತುರ್ಯವೂ ಒಳಗೆ ಅಲಂಕಾರಕ್ಕಾಗಿ ಮಾಡಿರುವ ಸೂಕ್ಷ್ಮವಾದ ಕೆತ್ತನೆಯ ಕೆಲಸವೂ ಎಂದಿಗೂ ನೆನಪಿನಲ್ಲಿ ನಿಲ್ಲುತ್ತವೆ. ಇಂತಹ ಸ್ವರ್ಗೀಯ ದೇವಾಲಯಗಳನ್ನು ಕಟ್ಟುವುದರಲ್ಲಿ ಲಕ್ಷಾಂತರ ದ್ರವ್ಯವನ್ನು ವೆಚ್ಚಮಾಡಿದವರ ಹೃದಯದಲ್ಲಿ ದೈವಭಕ್ತಿಯಿಲ್ಲದೆ ಇರಲು ಸಾಧ್ಯವಿಲ್ಲವೆಂದು ಆಗ ನನಗೆ ತೋರಿತು.

ನಾನು ಪ್ಯಾರಿಸಿನ ಬೆಡಗುಬಿಂಕಗಳ ವಿಚಾರವಾಗಿ ಎಷ್ಟೋಸಲ ಓದಿದ್ದೆನು. ಇವು ಪ್ರತಿಯೊಂದು ಬೀದಿಯಲ್ಲಿಯೂ ಕಾಣಬರುತ್ತಿದ್ದವು. ಆದರೆ ಚರ್ಚುಗಳಿಗೆ ಇವುಗಳ ಸೋಂಕಿಲ್ಲವೆಂದು ಚೆನ್ನಾಗಿ ಗೊತ್ತಾಗುತ್ತಿದ್ದಿತು. ಯಾರಾದರೂ ಇವುಗಳಲ್ಲಿ ಒಂದನ್ನು ಒಳಹೊಕ್ಕೊಡನೆಯೇ ಹೊರಗಿನ ಗಡಿಬಿಡಿಯೂ ಗಲಾಟೆಯೂ ಮರೆತು ಹೋಗುತ್ತಿದ್ದಿತು. ಅವನು 'ಪವಿತ್ರಕನ್ಯೆ' (ಯೇಸುವಿನ ತಾಯಿ)ಯ ವಿಗ್ರಹದ ಮುಂದೆ ಯಾರಾದರೂ ಬಾಗಿರುವುದನ್ನು ಕಂಡರೆ ಅವನ ರೀತಿಯು ಬದಲಾಯಿಸಿ ಅವನು ಪೂಜ್ಯಭಾವದಿಂದಲೂ ಘನತೆಯಿಂದಲೂ ವರ್ತಿಸುತ್ತಿದ್ದನು. ಹೀಗೆ ನಮಸ್ಕಾರ ಮಾಡುವುದೂ ಪ್ರಾರ್ಥಿಸುವುದೂ ಕೇವಲ ಮೂಢಭಕ್ತಿಯಲ್ಲವೆಂದು ಆಗ ನನ್ನ ಮನಸ್ಸಿನಲ್ಲಿ ಹುಟ್ಟಿದ

ಭಾವವು ಬೆಳೆಯುತ್ತಾಬಂದಿದೆ. ಪವಿತ್ರ ಕನ್ಯೆಯ ವಿಗ್ರಹದ ಮುಂದೆ ಬಾಗಿದ್ದ ಭಕ್ತಿಶೀಲರು ಕೇವಲ ಅಮೃತಶಿಲೆಯನ್ನು ಪೂಜೆಮಾಡುತ್ತಿದ್ದರೆ? ಅವರ ಆತ್ಮವು ನೈಜವಾದ ಭಕ್ತಿಯಿಂದ ತುಂಬಿದ್ದಿತು. ಅವರು ಪೂಜಿಸುತ್ತಿದ್ದುದು ಶಿಲೆಯನ್ನಲ್ಲ—ಅದರಲ್ಲಿ ರೂಪುಗೊಂಡಿದ್ದ ದೇವರನ್ನು. ಹೀಗೆ ಪೂಜೆಮಾಡುವುದರಿಂದ ಅವರು ದೇವರ ಮಹಿಮೆಯನ್ನು ಹೆಚ್ಚಿಸುತ್ತಿದ್ದರೇ ವಿನಾ ಅದಕ್ಕೆ ಕುಂದು ತರುತ್ತಿರಲಿಲ್ಲವೆಂದು ನನಗೆ ತೋರಿತೆಂಬದಾಗಿ ನೆನಪಿದೆ.

ನಾನು ಈಫೆಲ್ ಗೋಪುರದ ವಿಷಯವಾಗಿ ಒಂದೆರಡು ಮಾತನ್ನು ಹೇಳಬೇಕು. ಅದನ್ನು ಈಗ ಹೇಗೆ ಉಪಯೋಗಿಸುತ್ತಿರುವರೋ ನನಗೆ ತಿಳಿಯದು. ಆದರೆ ಆಗ ಅದನ್ನು ಅನೇಕರು ಬಹಳವಾಗಿ ಹೊಗಳುವುದನ್ನೂ ಇತರರು ಬಹಳವಾಗಿ ತಿರಸ್ಕಾರ ಮಾಡುವುದನ್ನೂ ಕೇಳಿದ್ದೆನು. ಅದನ್ನು ತಿರಸ್ಕರಿಸಿದವರಲ್ಲಿ ಟಾಲ್‌ಸ್ಟಾಯ್‌ರವರು ಮುಖ್ಯರಾಗಿದ್ದರೆಂದು ನನಗೆ ಜ್ಞಾಪಕವಿದೆ. ಅವರು ಈಫೆಲ್ ಗೋಪುರವು ಮನುಷ್ಯನ ತಿಳಿಗೇಡಿತನದ ಹೆಗ್ಗುರುತೇ ಹೊರತು ಅವನ ವಿವೇಕದ ಚಿಹ್ನೆಯಲ್ಲವೆಂದು ಹೇಳಿದರು. "ಹೊಗೆಯಸೊಪ್ಪು ಅಮಲು ಪದಾರ್ಥಗಳಲ್ಲೆಲ್ಲಾ ಅತಿ ಕೇಡಾದುದು. ಏಕೆಂದರೆ ಅದಕ್ಕೆ ಗುಲಾಮನಾದವನು ಕುಡುಕನು ಮಾಡುವುದಕ್ಕೆ ಎಂದಿಗೂ ಧೈರ್ಯಪಡದಂತಹ ದುರ್ವ್ಯಾಪಾರಗಳನ್ನು ಮಾಡಲು ಪ್ರೇರಿತನಾಗುತ್ತಾನೆ. ಮದ್ಯವು ಮನುಷ್ಯನಿಗೆ ಹುಚ್ಚು ಹಿಡಿಸುತ್ತದೆ. ಆದರೆ ಹೊಗೆಯಸೊಪ್ಪು ಅವನ ಬುದ್ಧಿಯನ್ನು ಮಂಕು ಮಾಡಿ ಅವನು ಮುಗಿಲುಮಾಡಗಳನ್ನು ಕಟ್ಟುವಂತೆ ಪ್ರೇರಿಸುತ್ತದೆ. ಈಫೆಲ್ ಗೋಪುರವು ಇಂತಹ ಪ್ರೇರಣೆಗನುಸಾರವಾಗಿ ಮನುಷ್ಯನು ನಿರ್ಮಾಣಮಾಡಿದ ವಸ್ತುಗಳಲ್ಲೊಂದು." ಎಂದು ವಾದಿಸಿದರು. ಈ ಗೋಪುರದಲ್ಲಿ ಕಲಾಕೌಶಲ್ಯವೇನೂ ಇಲ್ಲ. ಈ ವಸ್ತುಪ್ರದರ್ಶನದ ನಿಜವಾದ ಸೌಂದರ್ಯವು ಇದರಿಂದ ಯಾವ ವಿಧದಲ್ಲಿಯೂ ಹೆಚ್ಚಿತೆಂದು ಹೇಳಲಾಗುವುದಿಲ್ಲ. ಇದು ಅಪರೂಪವಾದ ಮತ್ತು ಅಸಾಧಾರಣ ಪರಿಮಾಣವುಳ್ಳ ವಸ್ತುವಾಗಿದೆಯೆಂದು ಜನರು ಗುಂಪುಗೂಡಿ ಇದನ್ನು

ನೋಡುವುದಕ್ಕೂ ಹತ್ತುವುದಕ್ಕೂ ಬರುತ್ತಿದ್ದರು. ಇದು ವಸ್ತು ಪ್ರದರ್ಶನದ ಆಟದೊಡವೆಯಾಗಿದ್ದಿತು. ನಮ್ಮಲ್ಲಿ ಹುಡುಗತನವಿರುವ ವರೆಗೂ ಆಟದ ಸಾಮಾನುಗಳು ನಮ್ಮನ್ನು ಆಕರ್ಷಿಸುತ್ತವೆ. ಬೆಡಗಿನ ಒಡವೆಗಳು ನಮ್ಮನ್ನು ಸೆಳೆಯುವ ವಿಷಯದಲ್ಲಿ ನಾವೆಲ್ಲರೂ ಹುಡುಗರೇ ಎನ್ನುವುದಕ್ಕೆ ಈ ಗೋಪುರವು ಒಳ್ಳೆಯ ದೃಷ್ಟಾಂತವಾಗಿದ್ದಿತು. ಇದೇ ಈಫೆಲ್ ಗೋಪುರವು ಪೂರೈಸಿದ ಉದ್ದೇಶವೆಂದು ಹೇಳಬಹುದು.



## ೨೪

# ಬ್ಯಾರಿಸ್ಟರ್ ಆದಮೇಲೆ?

ನಾನು ಸೀಮೆಗೆ ಹೋದ ಉದ್ದೇಶವು—ಬ್ಯಾರಿಸ್ಟರಾಗುವದು—ಏನಾಯಿತು ಎಂಬ ವಿಚಾರವಾಗಿ ನಾನು ಇದುವರೆಗೂ ಏನನ್ನೂ ಹೇಳಿಲ್ಲ. ಆದರೆ ಈಗ ಇದರ ಸಂಬಂಧವಾಗಿ ಕೆಲವು ಮಾತುಗಳನ್ನು ಹೇಳುವ ಸಮಯವೊದಗಿದೆ.

ಬ್ಯಾರಿಸ್ಟರಾಗುವುದಕ್ಕೆ ಎರಡು ಷರತ್ತುಗಳನ್ನು ಪೂರೈಸಬೇಕಾಗಿದ್ದಿತು—'ಟರ್ಮ್'ಗಳನ್ನು ಮುಗಿಸುವುದು ಮತ್ತು ಪರೀಕ್ಷೆಗಳಲ್ಲಿ ತೇರ್ಗಡೆಯಾಗುವುದು. ವರ್ಷಕ್ಕೆ ೪ 'ಟರ್ಮ್' ಗಳಿರುತ್ತಿದ್ದುವು. ಇಂತಹ ೧೨ 'ಟರ್ಮ್' ಗಳನ್ನು (ಅಂದರೆ ೩ ವರ್ಷವನ್ನು) ಕಳೆಯಬೇಕಾಗಿದ್ದಿತು. 'ಟರ್ಮ್' ಕಳೆಯುವುದು ಎಂದರೆ ಭೋಜನಗಳಿಗೆ ಹೋಗುವುದು. ಪ್ರತಿಯೊಂದು 'ಟರ್ಮ್' ನಲ್ಲಿಯೂ ೨೪ ಭೋಜನಗಳು ನಡೆಯುತ್ತಿದ್ದುವು. ಇವುಗಳಲ್ಲಿ ಆರರಲ್ಲಾದರೂ ಅವಶ್ಯಕವಾಗಿ ಹಾಜರಿರಬೇಕಾಗಿದ್ದಿತು. ಭೋಜನಕ್ಕೆ ಹೋಗುವುದೆಂದರೆ ಅಲ್ಲಿ ಏನನ್ನಾದರೂ ತಿನ್ನಲೇಬೇಕೆಂದರ್ಥವಲ್ಲ; ಗೊತ್ತಾದ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಹೋಗಿ ಅದು ನಡೆಯುವವರೆಗೂ ಇದ್ದರಾಯಿತು. ಸಾಮಾನ್ಯವಾಗಿ ಪ್ರತಿಯೊಬ್ಬರೂ ಆಗ ಊಟಮಾಡುತ್ತಲೂ ಕುಡಿಯುತ್ತಲೂ ಇದ್ದರು. ಊಟವು ಚೆನ್ನಾಗಿರುತ್ತಿದ್ದಿತು; ಕುಡಿಯುವುದಕ್ಕೂ ಒಳ್ಳೆಯ ದರ್ಜೆಯ ಮದ್ಯವನ್ನೇ ಕೊಡುತ್ತಿದ್ದರು. ಇದಕ್ಕೆ ಎರಡೂವರೆಯಿಂದ ಮೂರೂವರೆ ಶಿಲಿಂಗಿನವರೆಗೆ (ಸುಮಾರು ೨ ರಿಂದ ೩ ರೂಪಾಯಿನವರೆಗೆ) ಖರ್ಚು ತಗಲುತ್ತಿದ್ದಿತು. ಈ ಬೆಲೆಯು ಅಲ್ಲಿ ಬಹಳ ಕಡಿಮೆಯೆಂದು ಎಣಿಸಲ್ಪಡುತ್ತಿದ್ದಿತು. ಏಕೆಂದರೆ ಯಾವದಾದರೊಂದು ಭೋಜನಾಲಯಕ್ಕೆ ಹೋದರೆ ಮದ್ಯಕ್ಕೇ ಅಷ್ಟು ಕ್ರಯ

ಬೀಳುತ್ತಿದ್ದಿತು. ಊಟಕ್ಕಿಂತ ಕುಡಿತಕ್ಕೇ ಖರ್ಚು ಹೆಚ್ಚಾಗುವುದು ಹಿಂದೂದೇಶದಲ್ಲಿದ್ದ ನಮಗೆ—'ನಾಗರಿಕ'ರಾಗದಿದ್ದ ಪಕ್ಷದಲ್ಲಿ—ಬಹಳ ಆಶ್ಚರ್ಯಕರವಾದುದೇ ಸರಿ. ವಿಲಾಯತಿಗೆ ಹೋದಮೇಲೆ ಮೊಟ್ಟ ಮೊದಲು ಇದನ್ನು ನೋಡಿ ನನಗೆ ಬಹಳ ಸಂಕಟವಾಯಿತು. ಮದ್ಯದ ಮೇಲೆ ಇಷ್ಟು ಹಣವನ್ನು ಸುರಿಯುವುದಕ್ಕೆ ಜನರಿಗೆ ಮನಸ್ಸು ಹೇಗೆ ಬರುತ್ತಿದ್ದಿತೋ ಎಂದು ನನಗೆ ಆಶ್ಚರ್ಯವಾಯಿತು. ಆಮೇಲೆ ಇದು ನನಗೆ ಅರ್ಥವಾಯಿತು. ಅನೇಕಸಲ ಇಂತಹ ಭೋಜನಗಳಲ್ಲಿ ನಾನು ಏನನ್ನೂ ತಿನ್ನುತ್ತಿರಲಿಲ್ಲ. ಏಕೆಂದರೆ ನನ್ನ ಉಪಯೋಗಕ್ಕೆ ಅಲ್ಲಿ ರೊಟ್ಟಿ, ಬೇಯಿಸಿದ ಆಲೂಗಡ್ಡೆ ಅಥವಾ ಕೋಸುಗಡ್ಡೆ, ಇವು ಮಾತ್ರ ಸಿಕ್ಕುತ್ತಿದ್ದುವು. ಮೊದಲು ಇವು ನನಗೆ ಸೇರುತ್ತಿರಲಿಲ್ಲ. ಆದರೆ ಆಮೇಲೆ ಇವುಗಳಲ್ಲಿ ರುಚಿಹುಟ್ಟಿದಮೇಲೆ ಇತರ ಪದಾರ್ಥಗಳನ್ನೂ ಕೇಳಿ ತರಿಸುವಷ್ಟು ಧೈರ್ಯಬಂದಿತು.

ವಿದ್ಯಾರ್ಥಿಗಳ ಆಹಾರಕ್ಕಿಂತ 'ಬೆಂಚರ್' (ವಿದ್ಯಾಮಂದಿರದ ಅಧ್ಯಾಪಕರು) ಗಳ ಆಹಾರವು ಇನ್ನೂ ಉತ್ತಮವಾಗಿರುತ್ತಿದ್ದಿತು. ನನ್ನ ಜೊತೆಗೆ ಒಬ್ಬ ಪಾರಸೀ ವಿದ್ಯಾರ್ಥಿಯಿದ್ದನು. ಆತನೂ ಶಾಕಾಹಾರಿಯಾಗಿದ್ದನು. ನಾವಿಬ್ಬರೂ ಸೇರಿ ಬೆಂಚರುಗಳ ಆಹಾರಸಾಮಗ್ರಿಗಳಿಂದ ಶಾಕಾಹಾರಿಗಳ ಉಪಯೋಗಕ್ಕೂ ಪದಾರ್ಥಗಳನ್ನು ಕೊಡಬೇಕೆಂದು ಪ್ರಾರ್ಥಿಸಿದೆವು. ಈ ಪ್ರಾರ್ಥನೆಯು ಸಫಲವಾಯಿತು. ನಮಗೆ ಬೆಂಚರುಗಳ ಮೇಜಿನಿಂದ ತರಕಾರಿಗಳನ್ನೂ ಹಣ್ಣುಹಂಪಲುಗಳನ್ನೂ ಕೊಡುತ್ತಿದ್ದರು.

ಮದ್ಯವನ್ನಂತೂ ನಾನು ಮುಟ್ಟುತ್ತಲೇ ಇರಲಿಲ್ಲ. ನಾಲ್ಕು ನಾಲ್ಕು ಜನ ವಿದ್ಯಾರ್ಥಿಗಳಿಗೆ ಎರಡೆರಡು ಸೀಸೆ ಮದ್ಯವನ್ನು ಕೊಡುತ್ತಿದ್ದರು. ಇಂತಹ ಗುಂಪಿಗೆ ನನ್ನನ್ನು ಸೇರಿಸಿಕೊಳ್ಳಲು ಸದಾ ಪ್ರಯತ್ನಪಡುತ್ತಿದ್ದರು. ಏಕೆಂದರೆ ನಾನು ಮದ್ಯವನ್ನು ಸೇವಿಸುತ್ತಿರಲಿಲ್ಲವಾದುದರಿಂದ ಎರಡು ಸೀಸೆಗಳ ಮದ್ಯವೂ ಮೂರು ಜನಕ್ಕೇ ಸಿಕ್ಕುತ್ತಿದ್ದಿತು. ಪ್ರತಿಯೊಂದು ಟರ್ಮಿನಲ್ಲಿಯೂ ಒಂದು ರಾತ್ರಿ ದೊಡ್ಡ ಹಬ್ಬವಾಗುತ್ತಿದ್ದಿತು. ಆಗ ಪೋರ್ಟ್, ಷೆರ್ರಿ, ಇವೇ ಅಲ್ಲದೆ ಷಾಂಪೇನ್

ಮೊದಲಾದ ಹೆಚ್ಚಿನ ಮದ್ಯವನ್ನೂ ಕೊಡುತ್ತಿದ್ದರು. ಆದುದರಿಂದ ಆ ರಾತ್ರಿಯ ಹಬ್ಬಕ್ಕೆ ಬರಬೇಕೆಂದು ನನ್ನನ್ನು ವಿಶೇಷತಃ ಕೋರುತ್ತಿದ್ದರು. ಅಂದು ನನ್ನ ಸಹವಾಸದ ಬಯಕೆಯು ಏರುತ್ತಿದ್ದಿತು.

ಈ ಊಟತಿಂಡಿಗಳಿಂದ ವಕೀಲನಾಗುವ ಯೋಗ್ಯತೆಯನ್ನು ಸಂಪಾದಿಸಲು ಹೇಗೆ ವಿದ್ಯಾರ್ಥಿಗಳಿಗೆ ಸಹಾಯವಾಗುತ್ತಿದ್ದಿತೋ ನನಗೆ ತಿಳಿಯುತ್ತಿರಲಿಲ್ಲ; ಈಗಲೂ ತಿಳಿದಿಲ್ಲ. ಹಿಂದೆ ಒಂದು ಕಾಲದಲ್ಲಿ ಬಹಳ ಕಡಿಮೆ ಜನ ವಿದ್ಯಾರ್ಥಿಗಳಿದ್ದಾಗ ಇಂತಹ ಭೋಜನಸಮಯದಲ್ಲಿ ಅವರಿಗೆ ಬೆಂಚರುಗಳೊಡನೆ ಮಾತುಕತೆಯಾಡಲು ಅವಕಾಶವಿರುತ್ತಿದ್ದಿತು. ಉಪನ್ಯಾಸಗಳು ನಡೆಯುತ್ತಿದ್ದುವು. ಇದರಿಂದ ಅವರಿಗೆ ಪ್ರಪಂಚಜ್ಞಾನವೂ ಒಂದು ವಿಧವಾದ ನಯವೂ ನಾಜೂಕೂ ಬರಲು ಸಹಾಯವಾಗುತ್ತಿದ್ದಿತಲ್ಲದೆ ಅವರ ವಾಕ್ಪಟುತ್ವವೂ ವಿಕಾಸಗೊಳ್ಳುತ್ತಿದ್ದಿತು. ನಮ್ಮ ಕಾಲದಲ್ಲಿಯಾದರೋ ಇದೆಲ್ಲವೂ ಸಾಧ್ಯವಿರಲಿಲ್ಲ. ಬೆಂಚರುಗಳು ತಮ್ಮ ಗೌರವಕ್ಕೆ ತಕ್ಕಷ್ಟು ದೂರದಲ್ಲಿ ಕುಳಿತುಕೊಳ್ಳುತ್ತಿದ್ದರು. ಈ ಪದ್ಧತಿಯಲ್ಲಿ ಬರಬರುತ್ತಾ ಅರ್ಥವೆಲ್ಲಾ ಮಾಯವಾಗಿಹೋಗಿದ್ದಿತು. ಆದರೆ ಪ್ರಾಚೀನತಾಪ್ರೇಮಿಯಾದ ಇಂಗ್ಲೆಂಡು ಇದನ್ನು ಇನ್ನೂ ಉಳಿಸಿಕೊಂಡಿದ್ದಿತು.

ಪಾಠಕ್ರಮವು ಸುಲಭವಾಗಿದ್ದಿತು. ಬ್ಯಾರಿಸ್ಟರುಗಳನ್ನು ತಮಾಷೆಗೆ 'ಡಿನ್ನರ್ ಬ್ಯಾರಿಸ್ಟರ್' (ಊಟದ ಬ್ಯಾರಿಸ್ಟರ್) ಗಳೆಂದು ಕರೆಯುತ್ತಿದ್ದರು. ಈ ಪರೀಕ್ಷೆಗಳಿಗೆ ಬೆಲೆಯಿಲ್ಲವೆಂದು ಎಲ್ಲರಿಗೂ ಗೊತ್ತಿದ್ದಿತು. ನಾನು ಓದುತ್ತಿದ್ದ ಕಾಲದಲ್ಲಿ ಎರಡು ಪರೀಕ್ಷೆಗಳಾಗುತ್ತಿದ್ದುವು—ರೋಮನ್ ಲಾ (ಹಿಂದಿನ ಕಾಲದ ರೋಮನ್ ಜನರ ಕಾನೂನು) ದಲ್ಲಿ ಒಂದು; ಕಾಮನ್ ಲಾ (ಇಂಗ್ಲೆಂಡ್ ದೇಶದ ಸಂಗ್ರಹವಾಗಿಲ್ಲದ ಕಾನೂನು) ದಲ್ಲಿ ಒಂದು. ಇವೆರಡೂ ಬೇರೆಬೇರೆ ಭಾಗಗಳಾಗಿದ್ದುದರಿಂದ ಎರಡು ಸಲ ಕುಳಿತುಕೊಳ್ಳಬಹುದಾಗಿದ್ದಿತು. ಪರೀಕ್ಷೆಯ ಪುಸ್ತಕಗಳು ಗೊತ್ತುಮಾಡಲ್ಪಟ್ಟಿದ್ದರೂ ಯಾರೂ ಅವುಗಳನ್ನು ಓದುತ್ತಿರಲಿಲ್ಲವೆನ್ನಬಹುದು. ರೋಮನ್ ಲಾ ಮೇಲೆ ಸಣ್ಣ ಸಣ್ಣ 'ನೋಟ್ಸ್' (ಟೀಕೆಟಿಪ್ಪಣಿಗಳು) ಗಳು ಸಿಕ್ಕುತ್ತಿದ್ದುವು. ಇವುಗಳನ್ನು ಎರಡು ವಾರ ಮಾತ್ರವೂ

ಇಂಗ್ಲೆಂಡಿನ ಕಾನೂನುಗಳ 'ನೋಟ್ಸ್' ಗಳನ್ನು ಎರಡು ಮೂರು ತಿಂಗಳು ಮಾತ್ರವೂ ಓದಿ ಪರೀಕ್ಷೆಯಲ್ಲಿ ತೇರ್ಗಡೆಯಾದವರನ್ನು ನೋಡಿದ್ದೇನೆ. ಪರೀಕ್ಷೆಯ ಪ್ರಶ್ನೆಗಳು ಸುಲಭವಾಗಿರುತ್ತಿದ್ದುವಲ್ಲದೆ ಪರೀಕ್ಷಕರೂ ಔದಾರ್ಯವನ್ನು ತೋರಿಸುತ್ತಿದ್ದರು. ರೋಮನ್ ಲಾದಲ್ಲಿ ೧೦೦ಕ್ಕೆ ೯೫ ರಿಂದ ೯೯ ಜನರೂ ಕಡೆಯ ಪರೀಕ್ಷೆಯಲ್ಲಿ ೧೦೦ಕ್ಕೆ ೭೫ ಅಥವಾ ಇನ್ನೂ ಸ್ವಲ್ಪ ಹೆಚ್ಚು ಜನರೂ ತೇರ್ಗಡೆಹೊಂದುತ್ತಿದ್ದರು. ಆದುದರಿಂದ ಅನುತ್ತೀರ್ಣರಾಗುವ ಭಯವು ಬಹಳ ಕಡಿಮೆಯಾಗಿದ್ದಿತು. ಇದಲ್ಲದೆ ಈ ಪರೀಕ್ಷೆಯು ವರ್ಷಕ್ಕೆ ಒಂದು ಸಲವಲ್ಲ, ನಾಲ್ಕು ಸಲ ನಡೆಯುತ್ತಿದ್ದಿತು. ಇಷ್ಟು ಸುಲಭವಾದ ಪರೀಕ್ಷೆಯು ಯಾರಿಗೂ ಹೊರೆಯಾಗಿ ತೋರಲು ಕಾರಣವಿರಲಿಲ್ಲ.

ಆದರೆ ನಾನಾಗಿ ನಾನೇ ಇದನ್ನು ಹೊರೆಯಾಗಿ ಮಾಡಿಕೊಂಡೆನು. ಪರೀಕ್ಷೆಗೆ ಇಟ್ಟಿದ್ದ ಪಠ್ಯಪುಸ್ತಕಗಳನ್ನೆಲ್ಲಾ ಓದಬೇಕೆಂದು ನಾನು ಮನಸ್ಸು ಮಾಡಿದೆನು. ನನಗೆ ಅವುಗಳನ್ನು ಓದದಿರುವುದು ಮೋಸವೆಂದು ತೋರಿತು. ಇದಕ್ಕಾಗಿ ಹೆಚ್ಚು ಹಣವನ್ನು ವೆಚ್ಚಮಾಡಿ ಪುಸ್ತಕಗಳನ್ನು ಕೊಂಡುಕೊಂಡೆನು. ರೋಮನ್ ಲಾವನ್ನು ಲ್ಯಾಟಿನ್ ಭಾಷೆಯಲ್ಲಿಯೇ ಕಲಿಯಲು ನಿಶ್ಚಯಿಸಿದೆನು ಲಂಡನ್ ಮೆಟ್ರಿಕ್ಯುಲೇಷನ್ ಪರೀಕ್ಷೆಗಾಗಿ ನಾನು ಕಲಿತಿದ್ದ ಲ್ಯಾಟಿನ್ ಭಾಷೆಯು ಈಗ ಬಹಳ ಉಪಯೋಗವಾಯಿತು. ಈ ಶ್ರಮನೆಲ್ಲಾ ಸ್ವಲ್ಪವೂ ವ್ಯರ್ಥವಾಗಲಿಲ್ಲ. ದಕ್ಷಿಣ ಆಫ್ರಿಕದಲ್ಲಿ ರೋಮನ್–ಡಚ್ ಲಾ ಕ್ರಮವೇ ಪ್ರಚಾರದಲ್ಲಿರುವುದು. ಆದುದರಿಂದ ಇದನ್ನು ತಿಳಿದುಕೊಳ್ಳುವುದರಲ್ಲಿ ಜಸ್ಟಿನಿಯನ (ಹೆಸರುವಾಸಿಯಾದ ರೋಮನ್ ಧರ್ಮಶಾಸ್ತ್ರವನ್ನು ಬರೆದವನು) ನ ಪುಸ್ತಕವನ್ನು ಓದಿದ್ದುದರಿಂದ ನನಗೆ ಬಹಳ ಸಹಾಯವಾಯಿತು.

ಇಂಗ್ಲೆಂಡಿನ ಕಾನೂನುಗಳನ್ನು ಓದಿ ಮುಗಿಸುವುದಕ್ಕೆ ನಾನು ಒಂಬತ್ತು ತಿಂಗಳು ಚೆನ್ನಾಗಿ ಶ್ರಮಪಟ್ಟು ಕೆಲಸಮಾಡಬೇಕಾಯಿತು. ಏಕೆಂದರೆ ಬ್ರೂಮ್ ಎಂಬಾತನ ಕಾಮನ್ ಲಾ ಮೇಲಿನ ಪುಸ್ತಕವು ರಸಮಯವಾಗಿದ್ದರೂ ದೊಡ್ಡದಾಗಿದ್ದುದರಿಂದ ಬಹಳ ಹೊತ್ತು ತೆಗೆದು

ಕೊಂಡಿತು. ಸ್ನೆಲ್ ಎಂಬಾತನ ಈಕ್ವಿಟಿಯಮೇಲಿನ ಪುಸ್ತಕವು ಮನೋರಂಜಕವಾಗಿದ್ದರೂ ತಿಳಿದುಕೊಳ್ಳಲು ಕಷ್ಟವಾಗಿದ್ದಿತು. ವೈಟ್ ಮತ್ತು ಟ್ಯೂಡರ್ ಇವರ 'ಮುಖ್ಯ ಮೊಕದ್ದಮೆಗಳು' ಎಂಬ ಪುಸ್ತಕವು (ಇದರಲ್ಲಿ ಕೆಲವು ಮೊಕದ್ದಮೆಗಳನ್ನು ಪರೀಕ್ಷೆಗಿಟ್ಟಿದ್ದರು) ಕುತೂಹಲ ಜನಕವಾಗಿಯೂ ಜ್ಞಾನದಾಯಕವಾಗಿಯೂ ಇದ್ದಿತು. ವಿಲಿಯಮ್ಸ್ ಮತ್ತು ಎಡ್ವರ್ಡ್ ಇವರ ಸ್ಥಿರಸ್ವತ್ತಿನ ಮೇಲಿನ ಪುಸ್ತಕವೂ ಗುಡೀವ್ ಎಂಬಾತನ ಚರಸ್ವತ್ತಿನಮೇಲಿನ ಪುಸ್ತಕವೂ ಓದುವುದಕ್ಕೆ ಬಹಳ ಚೆನ್ನಾಗಿದ್ದುವು. ವಿಲಿಯಮ್ಸನ ಪುಸ್ತಕವಂತೂ ಕಾದಂಬರಿಯಂತೆ ತೋರುತ್ತಿದ್ದಿತು. ಇದನ್ನು ಓದುವುದರಲ್ಲಿ ನನಗೆ ಸ್ವಲ್ಪವೂ ಬೇಸರವಾಗ ಲಿಲ್ಲ. ಹಿಂದುಸ್ಥಾನಕ್ಕೆ ಹಿಂತಿರುಗಿ ಬಂದಮೇಲೆ ಇಷ್ಟೇ ಎಡೆಬಿಡದ ಕೂತೂಹಲದಿಂದ ಓದಿದುದು ಮೆಯ್ನ್ ಎಂಬಾತನ ಹಿಂದೂಧರ್ಮಶಾಸ್ತ್ರದ ಮೇಲಿನ ಪುಸ್ತಕವೊಂದೇ ಎಂದು ನನಗೆ ನೆನಪಿದೆ. ಆದರೆ ಹಿಂದೂ ಸ್ಥಾನದ ಕಾನೂನುಗಳ ವಿಚಾರವಾಗಿ ಬರೆಯುವುದಕ್ಕೆ ಇದು ಸ್ಥಳವಲ್ಲ.

ಪರೀಕ್ಷೆಗಳಲ್ಲಿ ಉತ್ತೀರ್ಣನಾದೆನು. ೧೮೯೧ನೆಯ ಇಸವಿ ಜೂನ್ ೧೦ನೆಯ ತಾರೀಖಿನ ದಿನ ನಾನು ಬ್ಯಾರಿಸ್ಟರಾದೆನು. ೧೧ನೆಯ ತಾರೀಖಿನ ದಿನ ಹೈಕೋರ್ಟ್ (ಇಂಗ್ಲೆಂಡಿನ ಶ್ರೇಷ್ಠನ್ಯಾಯಸ್ಥಾನ)ದಲ್ಲಿ ವಕೀಲನಾಗಿ ಸೇರಿಸಲ್ಪಟ್ಟೆನು. ೧೨ನೆಯ ತಾರೀಖಿನ ದಿನ ಹಿಂದೂಸ್ಥಾನಕ್ಕೆ ಹಿಂತಿರುಗಿದೆನು.

ನಾನು ಇಷ್ಟು ಓದಿದ್ದರೂ ನನ್ನ ನಿಸ್ಸಹಾಯತೆಗೂ ಭೀತಿಗೂ ಕೊನೆಯಿರಲಿಲ್ಲ. ವಕೀಲಿ ಉದ್ಯೋಗವನ್ನು ನಡೆಸಲು ತಕ್ಕಷ್ಟು ಯೋಗ್ಯತೆಯು ನನ್ನಲ್ಲಿದೆಯೆಂದು ನನಗೆ ಧೈರ್ಯವಿರಲಿಲ್ಲ.

ಈ ನನ್ನ ನಿಸ್ಸಹಾಯತೆಯನ್ನು ವರ್ಣಿಸುವುದಕ್ಕೆ ಬೇರೆ ಅಧ್ಯಾಯವೇ ಬೇಕು.



## ೨೫

# ನನಗೆ ದಾರಿಕಾಣದೆ ಹೋದುದು

ಬ್ಯಾರಿಸ್ಟರ್ ಎನ್ನುವ ಹೆಸರೇನೋ ಸುಲಭವಾಗಿ ಬಂದಿತು. ಆದರೆ ವಕೀಲಿಕೆಲಸವನ್ನು ಮಾಡುವುದು ಕಷ್ಟವಾಗಿ ಕಂಡುಬಂದಿತು. ನಾನು ಕಾನೂನುಗಳನ್ನೋದಿದ್ದರೂ ವ್ಯವಹಾರ ನಡೆಸುವುದನ್ನು ಕಲಿತಿರಲಿಲ್ಲ. 'ವ್ಯವಹಾರಸೂತ್ರ' ಗಳನ್ನೇನೋ ಕುತೂಹಲದಿಂದ ಓದಿದ್ದೆನು. ಆದರೆ ಅವುಗಳನ್ನು ನನ್ನ ಉದ್ಯೋಗದಲ್ಲಿ ಉಪಯೋಗಿಸಿಕೊಳ್ಳುವುದು ನನಗೆ ಗೊತ್ತಿರಲಿಲ್ಲ. "ನಿನ್ನ ಸ್ವತ್ತನ್ನು ಉಪಯೋಗಿಸಬೇಕಾದರೆ ಇತರರ ಸ್ವತ್ತಿಗೆ ಹಾನಿಯುಂಟಾಗದಂತೆ ಉಪಯೋಗಿಸಬೇಕು." ಎನ್ನುವುದು ಇಂತಹ ಒಂದು ಸೂತ್ರವಾಗಿದ್ದಿತು. ಆದರೆ ಮೊಕದ್ದಮೆಯಲ್ಲಿ ನನ್ನ ಕಕ್ಷಿಗಾರನಿಗೆ ಪ್ರಯೋಜನವಾಗುವಹಾಗೆ ಇದನ್ನು ಉಪಯೋಗಿಸುವುದು ಹೇಗೆನ್ನುವುದು ನನಗೆ ತಿಳಿದಿರಲಿಲ್ಲ. ಈ ಸಿದ್ಧಾಂತಕ್ಕೆ ಸಂಬಂಧಪಟ್ಟ ಮುಖ್ಯ ಮೊಕದ್ದಮೆಗಳನ್ನೆಲ್ಲಾ ನಾನು ಓದಿದ್ದರೂ ಮುಂದೆ ನಾನು ಇದನ್ನು ಉಪಯೋಗಕ್ಕೆ ತರಬಲ್ಲೆನೆಂಬ ಧೈರ್ಯವು ನನಗುಂಟಾಗಲಿಲ್ಲ.

ಇದಲ್ಲದೆ ಹಿಂದೂಸ್ಥಾನಕ್ಕೆ ಸಂಬಂಧಪಟ್ಟ ಕಾನೂನುಗಳ ವಿಚಾರವಾಗಿ ನಾನು ಏನನ್ನೂ ಕಲಿತುಕೊಂಡಿರಲಿಲ್ಲ. ಹಿಂದೂ ಮತ್ತು ಮಹಮ್ಮದೀಯ ಕಾನೂನುಗಳಲ್ಲಿ ಏನಿದೆಯೆನ್ನುವುದು ನನಗೆ ತಿಳಿದಿರಲಿಲ್ಲ. ದಾವೆಯನ್ನು ಬರೆಯುವುದನ್ನು ಕೂಡ ನಾನು ಕಲಿತುಕೊಂಡಿರಲಿಲ್ಲ. ಅದನ್ನು ಬರೆಯಲು ನನಗೆ ಏನೂ ತೋಚುತ್ತಿರಲಿಲ್ಲ. ಸರ್ ಫಿರೋಜ್ ಷಹಾ ಮೆಹತಾರವರು ಕೋರ್ಟಿನಲ್ಲಿ ಸಿಂಹದಂತೆ ಗರ್ಜಿಸುತ್ತಿದ್ದರೆಂದು ನಾನು ಕೇಳಿದ್ದೆನು. ಈ ಯೋಗ್ಯತೆಯನ್ನು ಇವರು ವಿಲಾಯತಿಯಲ್ಲಿ ಹೇಗೆ ಸಂಪಾದಿಸಿದರು ಎಂದು ನನಗೆ ಆಶ್ಚರ್ಯವಾಯಿತು. ವಕೀಲಿಯಲ್ಲಿ ಅವರಿಗಿದ್ದ ಪ್ರಾವೀಣ್ಯವು ನನ್ನ ಜನ್ಮದಲ್ಲಿಯೇ ನನಗೆ ಬರುವುದಿಲ್ಲವೆಂದು

ಗೊತ್ತಿದ್ದಿತು. ಅದಿರಲಿ, ವಕೀಲನಾಗಿ ನಾನು ನನ್ನ ಜೀವನವನ್ನು ಹುಟ್ಟಿಸಿಕೊಳ್ಳುವಷ್ಟು ಚೈತನ್ಯವು ನನ್ನಲ್ಲಿದೆಯೇ ಎಂದು ನನಗೆ ಬಲವಾಗಿ ಸಂದೇಹವಾಗುತ್ತಿದ್ದಿತು.

ಬ್ಯಾರಿಸ್ಟರ್ ಪರೀಕ್ಷೆಗೆ ಓದುತ್ತಿದ್ದಾಗ ಈ ಸಂಶಯಸಂಕಟಗಳಿಂದ ನನ್ನ ಮನಸ್ಸು ತಲ್ಲಣಿಸುತ್ತಿದ್ದಿತು. ಈ ಕಷ್ಟವನ್ನು ಕೆಲವು ಆಪ್ತರಲ್ಲಿ ಹೇಳಿಕೊಂಡೆನು. ಅವರಲ್ಲಿ ಒಬ್ಬರು ದಾದಾಭಾಯಿ ನವರೋಜಿಯವರ ಸಲಹೆಯನ್ನು ತೆಗೆದುಕೊಳ್ಳಬೇಕೆಂದು ನನಗೆ ಸೂಚಿಸಿದರು. ನಾನು ಸೀಮೆಗೆ ಹೋದಾಗ ದಾದಾಭಾಯಿಗೆ ಬರೆದ ಒಂದು ಪರಿಚಯಪತ್ರವು ನನ್ನಲ್ಲಿದ್ದಿತೆಂದು ನಾನು ಹಿಂದೆಯೇ ಹೇಳಿದ್ದೇನೆ. ಇದನ್ನು ನಾನು ಬಹುಕಾಲದಮೇಲೆ ಉಪಯೋಗಿಸಿದೆನು. ಇಂತಹ ಮಹಾಪುರುಷರನ್ನು ನೋಡುವುದಕ್ಕೆ ಹೋಗಿ ಅವರಿಗೆ ತೊಂದರೆ ಮಾಡಲು ನನಗೆ ಅಧಿಕಾರವಿಲ್ಲವೆಂದು ನನಗೆ ತೋರುತ್ತಿದ್ದಿತು. ಅವರಿಂದ ಯಾವಾಗಲಾದರೂ ಉಪನ್ಯಾಸವಾಗುವುದಿದ್ದರೆ ಅದನ್ನು ಕೇಳುವುದಕ್ಕೋಸ್ಕರ ಹೋಗಿ ಮಂದಿರದ ಒಂದು ಮೂಲೆಯಲ್ಲಿ ನಿಂತುಕೊಂಡು ಅವರನ್ನು ಕಣ್ಣುತುಂಬ ನೋಡಿ ಅವರ ಮಾತುಗಳನ್ನು ಕಿವಿತುಂಬ ಕೇಳಿ ತೃಪ್ತನಾಗಿ ಹಿಂದಕ್ಕೆ ಬರುತ್ತಿದ್ದೆನು. ಅವರು ವಿದ್ಯಾರ್ಥಿಗಳೊಡನೆ ಒಂದುಗೂಡುವುದಕ್ಕೋಸ್ಕರ ಒಂದು ಮಂಡಲಿಯನ್ನು ಸ್ಥಾಪಿಸಿದ್ದರು. ನಾನು ಈ ಮಂಡಲಿಯು ಸಭೆಗೂಡುವಾಗೆಲ್ಲಾ ಹೋಗಿ ಇವರು ವಿದ್ಯಾರ್ಥಿಗಳಿಗೆ ತೋರಿಸುತ್ತಿದ್ದ ಆದರವನ್ನೂ ವಿದ್ಯಾರ್ಥಿಗಳು ಇವರಲ್ಲಿಟ್ಟಿದ್ದ ಗೌರವವನ್ನೂ ನೋಡಿ ಆನಂದಪಡುತ್ತಿದ್ದೆನು. ಕಡೆಗೆ ಪರಿಚಯಪತ್ರವನ್ನು ಅವರಿಗೆ ತೋರಿಸುವಷ್ಟು ಧೈರ್ಯವನ್ನು ಸಂಪಾದಿಸಿ ಅವರ ಬಳಿಗೆ ಹೋದೆನು. ಅವರು "ನೀನು ಇಷ್ಟ ತೋರಿದಾಗ ಬಂದು ನನ್ನ ಸಲಹೆಯನ್ನು ತೆಗೆದುಕೊಳ್ಳಬಹುದು." ಎಂದು ಹೇಳಿದರು. ಆದರೆ ನಾನು ಯಾವಾಗಲೂ ಈ ಅವಕಾಶವನ್ನು ಉಪಯೋಗಿಸಿಕೊಳ್ಳಲಿಲ್ಲ. ಬಹಳ ತೀವ್ರವಾದ ಆವಶ್ಯಕತೆ ಬಿದ್ದಹೊರತು ಅವರ ಕಾಲವನ್ನು ಕಳೆಯುವುದು ತಪ್ಪೆಂದು ನನಗೆ ಕಾಣುತ್ತಿದ್ದಿತು. ಆದುದರಿಂದ ನನ್ನ ಮಿತ್ರರ ಸಲಹೆಯಂತೆ ನನ್ನ ಸಂಕಟಗಳನ್ನು ಆ ಸಮಯದಲ್ಲಿ ಅವರೆದುರಿಗೆ ಹೇಳಿ

ಕೊಳ್ಳಲು ನನಗೆ ಧೈರ್ಯವಾಗಲಿಲ್ಲ. ಇದೇ ಮಿತ್ರರೋ ಅಥವಾ ಬೇರೊಬ್ಬರೋ (ನನಗೆ ಸರಿಯಾಗಿ ನೆನಪಿಲ್ಲ) ಮಿ|| ಫ್ರೆಡರಿಕ್ ಪಿನ್ಕಟ್ ರವರನ್ನು ನೋಡೆಂದು ಸೂಚಿಸಿದರು. ಇವರು ಕನ್‌ಸರ್ವೆಟಿವ್ (ಪ್ರಾಚೀನತಾಪ್ರೇಮಿ) ಪಕ್ಷಕ್ಕೆ ಸೇರಿದ್ದರೂ ಇವರಿಗೆ ಭಾರತೀಯ ವಿದ್ಯಾರ್ಥಿಗಳಲ್ಲಿ ನಿರ್ಮಲವೂ ನಿಸ್ವಾರ್ಥವೂ ಆದ ಪ್ರೇಮವಿದ್ದಿತು. ಅನೇಕ ವಿದ್ಯಾರ್ಥಿಗಳು ಇವರ ಸಲಹೆಯನ್ನು ತೆಗೆದುಕೊಳ್ಳುತ್ತಿದ್ದರು. ನಾನೂ ಇವರನ್ನು ನೋಡುವುದಕ್ಕೆ ಸಮಯ ಬೇಡಿ ಪತ್ರ ಬರೆದೆನು. ಅವರು ಒಪ್ಪಿ ಕಾಲವನ್ನು ಗೊತ್ತುಮಾಡಿದರು. ನಾನು ಅವರನ್ನು ಹೋಗಿ ನೋಡಿದುದನ್ನು ಎಂದೆಂದಿಗೂ ಮರೆಯಲಾರೆನು. ಅವರು ನನ್ನನ್ನು ಸ್ನೇಹಿತನಂತೆ ಕಂಡರು. ನನ್ನ ನಿರಾಸೆಯನ್ನು ತಮ್ಮ ನಗುವಿನಿಂದ ಓಡಿಸಿದರು. "ಪ್ರತಿಯೊಬ್ಬ ಮನುಷ್ಯನೂ ಫಿರೋಸ್ ಷಹಾ ಮೆಹತಾರವರಂತೆ ಆಗಬೇಕೆಂದು ನಿನ್ನ ಅಭಿಪ್ರಾಯವೇನು? ಫಿರೋಸ್ ಷಹರಂತಹವರು ಮತ್ತು ಬದ್ರುದಿನರಂತಹವರು ಅಪರೂಪ. ಸಾಮಾನ್ಯ ವಕೀಲನಾಗಿರುವುದಕ್ಕೆ ಅಷ್ಟು ಹೆಚ್ಚಾದ ಕುಶಲತೆಯೇನೂ ಆವಶ್ಯಕವಿಲ್ಲವೆನ್ನುವುದನ್ನು ನಿಶ್ಚಯವೆಂದು ತಿಳಿ. ಪ್ರಾಮಾಣಿಕತೆಯೂ ಕೆಲಸ ಮಾಡುವ ಅಭ್ಯಾಸವೂ ಇದ್ದರೆ ಮನುಷ್ಯನು ವಕೀಲನಾಗಿ ಜೀವನ ಸಂಪಾದಿಸಬಹುದು. ಎಲ್ಲಾ ಮೊಕದ್ದಮೆಗಳೂ ತೊಡಕಾಗಿರುವುದಿಲ್ಲ. ಒಳ್ಳೆಯದು, ಸಾಮಾನ್ಯ ವಿಷಯಕಗಳಾದ ಯಾವಯಾವ ಪುಸ್ತಕಗಳನ್ನು ಓದಿದ್ದೀಯೇ? ಹೇಳು." ಎಂದರು.

ನಾನು ಓದಿದ್ದ ಅಲ್ಪಸ್ವಲ್ಪ ಪುಸ್ತಕಗಳನ್ನು ತಿಳಿಸಲು ಅವರಿಗೆ ಕೊಂಚ ಆಶಾಭಂಗವಾಯಿತೆನ್ನುವುದನ್ನು ನಾನು ಕಂಡೆನು. ಆದರೆ ಹಾಗಾದುದು ಒಂದುಕ್ಷಣ ಮಾತ್ರ. ಅಷ್ಟರಲ್ಲಿಯೇ ಅವರ ಮುಖದಲ್ಲಿ ಹಾಸ್ಯರೇಖೆಗಳು ಕಾಣಬಂದುವು.

"ನಿನ್ನ ತೊಂದರೆಯು ನನಗೆ ಗೊತ್ತಾಯಿತು. ನೀನು ಓದಿರುವುದು ಬಹಳ ಸ್ವಲ್ಪ. ನಿನಗೆ ಪ್ರಪಂಚದ ಅನುಭವವಿಲ್ಲ. ಅದಿಲ್ಲದೆ ವಕೀಲರ ಕೆಲಸ ನಡೆಯುವುದಿಲ್ಲ. ನೀನು ಹಿಂದೂಸ್ಥಾನದ ಚರಿತ್ರೆಯನ್ನು ಕೂಡ ಓದಿಲ್ಲ. ವಕೀಲನಿಗೆ ಮನುಷ್ಯಸ್ವಭಾವದ ಜ್ಞಾನವಿರ

ಬೇಕು. ಆತನು ಒಬ್ಬ ಮನುಷ್ಯನ ಚಹರೆಯಿಂದ ಅವರ ಸ್ವಭಾವವನ್ನು ತಿಳಿದುಕೊಳ್ಳುವ ಶಕ್ತಿಯುಳ್ಳವನಾಗಿರಬೇಕು. ಪ್ರತಿಯೊಬ್ಬ ಭಾರತೀಯನಿಗೂ ಹಿಂದೂಸ್ಥಾನದ ಇತಿಹಾಸಜ್ಞಾನವಿರಬೇಕು. ಇದಕ್ಕೂ ವಕೀಲಿಗೂ ಏನೂ ಸಂಬಂಧವಿಲ್ಲ. ಆದರೂ ಈ ಜ್ಞಾನವು ನಿನಗೆ ಆವಶ್ಯಕವಾಗಿರಬೇಕು. ಕೇ ಮತ್ತು ಮ್ಯಾಲಿಸನರ ೧೮೫೭ನೆಯ ಇಸವಿಯಲ್ಲಿ ನಡೆದ ದಂಗೆಯ ಚರಿತ್ರೆಯನ್ನು ಕೂಡ ನೀನು ಓದಿಲ್ಲ. ಆ ಪುಸ್ತಕವನ್ನು ಈಗಲೇ ತೆಗೆದುಕೊಂಡು ಓದು. ಇದಲ್ಲದೆ ಮನುಷ್ಯರ ಸ್ವಭಾವವನ್ನು ತಿಳಿದುಕೊಳ್ಳುವುದಕ್ಕಾಗಿ ಇನ್ನೆರಡು ಪುಸ್ತಕಗಳನ್ನು ಓದು.'' ಎಂದರು. ಲ್ಯಾವೇಟರ್ ಮತ್ತು ಷೆಮ್ಮೆಲ್‌ಪೆನ್ನಿಕ್ ಇವರು ಮುಖಸಾಮುದ್ರಿಕೆಯಮೇಲೆ ಬರೆದಿದ್ದುವೇ ಈ ಪುಸ್ತಕಗಳಾಗಿದ್ದುವು.

ಈ ಪೂಜ್ಯಮಿತ್ರರ ಉಪಕಾರವನ್ನು ನಾನು ಬಹಳವಾಗಿ ಸ್ಮರಿಸಿದೆನು. ಅವರ ಸಮಕ್ಷದಲ್ಲಿ ನನ್ನ ಹೆದರಿಕೆಯೆಲ್ಲವೂ ದೂರವಾದರೂ ಅವರನ್ನು ಬಿಟ್ಟು ಬಂದೊಡನೆಯೇ ಪುನಃ ಕಳವಳಕ್ಕೆ ಪ್ರಾರಂಭವಾಯಿತು. ''ಚಹರೆಯಿಂದ ಮನುಷ್ಯನ ಯೋಗ್ಯತೆಯನ್ನು ಕಂಡುಹಿಡಿಯುವುದು ಹೇಗೆ?'' ಎಂಬ ಪ್ರಶ್ನೆಯನ್ನು ಮನಸ್ಸಿನಲ್ಲಿ ಮಥಿಸುತ್ತಾ ಆ ಎರಡು ಪುಸ್ತಗಳ ವಿಚಾರವಾಗಿ ಯೋಚನೆಮಾಡುತ್ತಾ ಮನೆಗೆ ಹೋದೆನು. ಮಾರನೆಯ ದಿನ ಲ್ಯಾವೇಟರನ ಪುಸ್ತಕವನ್ನು ಕೊಂಡುಕೊಂಡೆನು. ಷೆಮ್ಮೆಲ್‌ಪೆನ್ನಿಕನ ಪುಸ್ತಕವು ಅಂಗಡಿಯಲ್ಲಿ ದೊರಕಲಿಲ್ಲ. ಲ್ಯಾವೇಟರನ ಪುಸ್ತಕವನ್ನು ಓದಲು ಅದು ಸ್ನೆಲ್ಲನ 'ಈಕ್ವಿಟಿ' ಗಿಂತ ಕಠಿಣವಾಗಿ ತೋರಿತು. ಅದರಲ್ಲಿ ಅಭಿಲಾಷೆ ಕೂಡ ಹುಟ್ಟಲಿಲ್ಲ. ಷೇಕ್ಸ್‌ಪಿಯರನ ಚಹರೆಯನ್ನು ಅಧ್ಯಯನಮಾಡಿದೆನು. ಆದರೆ ಲಂಡನಿನ ರಸ್ತೆಗಳಲ್ಲಿ ಓಡಾಡುವ ಷೇಕ್ಸ್‌ಪಿಯರರನ್ನು ಗುರುತಿಸುವ ಶಕ್ತಿಯು ನನಗುಂಟಾಗಲಿಲ್ಲ.

ಲ್ಯಾವೇಟರನ ಪುಸ್ತಕದಿಂದ ನನ್ನ ತಿಳುವಳಿಕೆಯೇನೂ ಹೆಚ್ಚಾಗಲಿಲ್ಲ. ಪಿನ್‌ಕಟರ ಸಲಹೆಗಳಿಂದ ನನಗೆ ಆದ ಉಪಯೋಗವು ಬಹಳ ಕಡಿಮೆ. ಆದರೆ ಅವರು ನನ್ನಲ್ಲಿಟ್ಟಿದ್ದ ಮಮತೆಯಿಂದ ನಿಷ್ಕಾಪಟ್ಯದಿಂದ ಹೊಳೆವ ಅವರ ನಗುವು ನನ್ನ ಮನಸ್ಸಿನಲ್ಲಿ ನಿಂತಿತು. ವಕೀಲ

ನಾಗಿ ಜೀವನ ನಡೆಸಲು ಫಿರೋಜ್ ಷಹಾ ಮೆಹತಾರವರ ಪ್ರತಿಭೆ, ಸ್ಮರಣಶಕ್ತಿ, ಯೋಗ್ಯತೆ ಇವು ಆವಶ್ಯಕವಲ್ಲ; ಪ್ರಾಮಾಣಿಕತೆಯೂ ಕೆಲಸಮಾಡುವ ಶಕ್ತಿಯೂ ಇದ್ದರೆ ಸಾಕು, ಎಂದು ಅವರು ಹೇಳಿದ ಬುದ್ಧಿವಾದವನ್ನು ನಂಬಿದೆನು. ಮತ್ತು ಈ ಎರಡು ಗುಣಗಳು ನನ್ನಲ್ಲಿ ಸಾಕಾದಮಟ್ಟಿಗೆ ಇದ್ದುದರಿಂದ ನನ್ನ ಹೃದಯದಲ್ಲಿ ಸ್ವಲ್ಪ ಧೈರ್ಯವು ಹುಟ್ಟಿತು.

ಕೇ ಮತ್ತು ವ್ಯಾಲಿಸನರ ಪುಸ್ತಕವನ್ನು ವಿಲಾಯತಿಯಲ್ಲಿ ಓದ ಲಾಗಲಿಲ್ಲ. ಆದರೆ ಸಮಯವೊದಗಿದೊಡನೆಯೇ ಅದನ್ನು ಓದಬೇಕೆಂದು ಮನಸ್ಸುಮಾಡಿಕೊಂಡಿದ್ದುದರಿಂದ ಅದನ್ನು ದಕ್ಷಿಣಆಫ್ರಿಕದಲ್ಲಿ ಓದಿದೆನು.

ಈ ಪ್ರಕಾರವಾಗಿ ನಿರಾಸೆಯ ಜೊತೆಗೆ ಸ್ವಲ್ಪ ಆಸೆಯನ್ನೂ ಹೊಂದಿದವನಾಗಿ 'ಅಸ್ಸಾಂ' ಎಂಬ ಜಹಜಿನಲ್ಲಿ ಮುಂಬಯಿಗೆ ಬಂದು ಸೇರಿದೆನು. ಬಂದರಿನಲ್ಲಿ ಸಮುದ್ರವು ಅಲ್ಲೋಲಕಲ್ಲೋಲವಾಗಿದ್ದಿತು. ನಾನು ದೋಣಿಯಲ್ಲಿ ದಡಕ್ಕೆ ಹೋಗಿ ಸೇರಬೇಕಾಯಿತು.



# ಟಿಪ್ಪಣಿಗಳು

ಆತ್ಮಕಥೆಯಲ್ಲಿ ಬರುವ ವಿಶೇಷ ವಿಷಯಗಳ ಮತ್ತು ಮಹಾ ಪುರುಷರ ವಿಚಾರಗಳನ್ನು ಕುರಿತು ವಾಚಕರ ಅನುಕೂಲಕ್ಕಾಗಿ ಸಂಕ್ಷಿಪ್ತ ಟಿಪ್ಪಣಿಗಳನ್ನು ಪುಟಸಂಖ್ಯಾಕ್ರಮದಲ್ಲಿ ಕೊಡಲಾಗಿದೆ.

## ಮುಂಬಯಿಯ ಮಾರಾಮಾರಿ: (ಪು. i)

೧೯೨೧ನೆಯ ಇಸವಿ ನವೆಂಬರ್ ೧೭ನೆಯ ತಾರೀಖಿನಲ್ಲಿ ಇಂಗ್ಲೆಂಡಿನ ಯುವರಾಜರು ಮುಂಬಯಿಯಲ್ಲಿ ಹಡಗಿನಿಂದ ಇಳಿದರು. ಯುವ ರಾಜರ ಆಗಮನದ ಉತ್ಸವಗಳೊಂದರಲ್ಲೂ ಜನರು ಸೇರಕೂಡದೆಂದು ಅಖಿಲಭಾರತ ಕಾಂಗ್ರೆಸ್ ಸಮಿತಿಯ ನಿರ್ಣಯದಂತೆ ಮುಂಬಯಿ ಯಲ್ಲಿಯೂ ಬಹಳ ಜನರು ಹರತಾಳವನ್ನು ಆಚರಿಸಿದರು. ಉತ್ಸವಕ್ಕೆ ಭಾಗಿಗಳಾಗಲಿಲ್ಲ. ಆದರೆ ಕೆಲವರು ಆ ಉತ್ಸವಗಳಲ್ಲಿ ಭಾಗಿಗಳಾಗಿದ್ದು ದನ್ನು ನೋಡಿ ಕೆಲವು ಪುಂಡರಿಗೆ ಆಸ್ಪದ ಸಿಕ್ಕಿ ಯುವರಾಜರ ಆಗಮ ನಾರ್ಥವಾಗಿ ಹೋಗಿದ್ದವರ ಮೇಲೆಲ್ಲಾ ಕಲ್ಲುಗಳ ಮಳೆ ಕರೆದರು. ಈ ಗಲಭೆಯು ವಿಪರೀತವಾಗಿ ಮುಂಬಯಿಪಟ್ಟಣದ ನಾನಾಭಾಗಗಳ ಲ್ಲಿಯೂ ಹಬ್ಬಿತು. ಬಹಳ ಜನರಿಗೆ ಗಾಯವಾಯಿತು. ಬೇರೊಂದು ಭಾಗದಲ್ಲಿ ಸಭೆ ನಡೆಸುತ್ತಿದ್ದ ಗಾಂಧೀಜಿಯವರಿಗೆ ಈ ವರ್ತಮಾನವು ತಿಳಿದ ಕೂಡಲೆ ಅವರು ಗಲಭೆಯಾಗುತ್ತಿದ್ದ ಸ್ಥಳಕ್ಕೆ ಜಾಗ್ರತೆಯಿಂದ ಬಂದು ಜನರನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದರು. ಆ ಗಲ ಭೆಯು ನಿಲ್ಲುವವರೆಗೂ ಉಪವಾಸವ್ರತವನ್ನು ಮಾಡುತ್ತೇನೆಂದು ಅವರು ಶಪಥಮಾಡಿದರು. ಎರಡುಮೂರು ದಿನಗಳಾದಮೇಲೆ ಎಲ್ಲಾ ಜಾತಿಯ ಮುಖಂಡರ ಪ್ರಯತ್ನಗಳಿಂದ ಗಲಭೆಯು ಅಡಗಿತು. ಅದನ್ನು ತಿಳಿದ ಮೇಲೆ ಮಹಾತ್ಮರು ಉಪವಾಸವನ್ನು ನಿಲ್ಲಿಸಿದರು.

## ಯರವಾಡಾ ಕಾರಾಗೃಹ: (ಪು. i)

ಈ ಕಾರಾಗೃಹದಲ್ಲಿ ಗಾಂಧೀಜಿಯವರು ೧೯೨೨ನೇ ಮಾರ್ಚಿ ೨೦ ರಿಂದ ೧೯೨೪ನೇ ಇಸವಿ ಫೆಬ್ರುವರಿ ೫ನೇ ತಾರೀಖಿನವರಿವಿಗೂ ಬಂದಿಗಳಾಗಿದ್ದರು. ಈ ಕಾರಾಗೃಹದಿಂದಲೇ ಅವರನ್ನು 'ಅಪೆಂಡಿಸೈಟಿಸ್' ಕಾಯಿಲೆಯ ಶಸ್ತ್ರಚಿಕಿತ್ಸೆಗೋಸ್ಕರವಾಗಿ ಪೂನಾಪಟ್ಟಕ್ಕೆ ಕರೆದುಕೊಂಡು ಹೋದುದು.

ಈ ಕಾರಾಗೃಹದಲ್ಲಿಯೇ ಲೋಕಮಾನ್ಯ ತಿಲಕರು ಹಿಂದೊಂದು ಬಾರಿ ಬಂದಿಗಳಾಗಿದ್ದರು.

## ಶ್ರೀ ಜಯರಾಮದಾಸರು: (ಪು. i)

ಇವರು ಸಿಂಧಪ್ರಾಂತ್ಯದ ಮುಖಂಡರಲ್ಲೊಬ್ಬರು. ಇವರೂ ಸಹ ದೇಶಸೇವೆಗೋಸ್ಕರವಾಗಿ ಕಾರಾಗೃಹಕ್ಕೆ ಹೋಗಿದ್ದರು. ಗಾಂಧೀಜಿಯವರಿಗೆ ಇವರಲ್ಲಿ ಬಹು ವಿಶ್ವಾಸವೂ ನಂಬಿಕೆಯೂ ಇದೆ. ಈಗ ಇವರು ಹಿಂದೂ ಮಹಾಸಭೆಯ ಮುಂದಾಳುಗಳಲ್ಲೊಬ್ಬರು.

## ದಕ್ಷಿಣ ಆಫ್ರಿಕದ ಸತ್ಯಾಗ್ರಹದ ಇತಿಹಾಸ: (ಪು. i)

ಇದನ್ನು ಗಾಂಧೀಜಿಯವರು ಗುಜರಾತಿಯಲ್ಲಿ ಬರೆದು ಪ್ರಚುರಪಡಿಸಿದ್ದಾರೆ. ಇದರ ಕನ್ನಡ ಭಾಷಾಂತರವು ಇಷ್ಟರಲ್ಲಿಯೇ ಪ್ರಕಟಿಸಲ್ಪಡುವುದು.

ಗಾಂಧೀಜಿಯವರು ಬರೆದಿರುವ ಇತರ ಪುಸ್ತಕಗಳು:—

೧. "ಆರೋಗ್ಯಸಾಧನ": ಇದರಲ್ಲಿ ಗಾಂಧೀಜಿಯವರು ತಮ್ಮ ಅನುಭವಗಳ ಮತ್ತು ತಾವು ಮಾಡಿದ ಪ್ರಯೋಗಗಳ ಆಧಾರದ ಮೇಲೆ ಆರೋಗ್ಯ ವಿಷಯವಾಗಿ ಬರೆದಿದ್ದಾರೆ. 'ಆರೋಗ್ಯಸಾಧನ' ಎಂಬ ಹೆಸರಿನಿಂದ ಉಡುಪಿಯ ಪಿ. ಎ. ಪೈ. ಬ್ರದರ್ಸ್, ಇವರಿಂದಲೂ 'ಆರೋಗ್ಯಮಾರ್ಗದರ್ಶಿನಿ' ಎಂಬ ಹೆಸರಿನಿಂದ ಬೆಂಗಳೂರು ಬಸವನಗುಡಿ

ಎಂ. ಎಲ್. ಶ್ಯಾಮುಗೌಡರಿಂದಲೂ ಇದರ ಕನ್ನಡ ಅನುವಾದವು ಪ್ರಕಾಶಿಸಲ್ಪಟ್ಟಿದೆ.

೨. "ನೀತಿಧರ್ಮ": ಹೆಸರಿನಿಂದಲೇ ಈ ಪುಸ್ತಕದ ವಿಷಯವು ವ್ಯಕ್ತವಾಗುತ್ತದೆ. ಇದರ ಭಾಷಾಂತರವು ಇಷ್ಟರಲ್ಲಿಯೇ ಪ್ರಕಟಿಸಲ್ಪಡುವುದು.

೩. "ಹಿಂದೀ ಸ್ವರಾಜ್ಯ": ಈ ಪುಸ್ತಕದಲ್ಲಿ ಹಿಂದೂಸ್ಥಾನದ ಸ್ವರಾಜ್ಯಸಾಧನ ಮಾರ್ಗವು ತಮ್ಮ ಅಭಿಪ್ರಾಯದಲ್ಲಿ ಯಾವುದೆಂದು ಗಾಂಧೀಜಿಯವರಿಂದ ವಿವರಿಸಲ್ಪಟ್ಟಿದೆ. ಆಧುನಿಕ ನಾಗರಿಕತೆಯ ಕುಂದುಗಳೂ ಅವುಗಳ ನಿರ್ಮೂಲನೋಪಾಯಗಳೂ ವರ್ಣಿಸಲ್ಪಟ್ಟಿವೆ. ಇದು ಬೆಂಗಳೂರಿನ ಬಸವನಗುಡಿಯಲ್ಲಿರುವ ಶ್ರೀ ದ. ಕೃ. ಭಾರದ್ವಾಜರಿಂದ ಕನ್ನಡಕ್ಕೆ ಅನುವಾದಿಸಲ್ಪಟ್ಟು ಪ್ರಕಾಶಗೊಂಡಿದೆ.

ಇದಲ್ಲದೆ 'ಕಾರಾಗೃಹದ ಅನುಭವಗಳು', 'ನೀತಿಪತನದ ದಾರಿಯಲ್ಲಿ' (ಮಿತಸಂತತಿಯ ಕೃತಕೋಪಾಯಗಳ ವಿಷಯವಾಗಿ), 'ಅಹಿಂಸಾತತ್ತ್ವ' ಮುಂತಾದ ಪಹಿಗಳನ್ನು ಪ್ರಕಟಿಸಿದ್ದಾರೆ. ಇವು ಕೂಡ ಕನ್ನಡಿಸಲ್ಪಟ್ಟು ಇಷ್ಟರಲ್ಲಿಯೇ ಪ್ರಕಾಶಗೊಳ್ಳುತ್ತವೆ.

ಗಾಂಧೀಜಿಯವರು ಸಂಪಾದಕರಾಗಿಯೂ **ಸ್ವಾಮಿ ಆನಂದರವರು** (ಪು. 1) ಕಾರ್ಯದರ್ಶಿಗಳಾಗಿಯೂ ಇಂಗ್ಲಿಷಿನಲ್ಲಿ 'ಯಂಗ್ ಇಂಡಿಯಾ', **ಗುಜರಾತಿನಲ್ಲಿ 'ನವಜೀವನ'** (ಪು. i), ಹಿಂದಿಯಲ್ಲಿ 'ನವಜೀವನ' ಈ ರೀತಿಯಾಗಿ ಮೂರು ವಾರಪತ್ರಿಕೆಗಳನ್ನು ಅಹಮದಾಬಾದಿನಲ್ಲಿ ಪ್ರಕಟಿಸುತ್ತಿದ್ದಾರೆ.

## ನಮ್ರತೆ: (ಪು. vi)

"ವಸಿಷ್ಠ ವಿಶ್ವಾಮಿತ್ರರ ಸಂವಾದದಲ್ಲಿ ಇದು ಸ್ಪಷ್ಟವಾಗಿದೆ. ಈಸಾಯಿ ಧರ್ಮವೂ ಇಸ್ಲಾಂ ಮತವೂ ಈ ಮಾತನ್ನು ಸಿದ್ಧಿಸುತ್ತವೆ."

ವಸಿಷ್ಠನು ವಿಶ್ವಾಮಿತ್ರನನ್ನು ಬ್ರಹ್ಮರ್ಷಿಯೆಂದು ಒಪ್ಪಿಗೊಳ್ಳಲು ವಿಶ್ವಾಮಿತ್ರನು ಹೀಗೆ ಹೇಳುತಾನ್ನೆ:

"ವಸಿಷ್ಠ, ವಸಿಷ್ಠ, ನೀನು ನನ್ನ ಗುರು, ನೀನು ನನ್ನ ಕಣ್ಣನ್ನು ತೆರೆದೆ. ನನಗೆ ಇಷ್ಟು ದಿನವೂ ಗೊತ್ತಿರಲಿಲ್ಲ—ಅಭಿಮಾನತ್ಯಾಗವೇ ಬ್ರಾಹ್ಮಣತ್ವವೆಂಬುದು..........."

**(ಗಿರೀಶಚಂದ್ರಘೋಷರ 'ತಪೋಬಲ' ನಾಟಕದ ಅನುವಾದ, ಶ್ರೀ ಎ. ಎನ್. ನರಸಿಂಹಯ್ಯನವರು ಮಾಡಿರುದು).**

ಈಸಾಯಿಯ ಧರ್ಮಗ್ರಂಥವಾದ ಬೈಬಲಿನಿಂದ ನಮ್ರತಾ ವಿಷಯಕವಾದ ಈ ವಾಕ್ಯಗಳು ಕಂಡುಬರುತ್ತವೆ:

ನಮ್ರತಾಶೀಲರೇ ಪುಣ್ಯವಂತರು, ಏಕೆಂದರೆ ಮುಂದೆ ಪ್ರಪಂಚದ ಅಧಿಕಾರವು ಅವರದು. (ಮ್ಯಾಥ್ಯೂ, v, ೫)

ಆದರೆ ನಿರಭಿಮಾನಿಗಳು ಜಗತ್ತಿನ ಅಧಿಕಾರವನ್ನು ಪಡೆದು, ಶಾಂತಿ ಸಾಗರದಲ್ಲಿ ಆತ್ಮತುಷ್ಟಿಯನ್ನು ಹೊಂದಲಿ.

(ಕೀರ್ತನೆಗಳು, xxxiii, ೧೧)

ನಿರಹಂಕಾರಿಗಳು ಧನ್ಯರು. ಏಕೆಂದರೆ ಸ್ವರ್ಗಸಾಮ್ರಾಜ್ಯವು ಅವರದು. (ಮ್ಯಾಥ್ಯೂ, v, ೩)

ಇಸ್ಲಾಂಮತದ ವೇದವಾದ ಕುರಾನಿನಿಂದ ನಮ್ರತಾ ವಿಷಯಕವಾದ ಈ ಕೆಳಗಿನ ವಾಕ್ಯಗಳು ಉಕ್ತವಾಗಿವೆ:

ಧರೆಯೊಳಗೆ ಮೆರೆದು ತಿರುಗಬೇಡ;
(ಅದರಿಂದ) ಇಳೆಯ ಸೀಳಲು, ಗಿರಿಯನೇರಲು ಶಕ್ಯವಲ್ಲ.

(iii, ೧೩೩)

ಲೋಕದಲ್ಲಿ ತಲೆಬಾಗಿ ನಡೆದು ಮೂಢರು ಗದರಿಸಿದರೆ 'ಶಾಂತಿರಸ್ತು' ಎನ್ನುವರೇ ಕರುಣಾಮಯನಾದ ಭಗವಂತನ ನಿಜವಾದ ಸೇವಕರು. (xxv, ೬೩)

ಜನರನ್ನು ನೋಡಿ ತಿರಸ್ಕಾರದಿಂದ ಮುಖವನ್ನು ಓರೆಮಾಡಬೇಡ; ಮೆಯ್ಯುಬ್ಬಿನಿಂದ ಮೆರೆದು ಲೋಕದಲ್ಲಿ ನಡೆಯಬೇಡ; ಅಹಂಕಾರಿಯಾದ ಜಂಭಗಾರರನ್ನು ಭಗವಂತನು ಪ್ರೀತಿಸುವುದಿಲ್ಲವೆನ್ನುವುದು ದಿಟ.

(xxxi, ೧೮)

ಸರಿಯಾದ ಮಾರ್ಗದಲ್ಲಿ ನಡೆ. ನಿನ್ನ ದನಿಯನ್ನು ತಗ್ಗಿಸು. ಕತ್ತೆಯು ಅರಚುವುದೇ ಕಠೋರತಮವಾದ ಸ್ವರವಲ್ಲವೆ?

(xxxi, ೧೯)

'ಸೂರದಾಸರು ಹೇಳುವಂತೆ': (ಪು. vii)

ಮೂಲಪದ್ಯವು

'ಮೋ ಸಮ ಕೌನ ಕುಟಿಲ ಖಲ ಕಾಮಿ।
ಜಿನ ತನು ದಿಯೋ ತಾಹಿ ಬಿಸರಾಯಿಾ ನಿಮಕಹರಾಮಿ॥'

ಎಂದಿದೆ.

ಪು. ೧. ಬನಿಯರು—ಉತ್ತರ ಹಿಂದೂಸ್ಥಾನದಲ್ಲಿ ವೈಶ್ಯರನ್ನು ಬನಿಯರೆಂದು ಕರೆಯುತ್ತಾರೆ.

ಪು. ೨. ಅಸಿಸ್ಟೆಂಟ್ ಪೊಲಿಟಿಕಲ್ ಏಜಂಟ್–ದೇಶೀಯ ಸಂಸ್ಥಾನಗಳಲ್ಲಿ ಹಿಂದೂಸ್ಥಾನದ ಸರಕಾರದವರು ಅಥವಾ ಪ್ರಾಂತಿಕ ಸರಕಾರದವರು ನಿಯಮಿಸಿರುವ ರಾಯಭಾರಿಗೆ ಪೊಲಿಟಿಕಲ್ ಏಜೆಂಟ್ ಎಂದೂ ಈತನ ಕೆಳಗಿನ ಅಧಿಕಾರಿಗೆ ಅಸಿಸ್ಟೆಂಟ್ ಪೊಲಿಟಿಕಲ್ ಏಜೆಂಟೆಂದೂ ಹೆಸರು.

ಪು. ೩. ಚಾತುರ್ಮಾಸ - ಈ ವ್ರತವನ್ನು ಆಷಾಢ ಶು. ೧೨ ಎಂದರೆ ಶಯನದ್ವಾದಶಿಯಿಂದ ಕಾರ್ತಿಕ ಶು. ೧೨ ಎಂದರೆ ಉತ್ಥಾನದ್ವಾದಶಿಯವರೆಗೆ ಪೂರ್ಣೋಪವಾಸ ಅರ್ಧೋಪವಾಸಮಾಡಿ ನಡೆಸುತ್ತಾರೆ.

ಪು. ೪. ಚಾಂದ್ರಾಯಣ–ಇದೂ ಒಂದುರೀತಿಯ ಉಪವಾಸವ್ರತ ಚಂದ್ರನು ವೃದ್ಧಿಯಾದಹಾಗೆ ಅಥವಾ ಕ್ಷಯಿಸಿದಹಾಗೆ ಆಹಾರವನ್ನು ಹೆಚ್ಚುಮಾಡುವುದೇ ಅಥವಾ ಕಡಿಮೆ ಮಾಡುವುದು ಇದನ್ನು ನಡೆಸುವ ರೀತಿ.

## ಗಾಂಧೀಜಿಯವರ ಜನ್ಮದಿನ (ಪು. ೫)

ದಾಕ್ಷಿಣಾತ್ಯರೀತಿಯಲ್ಲಿ ಎಣಿಸಿದರೆ ಗಾಂಧೀಜಿಯವರ ಜನ್ಮದಿನವು ಶಾಲಿವಾಹನಶಕ ೧೭೯೨ನೆಯ ಶುಕ್ಲ ಸಂವತ್ಸರ ಭಾದ್ರಪದ ಬಹುಳ ದ್ವಾದಶಿಯಾಗುತ್ತದೆ.

ಪು. ೮. 'ಆರಾಗವು'–ಆ ಹಾಡು 'ಲಲಿತ' ಛಂದಸ್ಸಿನದಾಗಿದ್ದಿತು.

ಪು. ೧೪. ನಿಷ್ಕುಲಾನಂದರ ಹಾಡು ಮೂಲದಲ್ಲಿ ಹೀಗಿದೆ:—

"ತ್ಯಾಗ ಟಕೇ ರೇ ವೈರಾಗ್ಯ ವಿನಾ ಕಲಿಯೇ
ಕೋಟಿ ಉಪಾಯರೇ "

ಪು. ೧೪. ಸಪ್ತಪದಿ—ವಧೂವರರು ಜೊತೆಗೆ ಏಳು ಹೆಜ್ಜೆಯನ್ನು ನಡೆದು ದಂಪತಿಪ್ರೇಮದಿಂದಿರಲು ಪ್ರಮಾಣಮಾಡುವ ಕರ್ಮ. ಇದಾದಮೇಲೆ ವಿವಾಹವು ಸಂಪೂರ್ಣವೂ ಅಚ್ಛೇದ್ಯವೂ ಆಗುತ್ತದೆ.

ಪು. ೧೪. ಕನ್ಸಾರ–ಗೋಧಿಯಲ್ಲಿ ಮಾಡಿದ ಒಂದು ತೆರನಾದ ಸಿಹಿಯಾದ ಪದಾರ್ಥ. ಸಪ್ತಪದಿಯಾದಮೇಲೆ ವಧೂವರರು ಇದನ್ನು ಒಬ್ಬರಿಗೊಬ್ಬರು ತಿನ್ನಿಸುತ್ತಾರೆ.

ಪು. ೨೭. ಯೂಕ್ಲಿಡ್ (ಕಾಲ, ಕ್ರಿ. ಪೂ ೩೨೭–೨೮೩)–ಈತನು ಈಜಿಪ್ಟಿನಲ್ಲಿರುವ ಅಲೆಕ್ಸಾಂಡ್ರಿಯಾ ನಗರದಲ್ಲಿ ಮೊದಲನೆಯ ಟಾಲೆಮಿಯು ಆಳುತ್ತಿದ್ದಾಗ ಗಣಿತವಿಶಾರದನೆಂದು ಹೆಸರು ಪಡೆದನು. ಪಾಶ್ಚಾತ್ಯರಲ್ಲಿ ರೇಖಾಗಣಿತವನ್ನು ಪ್ರಮೇಯಗಳ ರೂಪಕ್ಕಿಳಿಸಿ ಅದನ್ನು ಶಾಸ್ತ್ರವನ್ನಾಗಿ ಮಾಡಿದವನು ಈತನೇ. ಈಗ ಈ ಶಾಸ್ತ್ರಕ್ಕೇ ಈತನ ಹೆಸರು ಬಂದಿದೆ.

ಮೌಲ್ವಿ—ಮುಸಲ್ಮಾನ ಪಂಡಿತರು.

ಪು. ೩೦. ಸುಧಾರಕಪಂಥ—ಸಮಾಜಸುಧಾರಣೆಗಾಗಿ ಹೊರಟ ಮಂಡಲಿ.

## ರಾ ಮ ರ ಕ್ಷೆ : (ಪು ೫೨)

ರಾಮನಮೇಲಿನ ಸ್ತೋತ್ರಗಳಲ್ಲಿ ಒಂದು. ಈ ಸ್ತೋತ್ರಮಾಲೆಯಲ್ಲಿಯೇ ಈ ಪ್ರಸಿದ್ಧ ಸುಂದರಪದ್ಯವಿರುವುದು :

ಮಾತಾ ರಾಮೋ ಮತ್ಪಿತಾ ರಾಮಚಂದ್ರಃ
ಭ್ರಾತಾರಾಮೋ ಮತ್ಸಖಾ ರಾಘವೇಶಃ।

ಸರ್ವಸ್ವಂ ಮೇ ರಾಮಚಂದ್ರೋ ದಯಾಳೋ
ನಾನ್ಯಂ ದೈವಂ ನೈವಜಾನೇ ನ ಜಾನೇ ||

ಪು. ೫೩. ದ್ವಿಪದಿ—ಎರಡು ಪಾದವುಳ್ಳ ಪದ.

ಚೌಪದಿ—ನಾಲ್ಕು ಪಾದವುಳ್ಳ ಪದ್ಯ.

## ೨೧ ದಿವಸದ ಉಪವಾಸವ್ರತ: (ಪು. ೫೩)

ಈ ಉಪವಾಸವು ೧೯೨೪ನೆಯ ಸೆಪ್ಟಂಬರ್ ೧೮ನೆಯ ತಾರೀಖಿನಿಂದ ಅಕ್ಟೋಬರು ೬ನೆಯ ತಾರೀಖಿನವರೆಗೆ ನಡೆಯಿತು. ಇದಕ್ಕೆ ಕಾರಣವೇನೆಂದರೆ, ಅಮೆಥಿ, ಸಂಭಾಲ್, ಗುಲ್ಬರ್ಗ, ಈ ಮೂರು ಸ್ಥಳಗಳಲ್ಲಿಯೂ ಹಿಂದೂ ಮುಸಲ್ಮಾನರ ಕಲಹಗಳು ಬಹಳ ಜಾಸ್ತಿಯಾಗಿ ಗಲಭೆಗಳುಂಟಾಗಿ ಕೆಲವರಿಗೆ ಪ್ರಾಣಾಪಾಯವಾಯಿತಲ್ಲದೆ ಕೆಲವು ಪುಂಡರು ಎಷ್ಟೋಜನರ ಮನೆಮಠಗಳನ್ನು ಲೂಟಿಮಾಡಿ ಹಿಂದೂ ಸ್ತ್ರೀಯರ ಪಾತಿವ್ರತ್ಯವನ್ನು ಭಂಗಮಾಡಿದರು. ಇದರಿಂದ ಗಾಂಧೀಜಿಯವರಿಗೆ ಬಹಳ ಸಂಕಟವುಂಟಾಗಿ ಆ ಸಂಕಟವನ್ನು ತಡೆಯಲಾರದೆ ೨೧ ದಿನ ಘೋರ ಉಪವಾಸವ್ರತವನ್ನು ದಿಲ್ಲಿಯಲ್ಲಿ ಕೈಗೊಂಡರು. ಕೂಡಲೇ ರಾಷ್ಟ್ರಮುಖಂಡರೆಲ್ಲರೂ ಐಕಮತ್ಯದ ಸಲುವಾಗಿ ಅಲ್ಲಿ ಸಭೆ ಕೂಡಿ ಹಿಂದೂ ಮುಸಲ್ಮಾನರ ಪರಸ್ಪರ ವೈಷಮ್ಯಗಳನ್ನು ತಪ್ಪಿಸಲೋಸುಗವಾಗಿ ಅನೇಕ ನಿರ್ಣಯಗಳನ್ನು ಮಾಡಿದರು. ಆದರಿಂದ ಆ ಕಾಲಕ್ಕೆ ಮಾತ್ರ ಗಲಭೆಯು ಸ್ವಲ್ಪ ಅಡಗಿದಂತಾಯಿತು.

## ಪಂಡಿತ ಮದನಮೋಹನ ಮಾಳವೀಯರು: (ಪು. ೫೩)

ಈಗಿನ ರಾಷ್ಟ್ರಸೇವಕರಲ್ಲಿ ಭೀಷ್ಮರಂತೆ ವಯೋವೃದ್ಧರಾಗಿ ತನುಮನಧನಗಳನ್ನರ್ಪಿಸಿ ಅವಿಚ್ಛಿನ್ನವಾದ ದೇಶಸೇವೆಯಲ್ಲಿ ನಿರತರಾಗಿರುವರಿವರು. ೧೮೮೬ ರಿಂದಲೂ ರಾಷ್ಟ್ರಮಹಾಸಭೆಯಲ್ಲಿ ಕೆಲಸಮಾಡುತ್ತಿರುವರು. ಕಾಶಿಯ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದವರಿವರೇ. ಪೂಜ್ಯ ಗಾಂಧೀಜಿಯವರು ಮಾಳವೀಯರನ್ನು ಧರ್ಮಾತ್ಮರೆಂದೂ

ಹಿಂದುಸ್ಥಾನದ ಭಿಕ್ಷುಕಾಗ್ರೇಸರೆಂದೂ ಕರೆದಿರುವರು. ಇವರು ಲಾಹೋರಿನಲ್ಲಿ ೧೯೦೯ರಲ್ಲಿ ನಡೆದ ರಾಷ್ಟ್ರಸಭೆಗೂ ೧೯೧೮ರಲ್ಲಿ ದಿಲ್ಲಿಯಲ್ಲಿ ನಡೆದ ರಾಷ್ಟ್ರಮಹಾಸಭೆಗೂ ಅಧ್ಯಕ್ಷರಾಗಿದ್ದರು. ವೈದಿಕ ಶಿರೋಮಣಿಗಳೂ ರಾಷ್ಟ್ರಸೇವಾಧುರಂಧರರೂ ಆದ ಇವರ ಮಾರ್ಗವು ಹಿಂದುಗಳಿಗೆ ಸರ್ವದಾ ಮಾರ್ಗದರ್ಶಿಯಾಗಿರುವುದು.

**ಜ್ಞಾನಸ್ನಾನ**: (ಪು. ೫೫)

('ಯೇಸುಕ್ರಿಸ್ತ' ನೋಡಿ)

**ಬ್ಯಾರಿಸ್ಟರು**: (ಪು ೫೯)

ಸೀಮೆಗೆ ಹೋಗಿ ನ್ಯಾಯಶಾಸ್ತ್ರವನ್ನು ಓದಿ ಅದರಲ್ಲಿ ತೇರ್ಗಡೆಯಾದಮೇಲೆ 'ಬ್ಯಾರಿಸ್ಟರಾ' ಎಂಬ ಹೆಸರು ಬರುತ್ತದೆ. ನಮ್ಮೂರಿನಲ್ಲಿ ವಕೀಲರೆನ್ನಿಸಿಕೊಳ್ಳುವವರಿಗೆ ಈ ಪರೀಕ್ಷೆಯಲ್ಲಿ ತೇರ್ಗಡೆಯಾದರೆ 'ಬ್ಯಾರಿಸ್ಟರ್' ಎಂದೆನ್ನುತ್ತಾರೆ.

**ಪು.** ೬೧—ಅಡ್ಮಿನಿಸ್ಟ್ರೇಟರ್—ದೇಶೀಯ ಸಂಸ್ಥಾನದ ರಾಜನು ಚಿಕ್ಕವನಾಗಿರುವಾಗಲಾಗಲಿ ಅಥವಾ ಆಡಳಿತ ನಡೆಸಲು ಯೋಗ್ಯನಾಗಿಲ್ಲದಿರುವುದರಿಂದಾಗಲಿ ಬ್ರಿಟಿಷ್ ಸರಕಾರದವರು ಆ ಸಂಸ್ಥಾನವನ್ನು ಆಳುವುದಕ್ಕೆ ನಿಯಮಿಸಿರುವ ಅಧಿಕಾರಿ.

**ಪು.** ೬೫—ಮೋಷಬನಿಯ—ಬನಿಯರಲ್ಲಿ ಒಂದು ಕುಲವಿಶೇಷ.

**ಪು.** ೭೧—**ಕೆಂಪುಸಮುದ್ರ**—ಇದು ಹಿಂದೂಸ್ಥಾನದಿಂದ ಸೀಮೆಗೆ ಹೋಗುವಾಗ ಅರಬ್ಬೀಸಮುದ್ರವನ್ನು ಹಾಯ್ದು ಬೇಬಲ್ ಮ್ಯಾಂಡೆಬ್ ಜಲಸಂಧಿಯನ್ನು ದಾಟಿದರೆ ಸಿಕ್ಕುತ್ತದೆ. ಇದು ಅರಬ್ಬೀದೇಶಕ್ಕೂ ಈಜಿಪ್ಟಿಗೂ ಮಧ್ಯೆ ಇದೆ. ಇದನ್ನು ದಾಟಿ ಇದರ ಉತ್ತರಭಾಗಕ್ಕೆ ಹೋದರೆ ಸೂಯಸ್ ಕಾಲುವೆಯು ಸಿಕ್ಕುತ್ತದೆ. ಈ ಕಾಲುವೆಯು ಕೆಂಪುಸಮುದ್ರವನ್ನೂ ಕಪ್ಪುಸಮುದ್ರವನ್ನೂ ಸೇರಿಸುತ್ತದೆ.

**ಪು.** ೭೭—ಬಿಸ್ಕೇಕೊಲ್ಲಿ—ಇದು ಫ್ರಾನ್ಸ್‌ದೇಶದ ಪಶ್ಚಿಮಕ್ಕಿದೆ. ಸುಂಟರಗಾಳಿಗೂ ಹಡಗುಗಳು ಒಡೆದುಹೋಗುವುದಕ್ಕೂ ಪ್ರಸಿದ್ಧ.

ಪು. ೭೪–ಸೌಥಾಂಪ್ಟನ್–ಇಂಗ್ಲೆಂಡಿನ ದಕ್ಷಿಣದಲ್ಲಿರುವ ದೊಡ್ಡ ರೇವುಪಟ್ಟಣ.

ಪು. ೭೫—'ಸರ್'—ಸ್ವಾಮಿ.

## ಪೌಂಡು : (ಪು. ೭೫)

ಈಗ ಒಂದು ಪೌಂಡಿಗೆ ರೂ ೧೩–೫–೪. ಮೊದಲು ೧೫ ರೂಪಾಯಿಯಾಗಿದ್ದಿತು. ಯುದ್ಧವಾದ ಸ್ವಲ್ಪ ದಿವಸಗಳಮೇಲೆ ಒಂದು ಪೌಂಡಿಗೆ ಹತ್ತುರೂಪಾಯಿಗಳಿದ್ದುವು.

## ರಣಜಿತ್ ಸಿಂಗ್ : (ಪು. ೮೪)

ಇವರು ನವಾನಗರದ 'ಜಾಂ' ಸಾಹೇಬರು (ದೊರೆಗಳು). ಇವರು ಸುಪ್ರಸಿದ್ಧ 'ಕ್ರಿಕೆಟ್' ಆಟಗಾರರು. ವಿಲಾಯತಿಯಲ್ಲಿ ಇವರ 'ಕ್ರಿಕೆಟ್' ಆಟವನ್ನು ನೋಡಿ ಅಲ್ಲಿಯವರೆಲ್ಲರೂ ಇವರನ್ನು ಬಹಳ ಪ್ರೀತಿಸುತ್ತಾರೆ

## ದಾದಾಭಾಯಿ ನವರೋಜಿ : (ಪು. ೭೪)

ಈ ವೃದ್ಧ ಪಾರಸೀ ಪಿತಾಮಹರು ಗತಿಸಿ ಸುಮಾರು ಹನ್ನೆರಡು ವರ್ಷಗಳಾಯಿತು. ತಾವು ಬದುಕಿರುವವರಿಗೂ ದೇಶಸೇವೆಗೆ ತಮ್ಮ ತನುಮನಧನಗಳನ್ನು ಅರ್ಪಿಸಿದರು. ಇವರಿಗೆ ಸಾಯುವಾಗ ಸುಮಾರು ೯೨ ವರ್ಷ ವಯಸ್ಸು. ರಾಜಕೀಯ ಮುಖಂಡರಲ್ಲಿ ಮೊದಲನೆಯವರೆಂದರೆ ಈ ಮಹನೀಯರೇ. ಇವರು ಹಿಂದೂದೇಶಕ್ಕೆ ಮಾಡಿರುವ ಉಪಕಾರಗಳನ್ನು ವರ್ಣಿಸಲು ಕಷ್ಟ. ಇವರ ಸ್ವಾರ್ಥತ್ಯಾಗಕ್ಕೋಸ್ಕರವಾಗಿಯೇ ಇವರಿಗೆ ಮೂರುಸಲ ರಾಷ್ಟ್ರಮಹಾಸಭೆಯ ಅಧ್ಯಕ್ಷತೆಯನ್ನು ದೇಶವು ಒಪ್ಪಿಸಿತು. ನಮ್ಮ ಜನರಲ್ಲಿ ಸ್ವಾತಂತ್ರ್ಯದ ಬೀಜವನ್ನು ನೆಟ್ಟ ವೀರನೆಂದರೆ ಈತನು. ಇವರು ಪಾರ್ಲಿಮೆಂಟಿನ ಸದಸ್ಯರಾಗಿದ್ದರು. ಆ ಕಾಲದಲ್ಲಿ ಭಾರತೀಯರು ಪಾರ್ಲಿಮೆಂಟಿನ ಸದಸ್ಯರಾಗ

ಬೇಕಾದರೆ ಬಹು ಕಷ್ಟವಿದ್ದಿತು. ಅಂತಹ ಸಮಯದಲ್ಲಿ ಇವರು ಅಲ್ಲಿ ಸದಸ್ಯರಾಗಿದ್ದುಕೊಂಡು ನಮ್ಮ ಜನರ ಪರವಾಗಿ ಬಹಳವಾಗಿ ಹೊಡೆದಾಡಿದರು.

**ಬೆಂಥಮ್** : (ಪು. ೭೯)

ಕಾಲ: ೧೭೪೮–೧೮೩೨. ಈತನು ತನ್ನ ಬರವಣಿಗೆಗಳ ಪ್ರಭಾವದಿಂದ ಆಂಗ್ಲೇಯಸಮಾಜದಲ್ಲಿ, ಸಂಸ್ಕೃತಿಯಲ್ಲಿ, ಶಿಕ್ಷಣ ವಿಧಾನದಲ್ಲಿ, ದರ್ಶನಶಾಸ್ತ್ರದಲ್ಲಿ ಮಹತ್ವದ ಸುಧಾರಣೆಗಳಾಗಲು ಕಾರಣನಾದನು. ಈತನೇ 'ಅರ್ಥವಾದ' ಅಥವಾ 'ಉಪಯೋಗವಾದ'ದ ಕರ್ತೃವೆಂದು ಹೇಳಬಹುದು.

**ಉಪಯೋಗವಾದ (ಅರ್ಥವಾದ)** (ಪು. ೭೯)

ಇದನ್ನು ಇಂಗ್ಲಿಷಿನಲ್ಲಿ 'ಯುಟಿಲಿಟೇರಿಯನಿಸ್ಮ್' ಎಂದು ಕರೆಯುತ್ತಾರೆ. ಮನುಷ್ಯನು ಮಾಡುವ ಕಾರ್ಯಗಳ ಧರ್ಮಾಧರ್ಮವು ಇವುಗಳಿಂದ ಜನಸಾಮಾನ್ಯಕ್ಕೆ ಉಂಟಾಗುವ ಉಪಯೋಗದಿಂದ ಅಳೆಯಲ್ಪಡಬೇಕು. ಮೂಢತನದಿಂದ ಪ್ರೇರಿತವಾದ ಸ್ವಾರ್ಥದಿಂದ ಸಮಾಜಕ್ಕೆ ಹಾನಿಯುಂಟಾಗುವುದೇ ಹೊರತು ಪರಾಮರ್ಶಪೂರ್ವಕವಾದ ಸ್ವಾರ್ಥತೆಯಿಂದಲ್ಲ. ಆದಷ್ಟು ಜನರಿಗೆ ಸಾಧ್ಯವಾದಷ್ಟು ಒಳಿತನ್ನೆಸಗುವುದೇ ಮನುಷ್ಯರ ಪರಮಧರ್ಮ. ಕೆಲಸಗಳನ್ನಾಗಲಿ ಕಾಯಿದೆಗಳನ್ನಾಗಲಿ ಒಳ್ಳೆಯವು ಕೆಟ್ಟವೆಂದು ನಿರ್ಧರಿಸುವಾಗ ಈ ದೃಷ್ಟಿಯಿಂದಲೇ ಅವುಗಳ ಪರಿಣಾಮವನ್ನಳೆದು ನಿರ್ಧರಿಸಬೇಕು. ಇವೇ ಈ ಪಂಗಡದವರ ಮುಖ್ಯ ತತ್ವಗಳು.

ಇವರು ಯಾವ ಉದ್ದೇಶದಿಂದ ಕಾರ್ಯಗಳು ನಡೆಸಲ್ಪಡುವುವೋ ಅವುಗಳಿಗಿಂತ ಕಾರ್ಯಗಳ ಫಲಕ್ಕೇ ಹೆಚ್ಚು ಪ್ರಾಧಾನ್ಯವನ್ನು ಕೊಡುತ್ತಾರೆ.

**ಯೇಸುಕ್ರಿಸ್ತ** : (ಪು. ೮೩)

ಈಸಾಯೀ (ಕ್ರೈಸ್ತ) ಮತಸ್ಥಾಪಕ. ಕ್ರಿಸ್ತಶಕೆಯು ಈತನ ಜನ್ಮದಿನದಿಂದಲೇ ಆರಂಭವೆಂದು ಎಣಿಕೆ. ಈತನು ಪ್ಯಾಲೆಸ್ಟೈನ್ ದೇಶದ

ಬೆತ್ಲೆಹೆಮ್' ಎಂಬ ಊರಿನಲ್ಲಿ ೧೯೩೩ ವರ್ಷಗಳ ಹಿಂದೆ ಜನ್ಮವೆತ್ತಿದನು. ಈತನ ತಾಯಿಯಾದ ಮೇರಿಯು ಜೋಸೆಫ್ ಎಂಬಾತನ ಪತ್ನಿ. ಜಗತ್ತಿನ ಪಾಪದ ಹೊರೆಯನ್ನು ಕಳೆಯುವುದಕ್ಕಾಗಿ ಈತನು ಪುರುಷ ಸಂಪರ್ಕವಿಲ್ಲದೆ ಮೇರಿಯ ಗರ್ಭದಲ್ಲಿ ಜನಿಸಿದನೆಂದು ಈಸಾಯಿಗಳು ನಂಬುತ್ತಾರೆ. ಇದರಿಂದಲೇ ಈತನ ತಾಯಿಗೆ ವರ್ಜಿನ್ ಮೇರಿ (ಪವಿತ್ರ ಕನ್ಯೆ) (ಪು. ೧೩೬) ಯೆಂದು ಹೆಸರು. ಈಕೆಗೂ ದೇವರೇ ತಂದೆ ಯೆಂದು ಪ್ರತೀತಿ.

ಈತನಿಗೆ ಜಾನ್ ಎಂಬ ಮಹಾತ್ಮನಿಂದ ಯೆಹೂದ್ಯರ ಪದ್ಧತಿಯಂತೆ ಜ್ಞಾನಸ್ನಾನ (ಬ್ಯಾಪ್ಟಿಸ್ಮ್) ವಾಯಿತು. ಈತನು ಬಾಲ್ಯಯೌವನಗಳಲ್ಲಿ ಆತ್ಮಪರಾಮರ್ಶದಲ್ಲಿ ಮಗ್ನನಾಗಿದ್ದನು. ಈತನು ಒಂದುಸಲ ನಾಲ್ವತ್ತು ದಿನದ ಉಪವಾಸ ಮಾಡಿದ ತರುವಾಯ ಅರಿಷಡ್ವರ್ಗವು ಈತನ ಹೃದಯವನ್ನಾವರಿಸಲು ಅವುಗಳೊಡನೆ ಹೋರಾಡಿ ಜಯಶೀಲನಾದನು. ಹೀಗೆ ತನ್ನ ಜೀವನದುದ್ದೇಶಕ್ಕೆ ಸಿದ್ಧನಾಗಿ ಸುತ್ತುಮುತ್ತಲಿನ ದೇಶದಲ್ಲಿ ಜನರಿಗೆ ತನ್ನ ತತ್ವಗಳನ್ನುಪದೇಶಿಸುತ್ತಾ ಸಂಚರಿಸುತ್ತಿದ್ದನು. ಹನ್ನೆರಡು ಜನ ಶಿಷ್ಯರು ಈತನ ಬಳಿ ಸೇರಿದರು.

ಈತನು ಬೋಧಿಸುತ್ತಿದ್ದ ತತ್ವಗಳನ್ನು ಕೆಲವರು ಅವಲಂಬಿಸಿದರು. ಇತರರು ಇವನು ಅವತಾರಪುರುಷನಲ್ಲವೆಂದೂ ಯೆಹೂದ್ಯರಿಗೆ ದೊರೆಯಾಗುವುದೇ ಇವನ ಉದ್ದೇಶವೆಂದೂ ಈತನ ಮೇಲೆ ತಪ್ಪು ಹೊರಿಸಿ ಈತನನ್ನು ಪ್ಯಾಲೆಸ್ಟೈನಿನಲ್ಲಿ ರೋಮನ್ ಚಕ್ರಾಧಿಪತ್ಯದ ಕ್ಷತ್ರಪನಾದ ಪೈಲೇಟನ ಬಳಿಗೆ ಶಿಕ್ಷೆಗಾಗಿ ಎಳೆತಂದರು. ಪೈಲೇಟನು ಈತನನ್ನು ಸಿಲುಬೆಗೆ ಹಾಕಬೇಕಾಗಿ ಬಂದಿತು.

ಈತನು ಹೀಗೆ ತನ್ನ ಪ್ರಾಣವನ್ನು ಬಲಿಕೊಟ್ಟುದರಿಂದ ಈತನ ಭಕ್ತರ ಪಾಪವು ಪರಿಹಾರವಾಗುವುದೆಂದು ಈಸಾಯಿಗಳ ನಂಬಿಕೆ.

'ದಿ ಸರ್ಮನ್ ಆನ್ ದಿ ಮೌಂಟ್' (ಯೇಸುವು ಒಂದು ಗುಡ್ಡದ ಮೇಲೆ ಮಾಡಿದ ಉಪದೇಶ) (ಪು. ೧೧೯) ನಲ್ಲಿ ಈತನು ಸ್ಥಾಪಿಸಿದ ಧರ್ಮದ ಮುಖ್ಯ ತತ್ವಗಳು ಅಡಕವಾಗಿವೆ. ಜನರು ನಮ್ರತೆಯುಳ್ಳವರಾಗಿಯೂ ಸತ್ಯಸಂಧರಾಗಿಯೂ ದಯಾಪರರಾಗಿಯೂ ಭಗವದ್ಧ್ಯಾನ

ಪರರಾಗಿಯೂ ಶತ್ರು ಮಿತ್ರರೆಂಬ ಭೇದವಿಲ್ಲದೆ ಎಲ್ಲರಲ್ಲಿಯೂ ಪ್ರೇಮ ವಿಟ್ಟವರಾಗಿಯೂ ಅಹಿಂಸಾಪರರಾಗಿಯೂ ಜನಸೇವಾನಿರತರಾಗಿಯೂ ಇರಬೇಕೆಂಬುದೇ ಈ ಉಪದೇಶದ ಸಾರಾಂಶ.

ಈಸಾಯಿಗಳ ಮುಖ್ಯ ಧರ್ಮಗ್ರಂಥಕ್ಕೆ ಬೈಬಲ್ (ಪು. ೧೧೯) ಎಂದು ಹೆಸರು. ಇದರಲ್ಲಿ ಪೂರ್ವಾರ್ಧ (ಓಲ್ಡ್ ಟೆಸ್ಟಮೆಂಟ್‌–ಪ್ರಾಚೀನವೇದ) ಮತ್ತು ಉತ್ತರಾರ್ಧ (ನ್ಯೂ ಟೆಸ್ಟಮೆಂಟ್‌–ನವೀನವೇದ) ಎಂಬ ಎರಡು ಭಾಗಗಳಿವೆ.

ಜೆನಿಸಿಸ್ (ಸೃಷ್ಟಿಕ್ರಮ) (ಪು.೧೧೯) ಎಂಬುದು ಪೂರ್ವಾರ್ಧದ ಮೊದಲನೆಯ ಭಾಗ. ಇದರಲ್ಲಿ ದೇವರು ಪ್ರಪಂಚವನ್ನೂ ಪ್ರಾಣಿ ರಾಶಿಯನ್ನೂ ಮನುಷ್ಯನನ್ನೂ ಸೃಷ್ಟಿಸಿದುದು ಮುಂತಾದುವು ವರ್ಣಿತ ವಾಗಿವೆ.

'ನಂಬರ್ಸ್' (ಸಂಖ್ಯೆಗಳು) (ಪು. ೧೧೯) ಎಂಬ ಭಾಗದಲ್ಲಿ ಯೆಹೂದ್ಯ ಜನಾಂಗದ ಬೇರೆಬೇರೆ ಪಂಗಡಗಳ ಜನಸಂಖ್ಯೆಯು ಕೊಡ ಲ್ಪಟ್ಟಿದೆ. ಯೆಹೂದ್ಯಧರ್ಮದ ತತ್ತ್ವಗಳು ಇದರಲ್ಲಿಯೂ ಇದರ ಮುಂದಿನ ಭಾಗದಲ್ಲಿಯೂ ವರ್ಣಿತವಾಗಿವೆ.

ಬೈಬಲಿನ ಉತ್ತರಾರ್ಧದಲ್ಲಿ ಯೇಸುವಿನ ನಾಲ್ಕು ಜೀವನ ಚರಿತೆ ಗಳೂ ಈತನ ಶಿಷ್ಯರಾದ ಪಾಲ್ ಮತ್ತು ಜಾನರ ಉಪದೇಶಗಳೂ ಇವೆ.

ಜ್ಞಾನಸ್ನಾನ (ಪು. ೨೧೨)—ಈ ಕರ್ಮವು ಯೆಹೂದ್ಯರಲ್ಲಿಯೂ ಈಸಾಯಿಗಳಲ್ಲಿಯೂ ಉಂಟು. ಪವಿತ್ರಜಲಪ್ರೋಕ್ಷಣೆಯಿಂದ ಪೂತ ನಾಗುವುದೇ ಇದರ ಉದ್ದೇಶ. ಹುಟ್ಟಿದ ಮಕ್ಕಳಿಗೆಲ್ಲಾ ಆದಷ್ಟು ಜಾಗ್ರತೆಯಾಗಿ ಈ ಕರ್ಮವಾಗಬೇಕು. ಇತರ ಮತಸ್ಥರು ಈಸಾಯಿ ಮತವನ್ನವಲಂಬಿಸುವುದಕ್ಕೂ ಈ ಕರ್ಮವೇ ದಾರಿ. ಜ್ಞಾನಸ್ನಾನಕಾಲ ದಲ್ಲಿ ಸಾಮಾನ್ಯವಾಗಿ ನಾಮಕರಣವೂ ಆಗುತ್ತದೆ.

ಈಸಾಯಿಗಳಲ್ಲಿ ರೋಮನ್ ಕ್ಯಾಥೊಲಿಕರೆಂದೂ ಪ್ರಾಟಸ್ಟೆಂಟ ರೆಂದೂ ಎರಡು ಪ್ರಧಾನಶಾಖೆಗಳುಂಟು. ರೋಮಿನಲ್ಲಿರುವ ಪೋಪರ ಮತಕ್ಕೆ ಸೇರಿದವರೇ ರೋಮನ್ ಕ್ಯಾಥೊಲಿಕರು. ಇವರ ಅಧಿಕಾರಕ್ಕೊಳಗಾಗದಿರುವ ಈಸಾಯಿಗಳೇ 'ಪ್ರಾಟೆಸ್ಟೆಂಟ'ರು.

ಅವರಲ್ಲಿರುವ ಅನೇಕ ಪಂಗಡಗಳಲ್ಲಿ ಒಂದಕ್ಕೆ ಸೇರಿದವರಿಗೆ 'ಪ್ಯೂರಿಟನ' (ಪು. ೧೦೩) ರೆಂದು ಹೆಸರು. ಇವರನ್ನು 'ವೀರವೇದಿ' ಗಳೆಂದು ಕರೆಯಬಹುದು. ಏಕೆಂದರೆ ಬೈಬಲಿನಲ್ಲಿ ಉಕ್ತವಾಗದೆ ಈಸಾಯಿಪುರೋಹಿತರಿಂದ ಆಚರಣೆಗೆ ತರಲ್ಪಟ್ಟ ಕರ್ಮಗಳನ್ನೆಲ್ಲಾ ತೊಲಗಿಸಿ ಶುದ್ಧ ಈಸಾಯಿಧರ್ಮವನ್ನು ಆಚರಿಸುವುದೇ ಇವರ ಧ್ಯೇಯ. ಇವರು ಧರ್ಮಾಚರಣೆಯಲ್ಲಿಯೂ ನೈತಿಕ ವಿಷಯಗಳಲ್ಲಿಯೂ ಬಹು ಕಟ್ಟಿನವರು. ಇವರು ಆಟಪಾಟಗಳನ್ನು ಮೊದಲುಗೊಂಡು ಸಕಲ ಐಹಿಕಸುಖಗಳನ್ನೂ ನಿಷೇಧಿಸಿ ಲಲಿತಕಲಾಶತ್ರುಗಳಾಗಿ ಮನುಷ್ಯ ಜೀವನವನ್ನೇ ನೀರಸವಾಗಿ ಮಾಡತೊಡಗಿದುದರಿಂದ ಇದಕ್ಕೆ ವಿರೋಧಿಗಳು ಹೆಚ್ಚಾಗಿ ಕಟ್ಟಕಡೆಗೆ ಇದು ಕ್ಷೀಣಸ್ಥಿತಿಗೆ ಬಂದಿತು. ಗಾಂಭೀರ್ಯ, ಸತ್ವ, ಸ್ಥೈರ್ಯ, ಈ ಗುಣಗಳು ಆಂಗ್ಲೇಯ ಜನಜೀವನದಲ್ಲಿ ವೃದ್ಧಿಹೊಂದಲು ಇದು ಕಾರಣವಾಯಿತು.

**ಪೈಥಾಗೊರಾಸ್.** (ಪು. ೮೩)

ಈತನು ಒಬ್ಬ ಗ್ರೀಕ್ ದೇಶದ ತತ್ವಜ್ಞಾನಿ. ಕ್ರಿಸ್ತಪೂರ್ವ, ಸು. ೫೫೦—೫೦೦ರಲ್ಲಿ ಜೀವಿಸುತ್ತಿದ್ದನು. ಜ್ಞಾನಾರ್ಜನೆಗಾಗಿ ಈಜಿಪ್ಟ್ ಮತ್ತು ಏಷ್ಯಾಖಂಡದಲ್ಲಿ ಸಂಚರಿಸಿದನು. ತಾನು ಕಾಲಜ್ಞಾನಿಯೆಂದೂ ತನ್ನ ಪೂರ್ವಜನ್ಮಗಳೆಲ್ಲಾ ತನಗೆ ಜ್ಞಾಪಕವೆಂದೂ ಹೇಳುತ್ತಿದ್ದನು. ಈತನಿಗೆ ಪರಕಾಯಪ್ರವೇಶದಲ್ಲಿ ನಂಬಿಕೆಯಿದ್ದಿತು. ಈತನು ಸಂಗೀತಶಾಸ್ತ್ರದ ವಿಚಾರವಾಗಿಯೂ ಬರೆದಿದ್ದಾನೆ. ಈತನ ಶಿಷ್ಯಸಂಘದವರು ಮೌನವ್ರತವನ್ನಾಚರಿಸಿ ವಿಶೇಷ ಸಂಕೇತಗಳನ್ನಿಟ್ಟುಕೊಂಡಿದ್ದರು.

**ಪು. ೮೭**—'ಟರ್ಮ್'—ಕ್ಲುಪ್ತಕಾಲ

**ಪು. ೮೭**—'ಪಿಯಾನೋ'—ವಾದ್ಯವಿಶೇಷ

**ಪು. ೮೭—ಪಿಟ್, ವಿಲಿಯಮ್** : (ಕಾಲ ೧೭೦೮—೧೭೭೮) ಈತನು ಇಂಗ್ಲೆಂಡಿನ ಅತ್ಯಂತ ಪ್ರಸಿದ್ಧ ಪ್ರಧಾನಮಂತ್ರಿಗಳಲ್ಲೊಬ್ಬನು. ಈತನ ವಾಕ್ಪಟುತ್ವವು ಅಸಾಧಾರಣವಾಗಿದ್ದಿತು. ಈತನ ಭಾಷಣಗಳು ಇಂದು

ಕೂಡ ಆಂಗ್ಲೀಯಭಾಷಣಕಲಾಭ್ಯಾಸಿಗಳಿಗೆ ಆದರ್ಶಸ್ವರೂಪವಾಗಿವೆ. ಈತನು ರಾಜಮನ್ನಣೆಹೊಂದಿ 'ಅರ್ಲ್ ಆಫ್ ಚಾಥಮ್' ಎಂಬ ಬಿರುದನ್ನು ಪಡೆದನು. ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಅಮೆರಿಕದ ವಿಷಯವಾಗಿ ಚರ್ಚೆಯಾಗುತ್ತಿರಲು ತಾನು ಮುಪ್ಪಿನಲ್ಲಿದ್ದು ಕಾಹಿಲೆಯಿಂದ ಅಶಕ್ತನಾಗಿದ್ದರೂ ಒಂದು ಕುರ್ಚಿಯಲ್ಲಿ ಹೊರಿಸಿಕೊಂಡು ಹೋಗಿ ಬ್ರಿಟಿಷರು ಅಮೆರಿಕನರಿಗೆ ಕಿರುಕುಳವನ್ನು ಕೊಟ್ಟು ಅವರನ್ನು ಎದುರು ಹಾಕಿಕೊಳ್ಳಕೂಡದೆಂದು ಪಾರ್ಲಿಮೆಂಟಿನಲ್ಲಿ ಅಮೋಘವಾದ ಭಾಷಣವನ್ನು ಮಾಡುತ್ತಿರುವಲ್ಲಿ ಆ ಮಹದಾಯಾಸದಿಂದ ಎಚ್ಚರದಪ್ಪಿ ಮನೆಗೆ ಬಂದು ಮರಣಹೊಂದಿದನು.

ಪು. ೯೧—ಆಕ್ಸ್‌ಫರ್ಡ್, ಕೇಂಬ್ರಿಡ್ಜ್—ಇಂಗ್ಲೆಂಡಿನ ಅತ್ಯಂತ ಪುರಾತನ ಮತ್ತು ಪ್ರಸಿದ್ಧ ವಿಶ್ವವಿದ್ಯಾನಿಲಯಗಳಿರುವ ಸ್ಥಳಗಳು.

## ಸರ್ ಎಡ್ವಿನ್ ಆರ್ನಾಲ್ಡ್ : (ಪು. ೧೦೦)

ಕಾಲ: ಕ್ರಿ. ಶ. ೧೮೩೨—೧೯೦೪. ಇವರು ಪೌರ್ವಾತ್ಯ ಧರ್ಮಗ್ರಂಥಗಳನ್ನೂ ಸಾಹಿತ್ಯಗಳನ್ನೂ ಅಭ್ಯಸಿಸಿ ಅವುಗಳಲ್ಲಿ ಹಲವು ಭಾಗಗಳನ್ನು ಆಂಗ್ಲಭಾಷೆಗೆ ಕವಿತೆಯಾಗಿ ಪರಿವರ್ತಿಸಿ ಪಂಡಿತೋತ್ತಮರೆಂದೂ ಕವಿವರ್ಯರೆಂದೂ ಹೆಸರು ಪಡೆದರು.

'ಲೈಟ್ ಆಫ್ ಏಷ್ಯಾ' (ಏಷ್ಯಾದ ಜ್ಯೋತಿ) (ಪು. ೧೧೮) ಎಂಬುದು ಇವರು ಬರೆದ ಬುದ್ಧಭಗವಾನನ ಜೀವನಚರಿತೆ. ಇದೇ ರೀತಿಯಾಗಿ 'ಪ್ರಪಂಚದ ಜ್ಯೋತಿ' ಎಂಬ ಹೆಸರಿನಿಂದ ಯೇಸುಕ್ರಿಸ್ತನ ಇತಿಹಾಸವನ್ನು ಬರೆದರು. 'ದಿ ಸಾಂಗ್ ಸೆಲೆಸ್ಟಿಯಲ್' ಎಂಬುದಾಗಿ ಇವರು ಭಗವದ್ಗೀತೆಯನ್ನು ಇಂಗ್ಲಿಷ್ ಪದ್ಯರೂಪದಲ್ಲಿ ಅನುವಾದಿಸಿದ್ದಾರೆ. ಇವುಗಳ ಜೊತೆಗೆ 'ಹಿತೋಪದೇಶ', 'ಚೌರಪಂಚಾಶಿಕ' ಮುಂತಾದುವುಗಳನ್ನೂ ಭಾಷಾಂತರಿಸಿದ್ದಾರಲ್ಲದೆ ಡಾಲ್‌ಹೌಸಿ ಕಾಲದ ಹಿಂದೂಸ್ಥಾನದ ಚರಿತ್ರೆಯನ್ನೂ ಬರೆದಿದ್ದಾರೆ. ಇವರು ಸಿಪಾಯಿ ದಂಗೆ (೧೮೫೭) ಯ ಕಾಲದಲ್ಲಿ ಪೂನಾ ಡೆಕ್ಕನ್ ಕಾಲೇಜಿನ ಮುಖ್ಯಾಧ್ಯಾಪಕರಾಗಿದ್ದರು.

ಪು. ೧೦೩. ಪ್ಯೂರಿಟನ್ ಪಂಗಡ—(೮೩೯. 'ಯೇಸುಕ್ರಿಸ್ತ' ನೋಡಿ)

ವೆಂಟ್ನರ್, ಬ್ರೈಟನ್, ಪು. ೧೦೫—ಈಸ್ಥಳಗಳಲ್ಲಿನ ಊಟೆಯ ಜಲವನ್ನು ಪಾನಮಾಡುವುದು ಆರೋಗ್ಯಕರವೆಂದೆಣಿಸಲ್ಪಡುತ್ತದೆ. ಆದುದರಿಂದ ಆರೋಗ್ಯಲಾಭಾರ್ಥಿಗಳು ಅಲ್ಲಿಗೆ ವಿಶೇಷವಾಗಿ ಹೋಗುತ್ತಾರೆ.

ಪು. ೧೦೫. 'ಫೂಲ್ಸ್‌ಕ್ಯಾಪ್'—ಕಾಗದಗಳಲ್ಲಿ ಬೇರೆಬೇರೆ ಪರಿಮಾಣವುಳ್ಳವುಗಳಿಗೆ ಬೇರೆಬೇರೆ ಹೆಸರುಂಟು. ಅಂತಹ ಹೆಸರುಗಳಲ್ಲಿ ಇದೊಂದು. ಈ ಕಾಗದದ ಒಂದು ಥಾನಿನ ಅಳತೆ:

ಉದ್ದ, ೧೩ ಅಂಗುಲ; ಅಗಲ, ೮ ಅಂಗುಲ.

ಪು. ೧೦೬. ಅಡಿಸನ್—ಕಾಲ: ೧೬೭೨—೧೭೧೯. ಪ್ರಸಿದ್ಧ ಆಂಗ್ಲ ಲೇಖಕ. ಈತನ ಶೈಲಿಯು ಸರಳವಾದುದೂ ಶುದ್ಧವಾದುದೂ ಎಂದು ಆಂಗ್ಲ ಸಾಹಿತ್ಯದಲ್ಲಿ ಹೆಸರುವಾಸಿಯಾಗಿದೆ. ಈತನು ಬರೆವಣಿಗೆಯಲ್ಲಿ ನಿಪುಣನಾಗಿದ್ದರೂ ಈತನಲ್ಲಿ ವಾಕ್ಪಟುತ್ವವಿರಲಿಲ್ಲ.

**ಮ್ಯಾಡಮ್ ಬ್ಲವೆಟ್ಸ್ಕಿ :** (ಪು. ೧೧೮

ಇವರು ಕರ್ನಲ್ ಆಲ್ಕಾಟರೊಡನೆ ೧೮೭೫ರಲ್ಲಿ ಬ್ರಹ್ಮವಿದ್ಯಾ ಸಮಾಜ (ಥಿಯಾಸಾಫಿಕಲ್ ಸೊಸೈಟಿ) ವನ್ನು ಸ್ಥಾಪಿಸಿದರು.

ಈ ಸಮಾಜವು ಪ್ರಪಂಚದಲ್ಲೆಲ್ಲಾ ಹರಡಿಕೊಂಡಿದೆ. ಡಾ|| ಆನ್ನೀ ಬೆಸಂಟರೇ ಈಗ ಇದರ ಅಧ್ಯಕ್ಷರು. ಸಕಲ ಧರ್ಮಗಳ ಮುಖ್ಯ ತತ್ವಗಳೂ ಒಂದೇ ಎಂಬುದೇ ಈ ಸಮಾಜದ ತಳಹದಿ.

**ಆನ್ನೀ ಬೆಸಂಟ್ (೧೮೪೭— ) :** (ಪು. ೧೧೮)

ಐರೋಪ್ಯರಾಗಿದ್ದಾಗ್ಯೂ ಹಿಂದುವೆಂದೆನಿಸಿಕೊಂಡು ಹಿಂದೂಸ್ಥಾನದ ಸಾಮಾಜಿಕ, ನೈತಿಕ, ರಾಜಕೀಯ ಏಳಿಗೆಗಾಗಿ ೪೦ ವರ್ಷಗಳಾಗಿ ಎಡೆಬಿಡದೆ ಸಾಹಸಪಡುತ್ತಿರುವರಿವರು. ಈ ವಯಸ್ಸಿನಲ್ಲಿಯೂ ಇವರ ಸಾಹಸೋದ್ಯಮಗಳನ್ನು ಕಂಡರೆ ಅದ್ಭುತವೆಂದೇ ಹೇಳಬೇಕು. ೧೯೧೭ ರಲ್ಲಿ ಕಲಿಕತ್ತೆಯಲ್ಲಿ ನಡೆದ ರಾಷ್ಟ್ರ ಮಹಾಸಭೆಯ ಅಧ್ಯಕ್ಷಿಣಿಯಾಗಿ

ದ್ದರು. ಕಾಶೀ ವಿಶ್ವವಿದ್ಯಾನಿಲಯವನ್ನೇರ್ಪಡಿಸುವ ಕೆಲಸದಲ್ಲಿ ಇವರ ಸಹಾಯವು ಚಿರಸ್ಮರಣೀಯವು.

## ಕಾರ್ಲೈಲ್ : (ಪು. ೧೨೦)

(ಕಾಲ: ಕ್ರಿ. ಶ. ೧೭೯೫—೧೮೮೧). ಈತನು ಹಿಂದಿನ ಶತಮಾನದಲ್ಲಿ ಬಾಳಿದ ಪ್ರಸಿದ್ಧನಾದ ಲೇಖಕ. ಆಸೆಗಳ ನಿರ್ಮೂಲವೇ ಮೋಕ್ಷಕ್ಕೆ ದಾರಿಯೆಂದು ಸಾರಿದನಿವನು. ಈತನಿಗೆ ಐಶ್ವರ್ಯದ, ಅಧಿಕಾರದ ಲಕ್ಷ್ಯವಿರಲಿಲ್ಲ. ಈತನು ಕಠೋರಸತ್ಯವ್ರತಿ. ಈತನ ದೃಷ್ಟಿಯಲ್ಲಿ ಮಹಾಪುರುಷರ ಚರಿತ್ರೆಯೇ ಪ್ರಪಂಚದ ಚರಿತ್ರೆ; ಮಹಾಪುರುಷರು ದೇವಾಂಶಸಂಭೂತರು ; ಅವರ ಮಾರ್ಗವನ್ನನುಸರಿಸುವುದರಲ್ಲಿಯೇ ಮನುಷ್ಯಸಾಮಾನ್ಯನಿಗೆ ಮುಕ್ತಿ. ಈ ಅಭಿಪ್ರಾಯಗಳನ್ನೆಲ್ಲಾ ಪ್ರತಿಪಾದಿಸಿ ಈತನು 'ಹೀರೋಸ್ ಅಂಡ್ ಹೀರೋವರ್ಷಿಪ್'(ಮಹಾಪುರುಷರು ಮತ್ತು ಅವರ ಪೂಜೆ) ಎಂಬ ಪುಸ್ತಕವನ್ನು ಬರೆದನು. ಇದಲ್ಲದೆ ಈತನು ಚರಿತ್ರೆಗೆ ಸಂಬಂಧಪಟ್ಟ ಇತರ ಮಹತ್ವದ ಪುಸ್ತಕಗಳನ್ನು ಬರೆದಿದ್ದಾನೆ. ಈತನ ಬರವಣಿಗೆಯೆಲ್ಲಾ ಉಚ್ಚಭಾವಗಳಿಂದಲೂ ಸ್ಫೂರ್ತಿಯಿಂದಲೂ ತುಂಬಿತುಳುಕುತ್ತಿದೆ.

ಮೇಲೆ ಹೇಳಿರುವ ಮಹಾಪುರುಷರ ಮೇಲಿನ ಪುಸ್ತಕದಲ್ಲಿ ಈತನು ಮಹಮ್ಮದ್ ಪೈಗಂಬರರ ಜೀವನಚರಿತ್ರೆಯನ್ನೂ ಅವರ ಸಂದೇಶವನ್ನೂ ವಿವರಿಸಿದ್ದಾನೆ. ಮಹಮ್ಮದರನ್ನು ಕಂಡರೆ ಈತನಿಗೆ ಬಹಳ ಮೆಚ್ಚಿಗೆ. ಗಾಂಧೀಜಿಯವರಿಗೆ ಈ ಪುಸ್ತಕದಿಂದಲೇ ಮಹಮ್ಮದರ ಮಹತ್ವ, ಶೌರ್ಯ ಮತ್ತು ತಪಶ್ಚರ್ಯ ಇವುಗಳ ವಿಚಾರವಾಗಿ ಪ್ರಥಮ ಜ್ಞಾನವುಂಟಾದುದು.

## ಮಹಮ್ಮದ್ ಪೈಗಂಬರ್ : (ಪು. ೧೨೦)

(ಕ್ರಿ. ಶ. ೫೭೦—೬೩೨) ಇಸ್ಲಾಂಮತ ಸ್ಥಾಪಕ.

ಈತನು ದೊಡ್ಡ ಮನೆತನದಲ್ಲಿ ಹುಟ್ಟಿದನು. ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡುದರಿಂದ ಒಬ್ಬ ಚಿಕ್ಕಪ್ಪನ ಪೋಷಣೆಯ

ಲ್ಲಿದ್ದು ಮಕ್ಕಾಪಟ್ಟಣದಿಂದ ಡಮಾಸ್ಕಸ್ ನಗರಕ್ಕೆ ವ್ಯಾಪಾರದ ಸಲುವಾಗಿ ಅನೇಕಸಲ ಪ್ರಯಾಣಮಾಡಿ ಈ ಸಂಚಾರದಲ್ಲಿ ಸುತ್ತಮುತ್ತಲೂ ಅರೆನಾಗರಿಕರಾಗಿ ಚದರಿರುವ ಅರಬ್ಬೀಜನರ ಪರಿಸ್ಥಿತಿಯನ್ನು ತಿಳಿದುಕೊಂಡು ಅವರನ್ನೆಲ್ಲಾ ಒಂದೇಮತದ ಮೂಲಕ ಒಂದುಗೂಡಿಸಬೇಕೆಂದು ಸಂಕಲ್ಪಿಸಿದನು. ಮಕ್ಕಾದ ಬಳಿಯಲ್ಲಿ ಒಂದು ಗುಹೆಯಲ್ಲಿ ಈಸಾಯಿ ಮತ್ತು ಯೆಹೂದ್ಯ ಪಂಡಿತರಿಂದ ಧರ್ಮಜ್ಞಾನವನ್ನು ಸಂಪಾದಿಸಿ ಧ್ಯಾನದಲ್ಲಿ ಕೆಲವು ಕಾಲವನ್ನು ಕಳೆದನು. ತರುವಾಯ ತನ್ನ ಮತವನ್ನು ಜನರಿಗೆ ಬೋಧಿಸಲುಪಕ್ರಮಿಸಿದನು. ಕ್ಷಿಪ್ರದಲ್ಲಿಯೇ ಈತನ ಅನುಯಾಯಿಗಳಿಗೂ ವಿರೋಧಿಗಳಿಗೂ ಜಗಳವಾಗಿ ಈತನು ಮದೀನಕ್ಕೆ ಕ್ರಿ. ಶ. ೬೨೨ ರಲ್ಲಿ ಓಡಿಹೋದನು. ಹಿಜರಿ ಶಕವು ಅಂದಿನಿಂದಲೇ ಮೊದಲು. ಆಮೇಲೆ ಬಲವನ್ನು ಕೂಡಿಸಿಕೊಂಡು ರಾಜ್ಯಾಧಿಪತ್ಯವನ್ನು ಹೂಡಿ ಮತಪ್ರಸಾರ ಮಾಡಿದನು.

ದೇವರೊಬ್ಬನೇ; ವಿಗ್ರಹಾರಾಧನೆಯು ಕೂಡದು; ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು; ಮದ್ಯವನ್ನು ಸೇವಿಸಬಾರದು; ಇವು ಈ ಮತದ ಮುಖ್ಯತತ್ವಗಳಲ್ಲಿ ಕೆಲವಾಗಿವೆ.

ಈತನು ಅರಬರನ್ನು ನಾಗರಿಕ ಜನಾಂಗವನ್ನಾಗಿ ಮಾಡಿದನು. ಸ್ತ್ರೀಯರ ಪರಿಸ್ಥಿತಿಯನ್ನು ಬಹುಮಟ್ಟಿಗೆ ಉತ್ತಮಗೊಳಿಸಿ ಅವರಿಗೆ ಆಸ್ತಿಯಮೇಲೆ ಅಧಿಕಾರವನ್ನು ಕೊಟ್ಟನು. ಈತನ ಮತವು ಪ್ರಪಂಚದಲ್ಲಿ ಸರ್ವಸಮತೆಯು ಹರಡಲೊಂದು ಪ್ರಬಲಶಕ್ತಿಯಾಯಿತು.

'ಕುರಾನ್' ಎಂಬುದು ಮುಸಲ್ಮಾನರ ವೇದ. ಮುಹಮ್ಮದನು ದೇವರ ಪ್ರೇರಣೆಯಿಂದ ಜನರಿಗೆ ಬೋಧಿಸಿದ ತತ್ವಗಳು ಇದರಲ್ಲಿವೆ. ಇದು ಅರಬ್ಬೀ ಭಾಷೆಯಲ್ಲಿ ಬರೆಯಲ್ಪಟ್ಟಿದೆ.

## ಚಾರ್ಲ್ಸ್ ಬ್ರ್ಯಾಡ್‌ಲಾ : (ಪು. ೧೨೦)

ಈತನು ಒಬ್ಬ ಪ್ರಸಿದ್ಧ ನಾಸ್ತಿಕನು. ಈತನಲ್ಲಿ ಕೂಲಿಕೆಲಸದವರಿಗೆ ಬಹಳ ವಿಶ್ವಾಸವೂ ಸಕಲ ಸಂಘದವರಿಗೂ ಬಹಳ ಗೌರವವೂ ಇದ್ದಿತು. ೧೮೮೦ ರಲ್ಲಿ ನಾರ್‌ಥಾಂಪ್ಟನ್ ಜಿಲ್ಲೆಯವರು ಈತನನ್ನು

ಪ್ರಜಾಪಕ್ಷಸಭೆಗೆ ಸದಸ್ಯನನ್ನಾಗಿ ಚುನಾಯಿಸಿದರು. ಆದರೆ ಈತನು ನಾಸ್ತಿಕನಾದುದರಿಂದ ಕಟ್ಟಳೆಪ್ರಕಾರ ದೇವರ ಸಾಕ್ಷಿಯಾಗಿ ಪ್ರಮಾಣ ಮಾಡಲೊಪ್ಪಲಿಲ್ಲ. ಆದುದರಿಂದ ಈತನನ್ನು ಆ ಸಭೆಗೆ ಸೇರಿಸದೆ ಹೋದರು. ಆದರೆ ನಾರ್‌ಥಾಂಪ್ಟನ್ ಜಿಲ್ಲೆಯವರು ಇವನನ್ನೇ ಪುನಃಪುನಃ ತಮ್ಮ ಪ್ರತಿನಿಧಿಯಾಗಿ ಚುನಾಯಿಸಿದುದರಿಂದ ಸದಸ್ಯರು ಧರ್ಮಸಾಕ್ಷಿಯಾಗಿ ಪ್ರಮಾಣಮಾಡಿದರೆ ಸಾಕೆಂದು ತೀರ್ಮಾನವಾಗಿ ಈತನು ಸಭೆಗೆ ಸೇರಿಸಲ್ಪಟ್ಟನು. ಈತನು 'ವಿಗ್ರಹಭೇದಕ' ನೆಂಬ ಹೆಸರಿಟ್ಟುಕೊಂಡು ಬರೆಯುತ್ತಿದ್ದನು. ಶ್ರೀಮತಿ ಆನಿಬೆಸಂಟಮ್ಮನವರೂ ಈತನೂ ಆಗ ಒಟ್ಟಿಗೆ ಕೆಲಸಮಾಡುತ್ತಿದ್ದರು. ಈ ಲೋಕದ ಧರ್ಮವೇ ವಾಸ್ತವವೆಂದೂ ಪರಲೋಕವೆಂಬುದಿಲ್ಲವೆಂದೂ ಈತನ ಅಭಿಮತ.

ಪು. ೧೧೩. 'ನಿರ್ಬಲ ಕೇ ಬಲ ರಾಮ್' = 'ನಿರ್ಬಲರಿಗೆ ರಾಮನೇ ಆಶ್ರಯ'. ಇದು ಸೂರದಾಸರ ಪ್ರಸಿದ್ಧ ಕೀರ್ತನೆಯ ಪಲ್ಲವಿ.

## ಮಹರ್ಷಿ ದೇವೇಂದ್ರನಾಥ ಠಾಕೂರರು : (ಪು. ೧೨೯)

ಇವರು ನಮ್ಮ ಭಾರತ ಕವಿಶ್ರೇಷ್ಠರಾದ ರವೀಂದ್ರರ ತಂದೆ. ಇವರು ಧ್ಯಾನಾಸಕ್ತರಾಗಿದ್ದ ಸ್ಥಳಕ್ಕೇ ಶಾಂತಿನಿಕೇತನವೆಂದು ಈಗ ಹೆಸರು. ಬಂಗಾಳದಲ್ಲಿ ಇವರ ಹೆಸರನ್ನು ಕೇಳದವನಿಲ್ಲ. ಇವರು ರಾಜಾ ರಾಮಮೋಹನರಾಯರ ಮುಖ್ಯಶಿಷ್ಯರಲ್ಲೊಬ್ಬರು.

## ಡೆಕ್ : (ಪು. ೧೩೧)

ಹಡಗಿನಲ್ಲಿ ಕ್ಯಾಬಿನ್ (ಎಂದರೆ ಒಂದು ಎರಡನೆಯ ತರತಿಯ ಪ್ರಯಾಣಿಕರ ಬಿಡಾರಕ್ಕೆ ಮಾಡಿರುವ ಕೊಠಡಿ)ಗಳ ಸುತ್ತಲೂ ಚಾವಣಿಯ ಕೆಳಗೆ ತಿರುಗಾಡಲು ಇರುವ ಸ್ಥಳಕ್ಕೆ 'ಡೆಕ್' ಎಂದು ಹೆಸರು. ಇಲ್ಲಿ ಗಾಳಿ ಮಳೆಗಳಿಂದ ಮುಚ್ಚುಮರೆಗೆ ಅವಕಾಶವಿಲ್ಲ. ಪ್ರಯಾಣಿಕರು ತಮಗೆ ತಮ್ಮ ಕೊಠಡಿಯಲ್ಲಿ ಬೇಸರವಾದಾಗ ಹವೆಯು ಚೆನ್ನಾಗಿದ್ದಾಗ ಈ 'ಡೆಕ್' ಎಂಬುವ ಸ್ಥಳದಲ್ಲಿ ಕುರ್ಚಿಗಳಮೇಲೆ ಕುಳಿತು

ಕಾಲವನ್ನು ಕಳೆಯುವರು. ಈ ಸ್ಥಳವೇ ಮೂರನೆಯ ತರಗತಿಯ ಪ್ರಯಾಣಿಕರ ವಾಸಸ್ಥಳ. ಇವರು ಮಳೆಗೂ ಗಾಳಿಗೂ ಬಿಸಿಲಿಗೂ ಎಲ್ಲಕ್ಕೂ ಸಿದ್ಧರಾಗಿರಬೇಕು. ಇಲ್ಲಿ ಪ್ರಯಾಣಮಾಡುವ ಪ್ರಯಾಣಿಕರಿಗಾಗುವ ತೊಂದರೆಗಳನ್ನು ಹೇಳಲು ಸಾಧ್ಯವಿಲ್ಲ.

## ಜಾನ್ ಬರ್ನ್ಸ್: (ಪು. ೧೩೨)

ಈತನು ಇಂಗ್ಲೆಂಡಿನ ಕಾರ್ಮಿಕ (ಕೂಲಿಗಳ) ಪಕ್ಷದ ಮುಂದಾಳುಗಳಲ್ಲಿ ಒಬ್ಬನಾಗಿಯೂ ಆ ಪಕ್ಷದವರಲ್ಲಿ ಪ್ರಜಾಪಕ್ಷಸಭೆ (ಹೌಸ್ ಆಫ್ ಕಾಮನ್ಸಿ ಗೆ ಸದಸ್ಯನಾಗಿ ಮೊಟ್ಟಮೊದಲು ಚುನಾಯಿಸಲ್ಪಟ್ಟವರಲ್ಲಿ ಒಬ್ಬನಾಗಿಯೂ ಇದ್ದನು.

## ಡಿಸ್ರೇಲಿ: (ಪು. ೧೩೨)

(ಕ್ರಿ. ಶ. ೧೮೦೪–೮೧). ಈತನು ಮೊದಲು ಕಾದಂಬರಿಗಳನ್ನು ಬರೆದು ಆಮೇಲೆ ಪ್ರಾಚೀನತಾಪ್ರೇಮಿ (ಕನ್ಸರ್ವೆಟರ್) ಪಕ್ಷದ ಪರವಾಗಿ ಪಾರ್ಲಿಮೆಂಟನ್ನು ಪ್ರವೇಶಿಸಿ ಕಡೆಗೆ ಪ್ರಧಾನಮಂತ್ರಿಯಾಗಿ ಪ್ರಸಿದ್ಧನಾದನು. ಈತನು ಯೆಹೂದ್ಯಮತಕ್ಕೆ ಸೇರಿದವನು.

## ಕಾರ್ಡಿನಲ್ ಮ್ಯಾನಿಂಗ್: (ಪು. ೧೩೨)

ಈ ಆಂಗ್ಲೇಯ ಮಹನೀಯನು ೧೮೦೮ರಲ್ಲಿ ಹುಟ್ಟಿದನು. ಈಸಾಯಿ ಮತಸ್ಥರಲ್ಲಿ, ಕ್ಯಾಥೊಲಿಕರು, ಪ್ರಾಟೆಸ್ಟೆಂಟರು ಮತ್ತು ಆಂಗ್ಲೇಯ ಚರ್ಚಿನವರು ಎಂಬ ಮೂರು ಶಾಖೆಗಳುಂಟು. ಈತನು ೧೮೫೧ರಲ್ಲಿ ಆಂಗ್ಲೇಯ ಚರ್ಚನ್ನು ಬಿಟ್ಟು ಕ್ಯಾಥೊಲಿಕ್ ಚರ್ಚನ್ನು ಸೇರಿ ಆ ಮತವಿಚಾರವಾಗಿ ಅನೇಕ ಗ್ರಂಥಗಳನ್ನು ಬರೆದು ಕಾರ್ಡಿನಲ್ ಎಂಬ ಬಿರುದನ್ನು ೧೮೭೫ರಲ್ಲಿ ಪಡೆದನು. ಜನಾಂಗದ ಅಯುಕ್ತವಾದ ಸಂಪ್ರದಾಯಗಳನ್ನೂ ಮದ್ಯಪಾನ ಮುಂತಾದ ದುರಾಚಾರಗಳನ್ನೂ ಹೋಗಲಾಡಿಸಲು ಬಹಳ ಸಾಹಸಪಟ್ಟನು.

**ರೋಮನ್ ಲಾ** . (ಪು. ೧೪೧)

ಪುರಾತನ ರೋಮನರ ಧರ್ಮಶಾಸ್ತ್ರ. ಇದನ್ನು ಜಸ್ಟಿನಿಯನ್ ಚಕ್ರವರ್ತಿಯು (ಪು. ೧೪೨) ಸಂಗ್ರಹಿಸಿ ಪುಸ್ತಕರೂಪಕ್ಕೆ ತಂದನು. ರೋಮನರು ತಾವು ಗೆದ್ದ ದೇಶಗಳಲ್ಲೆಲ್ಲಾ ತಮ್ಮ ಕಾನೂನುಗಳನ್ನು ಪ್ರಚಾರಕ್ಕೆ ತಂದರು. ಇಂದುಕೂಡ ಬಹುತರವಾಗಿ ಯೂರೋಪಿನ ದೇಶಗಳಲ್ಲಿನ ಕಾನೂನುಗಳಿಗೆಲ್ಲಾ ರೋಮನ್ ಧರ್ಮಶಾಸ್ತ್ರವೇ ತಳಹದಿಯಾಗಿದೆ. ದಕ್ಷಿಣ ಆಫ್ರಿಕದಲ್ಲಿ ಹಾಲೆಂಡ್ ದೇಶದ ಜನರು (ಡಚರು) ಹೋಗಿ ನೆಲೆಸುವಾಗ ಅವರು ತಮ್ಮೊಡನೆ ತಮ್ಮ ಕಾನೂನುಗಳನ್ನೂ (ರೋಮನ್ ಡಚ್ ಲಾ) (ಪು. ೧೪೨) ತೆಗೆದುಕೊಂಡುಹೋದರು. ಅಲ್ಲಿ ಇನ್ನೇ ಪ್ರಚಾರದಲ್ಲಿದೆ.

ಇಂಗ್ಲೆಂಡಿನ ಕಾನೂನುಗಳಲ್ಲಿ ರೋಮನ್ ಧರ್ಮಶಾಸ್ತ್ರದ ಪ್ರಭಾವವು ಉಳಿದ ಐರೋಪ್ಯದೇಶಗಳಲ್ಲಿರುವುದಕ್ಕಿಂತ ಕಡಿಮೆ. ಅಲ್ಲಿಯ ಕಾನೂನುಗಳಲ್ಲಿ ಹೆಚ್ಚುಭಾಗವು ಸಂಗ್ರಂಥಿಸಲ್ಪಟ್ಟಿಲ್ಲ. ಅವುಗಳು ತೀರ್ಮಾನಗಳಲ್ಲಿ ಅಡಕವಾಗಿರುವ ತತ್ವಗಳಿಂದಲೇ ಸಿದ್ಧರವಾಗಬೇಕು. ಇಂಗ್ಲೆಂಡಿನ ಕಾನೂನಿನ ಈ ಭಾಗಕ್ಕೆ "ಕಾಮನ್‌ಲಾ" (ಪು. ೧೪೧) ಎಂದು ಹೆಸರು. ಇದು ಬಹು ರೂಢಿಗೆ ಬಂದು ಜನರಿಗೆ ಸಂಪೂರ್ಣ ನ್ಯಾಯವನ್ನು ಮಾಡಲಾರದಷ್ಟು ನಿಯಮಬದ್ಧವಾಯಿತು. ಈ ಕುಂದನ್ನು ತಿದ್ದುವುದಕ್ಕಾಗಿಯೇ 'ಈಕ್ವಿಟಿ' (ಪು. ೧೪೩) ನ್ಯಾಯಸ್ಥಾನದ ನಿರ್ಮಾಣವಾಯಿತು. ಪ್ರಕೃತಿಧರ್ಮಕ್ಕನುಸಾರವಾಗಿ ನ್ಯಾಯಾನ್ಯಾಯಗಳನ್ನು ನಿರ್ಣಯಿಸುವುದೇ 'ಈಕ್ವಿಟಿ'ಯ ಮುಖ್ಯೋದ್ದೇಶ

**ಬದ್ರುದ್ದೀನ್ ತಯ್ಯಬ್ಜೀ :** (ಪು. ೧೪೬)

ರಾಷ್ಟ್ರಮಹಾಸಭೆಯ ಪೂರ್ವ ಇತಿಹಾಸದಲ್ಲಿ ಸಾಮಾನ್ಯವಾಗಿ ನಮ್ಮ ಮಹಮ್ಮದೀಯ ಸೋದರರು ಸಂಶಯಮನಸ್ಕರಾಗಿ ದೂರನಿಂತಿದ್ದ ಸಮಯದಲ್ಲಿ ಈ ಸಭೆಯನ್ನು ಸೇರಿದ ಮಹಮ್ಮದೀಯರಲ್ಲಿ ತಯ್ಯಬ್ಜಿಯವರು ಅಗ್ರಗಣ್ಯರು. ಇವರು ಮದರಾಸಿನಲ್ಲಿ ನಡೆದ ಮೂರನೆಯ ರಾಷ್ಟ್ರಮಹಾಸಭೆಯ ಅಧ್ಯಕ್ಷರಾಗಿದ್ದರು.

ಇವರು ಮುಂಬಯಿಯಲ್ಲಿ ಪ್ರಸಿದ್ಧ ವಕೀಲರಾಗಿದ್ದು ಆಮೇಲೆ ಅಲ್ಲಿಯ ಹೈಕೋರ್ಟಿನ ಜಡ್ಜಿಗಳಾದರು.

**ಸರ್ ಫಿರೋಜ್ ಷಹಾ ಮೆಹತಾ:** (ಪು ೧೪೭)

ಇವರು ಪಾರಸೀಯರು. ರಾಷ್ಟ್ರ ಮಹಾ ಸಭೆಯ ಇತಿಹಾಸದ ಪೂರ್ವಾರ್ಧದಲ್ಲಿ ಇವರಿಗಿಂತಲೂ ಆ ಸಭೆಯ ಯಶಸ್ಸಿಗಾಗಿ ಕೆಲಸಮಾಡಿದವರಿರಲಿಲ್ಲ. ಇವರಿಗೆ "ಮುಂಬಯಿಯ ಸರಕೇಸರಿ" ಮತ್ತು "ಮುಂಬಯಿ ಅನಭಿಷಿಕ್ತ ನೃಪ" ಎಂಬ ಹೆಸರುಗಳಿದ್ದುವು. ಬಹುಕಾಲ ಮುಂಬಯಿ ಪೌರಸಭಾಧ್ಯಕ್ಷರಾಗಿದ್ದರು. ೧೮೯೦ರಲ್ಲಿ ಕಲಕತ್ತೆಯಲ್ಲಿ ನಡೆದ ಮಹಾ ಸಭೆಯಲ್ಲಿ ಇವರು ಅಧ್ಯಕ್ಷರಾಗಿದ್ದರು.



# ಅನುಕ್ರಮಣಿಕೆ

